

ಬಸವೇಶ್ವರ - ಪ್ಲ್ಯಾಸ್ಟರ್ ಆಫ್ ಪ್ಯಾರಿಸ್ ಕಲಾಕೃತಿ



ಗಣೇಶ - ಕಲ್ಲಿನ ಕೆತ್ತನೆ

# ಶಿಲ್ಪಕಲಾವಿದ ಮಹೇಶಕುಮಾರ ಡಿ. ತಳವಾರ



ಗೌತಮ ಬುದ್ಧ - ಫೈಬರ್ ಕಲಾಕೃತಿ

ಶಿಲ್ಪ ಕಲಾವಿದ ಮಹೇಶಕುಮಾರ ಡಿ. ತಳವಾರ ಅವರು ಗುಲಬರ್ಗಾ ಜಿಲ್ಲೆಯ ಚಿಂಚೋಳಿ ತಾಲ್ಲೂಕಿನ ಮಾರಪಳ್ಳಿ ಗ್ರಾಮದವರು. ಪ್ರಾಥಮಿಕ ಹಂತದಲ್ಲೇ ಚಿತ್ರಕಲೆಯಲ್ಲಿ ಆಸಕ್ತಿ. ಬಿ. ಬಿ. ಡಿ. ಆರ್ಟ್ಸ್ ಹಾಗೂ ಆರ್ಟ್ ಮಾಸ್ಟರ್ ಪದವೀಧರರು. ಬೆಂಗಳೂರಿನ ಜೋಗರದೊಡ್ಡಿಯ ಕೆ.ಪಿ.ಜೆ. ಪ್ರಭು ಕರಕುಶಲ ತರಬೇತಿ ಕೇಂದ್ರದಲ್ಲಿ ಶಿಲ್ಪಕಲೆಯಲ್ಲಿ ಪಳಗಿದ ಮಹೇಶಕುಮಾರ ಗುಲಬರ್ಗಾದಲ್ಲಿ ಕೌಶಲ್ಯ ಶಿಲ್ಪ ಕಲಾಕೇಂದ್ರ ಪ್ರಾರಂಭಿಸಿದ್ದಾರೆ. ಸಾಂಪ್ರದಾಯಿಕ ಶೈಲಿಯ ಶಿಲ್ಪಗಳನ್ನು ಸುಂದರವಾಗಿ ಕೆತ್ತಿದ್ದಾರೆ. ಮರದ ಕೆತ್ತನೆ, ಕಲ್ಲಿನ ಕೆತ್ತನೆ, ಫೈಬರ್ ಮತ್ತು ಪ್ಲ್ಯಾಸ್ಟರ್ ಆಫ್ ಪ್ಯಾರಿಸ್ ಮಾಧ್ಯಮಗಳಲ್ಲಿ ಇವರ ಕಲಾಕೃಷಿ ಮುನ್ನಡೆಯುತ್ತಿದೆ.

*ಲೇಖನ :* **ನಾರಾಯಣ ಎಂ. ಜೋಶಿ**
*ಕಲಾವಿದರು, ಛಾಯಾಚಿತ್ರಕಾರರು, ಬರಹಗಾರರು*
*ಮನೆ ನಂ. ೨-೮೨೬ ಎಂ. ಆರ್. ಎಂ. ಸಿ. ಎದುರುಗಡೆ, ಸೇಡಂ ರಸ್ತೆ, ಗುಲಬರ್ಗಾ - ೫೮೫ ೧೦೫*



ಆಂಜನೇಯ - ಮರದ ಕೆತ್ತನೆ

ಹ್ಯಾಪಿ ಮ್ಯಾನ್ - ಕಲ್ಲಿನ ಕೆತ್ತನೆ





ಶ್ರೀ ಗಣೇಶ - ಮರದ ಕೆತ್ತನೆ

# ಹೊಸತು

ನೆಮ್ಮದಿಯ ನಾಳೆ ನಮ್ಮದು


## ಒಳಗೇನಿದೆ ...




ಚಿತ್ರಗಳು : ಮೋನಪ್ಪ, ಶ್ರೀಹರಿ, ಕೆದಿಲಾಯ, ಬಿ. ವಿಲ್ಸನ್, ಜಿ. ಎಂ. ಬೊಮ್ನಳ್ಳಿ

ಮುಖಚಿತ್ರ : ಬೇಬಿ ರಾಹುಲ್. ವರ್ಣಚಿತ್ರ : ಡಾ|| ಪ್ರಿಯಾ

ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

**ಈ** ಬಾರಿಯ ಗಾಂಧಿ ಜಯಂತಿಯಂದು ಗಾಂಧೀಜಿಯನ್ನು ನಿರ್ನಾಮ ಮಾಡುವುದು ಹೇಗೆ ಎಂಬುದನ್ನು ಕಳೆದ ತಿಂಗಳಿಂದ ನಮ್ಮ ರಾಜ್ಯವು ಚರ್ಚಿಸುತ್ತಿದೆ. ಈ ತಿಂಗಳು ನಿರೀಕ್ಷಿತ ಘಟನೆ ಜರುಗುವುದೋ ಇಲ್ಲವೋ ಎಂಬುದು ಕಾತುರತೆಯ ವಿಷಯವಾಗಿ, ಈ ತಿಂಗಳು ಪೂರ್ತಿ ಅದೇ ಭಾರತೀಯ ಜನತಾ ಪಕ್ಷ, ದೇವೇಗೌಡ ಪಕ್ಷ ಮತ್ತು ಕಾಂಗ್ರೆಸ್ ಪಕ್ಷಗಳಿಗೆ ಆಹಾರವಾಗಿದೆ. ಎಷ್ಟು ಮಂದಿ ರಾಜಕಾರಣಿಗಳು ಮನೋವಿಜ್ಞಾನಿಗಳ ಬಳಿ ತೆರಳಿ ಸಾಂತ್ವನ ಪಡೆದರು ಅಥವಾ ಸಕ್ಕರೆ ಕಾಯಿಲೆಗೆ ಔಷಧಿ ದ್ವಿಗುಣಗೊಳಿಸಿ ಕೊಂಡರೆಂಬುದನ್ನು ಸಂಶೋಧನೆ ಮಾಡಲು ಯಾರಾದರೂ ''ಖ್ಯಾತ ಸಂಶೋಧಕರು'' ಬೇಕು. ಇದೆಲ್ಲಾ ಜರುಗುತ್ತಿರುವುದು ಈ ರಾಜಕೀಯ ಪಕ್ಷಗಳು ರಾಜ್ಯದ ಜನರೊಡನೆ ಮಾಡಿಕೊಂಡ ಕರಾರನ್ನು ಕಸದ ಕಡ್ಡಿಯಂತೆ ಕಾಣುವುದರಿಂದ. ಅದಕ್ಕೇ ಪಂಗನಾಮ ಆಗಿರುವಾಗ ಇನ್ನು ಕುಮಾರಸ್ವಾಮಿ ಯಡಿಯೂರಪ್ಪ ನಡುವಿನ ಕರಾರಿಗೆ ಎಂತಹ ಪ್ರಾಮುಖ್ಯ ! ಯಾರಿಗೇ ಇಷ್ಟವಾಗಲಿ ಅಥವಾ ಕಷ್ಟವಾಗಲಿ ಒಮ್ಮೆ ಸಂಧಾನದ ಮುಖಾಂತರ ಮಾಡಿಕೊಂಡ ಕರಾರಿಗೆ ಬದ್ಧರಾಗಬೇಕಾದ್ದು ಕನಿಷ್ಠ ಪ್ರಮಾಣದ ಪ್ರಾಮಾಣಿಕತೆ. ಇಲ್ಲದಿದ್ದರೆ ಅದು ಭಾರತ-ಅಮೆರಿಕಾ ಪರಮಾಣು ಒಪ್ಪಂದದಂತೆ ಏಕಪಕ್ಷೀಯವಾಗಿ ಪ್ರಾಬಲ್ಯ ಮತ್ತು ಕುತಂತ್ರಕ್ಕೆ ದಾರಿ ಮಾಡಿಕೊಡುತ್ತದೆ. ಅಂದು ಬೇಕಾದದ್ದು ದೇವೇಗೌಡರಿಗೆ ಇಂದು ಬೇಕಾಗಿಲ್ಲವೆಂದರೆ ಅದು ಅತ್ಯಂತ ಹೀನಾಯವಾದ ಅವಕಾಶ ವಾದಿತನಕ್ಕೆ ಉದಾಹರಣೆಯಾಗುತ್ತದೆ. ಇಂದು ಗದ್ದುಗೆ ಹಿಡಿಯಲು ಈ ಕರಾರು, ನಾಳೆ ಅವರಿಗೆ ಗದ್ದುಗೆ ಬಿಟ್ಟುಕೊಡದಿರಲು ಕರಾರಿನ ರದ್ದತಿ ಎಂಬುದು ಬಹುಶಃ ದೇವೇಗೌಡರಿಗೆ ಮಾತ್ರ ಸಾಧ್ಯ. ರಾಜನಾಥ ಸಿಂಗ್ ಪಕ್ಷದೊಡನೆ ಸಖ್ಯವು ಮುಂದಿನ ಚುನಾವಣೆಗಳಲ್ಲಿ ಕೆಟ್ಟ ಹೊರೆಯಾಗಬಹುದೆಂದು ಈಗ ಕರಾರನ್ನು ಮುರಿಯುವುದು ಚಾಣಾಕ್ಷತನವಿರಬಹುದು, ಆದರೆ ಅದು ಶುದ್ಧ ಮೋಸ. ಇನ್ನೇನೂ ಲಾಭವಿಲ್ಲವೆನಿಸಿದಾಗ ಹಿಂದಿನ ಮಿತ್ರರನ್ನು ತ್ಯಜಿಸುವುದು (ಗೀತೆಯ ಭಾಷೆಯಲ್ಲಿ ಹೇಳುವುದಾದರೆ) ಒಂದು ರೀತಿಯ ಪುನರ್ಜನ್ಮ: ಹರಿದುಹೋದ ಹಳೆಯ ಬಟ್ಟೆಗಳನ್ನು ಬಿಸುಟು ಹೊಸ ಬಟ್ಟೆಗಳನ್ನು ಧರಿಸುವ ಮಾದರಿಯಲ್ಲಿ. ಇದರಿಂದ ಯಾವ ಸಂಕೋಚವೂ ಆಗದಿರುವುದು ವಿಶಿಷ್ಟ ಬಗೆಯ ಧೀರರಿಗೆ ಮಾತ್ರ. ಅತ್ತ ಯಡಿಯೂರಪ್ಪನವರ ಪಕ್ಷದಲ್ಲಿ ಗುಟ್ಟಾಗಿ ಅವರ ಕಾಲೆಳೆಯಲು ಹಿಂಜರಿಯದ ವೀರರಿದ್ದಾರೆ. ನಮ್ಮ ರಾಜಕೀಯ ಸನ್ನಿವೇಶ ನಿಜಕ್ಕೂ ಕನಿಕರಕ್ಕೆ ಪಾತ್ರವಾಗುವಂತಹ ಸಂದರ್ಭ ಇದು. ಅದೇ ಗಾಂಧೀಜಿಗೆ ಗೌರವವೆ ?

ಕೇಂದ್ರದಲ್ಲಿ ಮನಮೋಹನ್ ಸಿಂಗ್ ಅವರಿಗೂ ಕರಾರಿನ ಬಗ್ಗೆಯೇ ತಕರಾರು. ಅಧಿಕಾರಕ್ಕಾಗಿ ಅವರಿಗೆ ಎಡಪಕ್ಷಗಳ ಬೆಂಬಲ ಬೇಕು. ಆದರೆ ಆ ಪಕ್ಷಗಳೊಡನೆ ಮಾಡಿಕೊಂಡ ಕರಾರಿಗೆ ಕಿಮ್ಮತ್ತಿನ ಬೆಲೆ ಇಲ್ಲದಿದ್ದರೂ ಅವರಿಗೆ ಪರವಾಗಿಲ್ಲ. ಕರಾರನ್ನು ಜ್ಞಾಪಿಸಿದರೆ ಮನಮೋಹನ ಸಿಂಗರು ತತ್ತ್ವಶಾಸ್ತ್ರವೇತ್ತರಂತೆ ಉಪದೇಶಾಮೃತ ಸುರಿಸುತ್ತಾರೆ. ಅಮೆರಿಕಾದೊಡನೆ ಅವರು ಮಾಡಿಕೊಂಡಿರುವ ಪರಮಾಣು ಒಪ್ಪಂದವು ದೇಶದ ಘನತೆ-ಗೌರವಗಳನ್ನು ಹರಾಜು ಮಾಡಿದೆ. ನಿಬಂಧ 14ರ ಪ್ರಕಾರ ಅಮೆರಿಕಾ ಸರ್ಕಾರವು ತೀರ್ಮಾನಿಸಿದಾಗ ಅವರು ಮಾರಿರುವ ಇಂಧನ, ಅದರ ಪ್ರತ್ಯುತ್ಪನ್ನಗಳು, ಯಂತ್ರಗಳು, ಇತ್ಯಾದಿಗಳನ್ನು ಹಿಂದಕ್ಕೆ ಪಡೆಯಲು ಅದಕ್ಕೆ ಶಕ್ತಿ ಪ್ರಯೋಗ ಸಹ ಮಾಡಲು ಅವಕಾಶವಿದೆ. ''ನಾವು ಹಿಂದಿರುಗಿಸಬೇಕು'' ಎಂಬುದು ಷರತ್ತಲ್ಲ, ''ಅದನ್ನು ಸೆಳೆಯಲು'' ಅಮೆರಿಕಾಕ್ಕೆ ಅವಕಾಶವಿದೆ ಎಂಬುದು ಷರತ್ತು. ಸಾಮಾನ್ಯ ಕನಿಷ್ಠ ಕಾರ್ಯ ಕ್ರಮವನ್ನು ಕರಾರಿನಂತೆ ಮಾಡಿಕೊಂಡ ಕಾಂಗ್ರೆಸ್ ಪಕ್ಷವು ಅದನ್ನು ಉಲ್ಲಂಘಿಸುತ್ತಿದೆ; ಆದರೆ ಎಡಪಕ್ಷಗಳು ಅದನ್ನು ಬೊಟ್ಟುಮಾಡಿ ತೋರಿಸಿ, ಅದು ಕೂಡದೆಂದರೆ ಹಿಂದೆ ಕರಾರಿಗೆ ಒಪ್ಪಿದ್ದ ಮನಮೋಹನ ಸಿಂಗರು ಈಗ ದೊಡ್ಡದಾಗಿ ಕೋಪ ಪ್ರಕಟಿಸುತ್ತಾರೆ, ''ಬುಷ್ ನನ್ನ ಪರಮ ಮಿತ್ರ'' ಎಂದು ಹಲುಬುತ್ತಾರೆ. ಅಂತಹ ಪಾತಕಿಯ ಸ್ನೇಹ ಬಯಸುವ ಮತ್ತು ಮಾಡುವ ನಮ್ಮ ಪ್ರಧಾನಿಗೆ ಧಿಕ್ಕಾರವಿರಬೇಕು. ''ಲಕ್ಷಗಟ್ಟಲೆ ಜನರನ್ನು ಕೊಂದಿರುವ ಮತ್ತು ಕೊಲ್ಲುತ್ತಿರುವ ಬುಷ್ ನಮ್ಮ ಸ್ನೇಹಿತ'' ಎಂದು ಹೇಳಿ ಕೊಳ್ಳಲು ನಮ್ಮ ದೇಶಕ್ಕೆ ಸಂಕೋಚವಾಗುವುದಿಲ್ಲವೆ ? ಕೇವಲ 37 ವರ್ಷಗಳ ಹಿಂದೆ ನಾವು ಕೊಲ್ಲಿಸಿ ಕೊಳ್ಳುತ್ತಿದ್ದವರ ಪರವಾಗಿದ್ದು ಅಭಿಮಾನದಿಂದ ತಲೆಯೆತ್ತಿ ನಿಂತಿದ್ದೆವು. ಬಂಗ್ಲಾದೇಶ್, ವಿಯೆಟ್‌ನಾಮ್, ಕ್ಯೂಬ, ಕಾಂಬೋಡಿಯ, ಪ್ಯಾಲಿಸ್ಟೈನ್, ಇವೆಲ್ಲಾ ಅದಕ್ಕೆ ನಿದರ್ಶನ. ಈಗ ನಮ್ಮ ದೇಶ ಕೊಲೆಪಾತಕರ ಜೊತೆ ಶಾಮೀಲಾಗುತ್ತಿದೆ, ಎಲ್ಲ ರಾಷ್ಟ್ರಗಳ ಮುಂದೆ ತಲೆ ತಗ್ಗಿಸಬೇಕಾಗುತ್ತಿದೆ. ಬುಷ್ ಭಾರತದ ಸ್ನೇಹಿತ ಎಂದರೂ ಒಂದೇ, ದಾವೂದ್ ಇಬ್ರಾಹಿಂ ಮುಂಬೈನ ಆಪ್ತಮಿತ್ರ ಮತ್ತು ಹಿತಚಿಂತಕ ಎಂದರೂ ಒಂದೇ. ಒಟ್ಟಿನಲ್ಲಿ

೭ನೇ ಪುಟಕ್ಕೆ




ಸಂಪುಟ-೯ ಸಂಚಿಕೆ-೩ ಅಕ್ಟೋಬರ್ ೨೦೦೭

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಸ್. ಪಾರ್ಥಸಾರಥಿ
ಜಿ. ಶ್ರೀನಿವಾಸರಾಜು
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೯೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
**e-mail : navakarnataka@vsnl.com**
**website : www.navakarnatakabooks.com**

## ಪ್ರಧಾನಿಯವರ ಪ್ರಲಾಪಗಳು

**ಸಂಪಾದಕೀಯ**

೧೨೩ ಎಂಬ ಹೆಸರಿನ ಭಾರತ-ಅಮೆರಿಕಾ ಪರಮಾಣು ಸಹಕಾರ ಒಪ್ಪಂದದ ಬಗ್ಗೆ ದೇಶದೆಲ್ಲೆಡೆ ಬಿಸಿಬಿಸಿ ಚರ್ಚೆಗಳು ವಾದವಿವಾದಗಳು ಜರುಗುತ್ತಿರುವ ಬೆನ್ನಲ್ಲೇ ಪ್ರಧಾನಿ ಮನಮೋಹನ ಸಿಂಗ್ ಅವರು ಮಧ್ಯಪ್ರದೇಶದ ರಾಜ್ಯಪಾಲರಾದ ಬಲರಾಮ್ ಜಾಖರ್ ಅವರ ೮೫ನೇ ವರ್ಷದ ಹುಟ್ಟುಹಬ್ಬದ ಸಂದರ್ಭದಲ್ಲಿ ಮಾತನಾಡುತ್ತ ''ನಮ್ಮ ರಾಜಕೀಯ ವ್ಯವಸ್ಥೆಯು ಪ್ರಗತಿ ಸಾಧಿಸುವ ದಿಶೆಯಲ್ಲಿ ಇಲ್ಲಸಲ್ಲದ ಭೂತಪ್ರೇತಗಳನ್ನು ಸೃಷ್ಟಿಸಿಕೊಂಡು ಭವಿಷ್ಯದೆಡೆಗೆ ಹೆಜ್ಜೆಯಿಡಲು ಹಿಂಜರಿಯಬಾರದು'' ಎಂದು ಎಚ್ಚರಿಸಿದ್ದಾರೆ. ಈ ಒಪ್ಪಂದವನ್ನು ವಿರೋಧಿಸುತ್ತಿರುವವರನ್ನು, ಅದರಲ್ಲೂ ಎಡಪಕ್ಷಗಳು ಹಾಗೂ ಪ್ರಜ್ಞಾವಂತ ಜನವಿಭಾಗಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಪರೋಕ್ಷವಾಗಿ ಮಾಡಿರುವ ಅವರ ಟೀಕೆ ಅರ್ಥವಾಗುವಂಥದ್ದೆ. ತಮ್ಮ ಸರ್ಕಾರದ ನೀತಿಗಳನ್ನು ವಿರೋಧಿಸುವವರನ್ನು ಟೀಕಿಸುವುದು ಅವರ ಜನ್ಮಸಿದ್ಧ ಹಕ್ಕು. ಅದಕ್ಕೆ ಯಾರ ಆಕ್ಷೇಪವೂ ಇರಲಾರದು.

ತಾವು ಪ್ರಧಾನಿಯಾದ ಪ್ರಾರಂಭದ ದಿನಗಳಲ್ಲಿ ಮಣಮಣಗುಟ್ಟುತ್ತಿದ್ದ, ಆಗೊಮ್ಮೆ ಈಗೊಮ್ಮೆ ಬಾಯಿಬಿಟ್ಟರೂ ಯಾರಿಗೂ ಅರ್ಥವಾಗದ ರೀತಿಯಲ್ಲಿ ಮಾತನಾಡುತ್ತಿದ್ದ ಮನಮೋಹನರು ಇದೇ ಸಂದರ್ಭದಲ್ಲಿ ''ಯಾವುದೋ ಕಾಲದ ಹಳಸು ಮೌಲ್ಯಗಳಿಗೇ ಅಂಟಿಕೊಂಡಿರುವ ಪಕ್ಷಗಳಿಗೆ ರಾಷ್ಟ್ರದ ಭವಿಷ್ಯದ ಬಗ್ಗೆ ಕಾಳಜಿಯೇ ಇಲ್ಲದಂತಾಗಿಬಿಟ್ಟಿದೆ'' ಎಂದು ಲೇವಡಿ ಮಾಡಿದ್ದಾರೆ. ಗೋವಾ ವಿಮೋಚನೆ ಸಂದರ್ಭದಲ್ಲಿ ಅಮೆರಿಕಾ ಮತ್ತು ಪಶ್ಚಿಮ ರಾಷ್ಟ್ರಗಳು ತೆಗೆದುಕೊಂಡ ನಿಲುವು, ಡಿಯಾಗೊ ಗಾರ್ಸಿಯಾ ನೌಕಾನೆಲೆ ವಿಚಾರದಲ್ಲಿಯೇ ಆಗಲಿ, ಬಾಂಗ್ಲಾದೇಶದ ವಿಮೋಚನಾ ಸಮರದ ಸಂದರ್ಭದಲ್ಲಿಯೇ ಆಗಲಿ ಅಮೆರಿಕಾ ವರ್ತಿಸಿದ ರೀತಿ, ವಿಶ್ವಸಂಸ್ಥೆಯಲ್ಲಿ ಕಾಶ್ಮೀರಕ್ಕೆ ಸಂಬಂಧಿಸಿದ ಪ್ರಶ್ನೆ ಚರ್ಚೆಗೆ ಬಂದಾಗ ಅಮೆರಿಕದ ಆಗಿನ ಪ್ರತಿನಿಧಿಗಳು ತೆಗೆದುಕೊಂಡ ನಿಲುವು, ಎಲ್ಲವೂ ಈ ಮಹನೀಯರಿಗೆ ಯಾವುದೋ ಕಾಲದ ಹಳಸು ವಿಚಾರಗಳು. ನಮ್ಮ ಸಾರ್ವಭೌಮತ್ವಕ್ಕೆ ಧಕ್ಕೆಯುಂಟಾದ ಎಲ್ಲ ಸಂಕಷ್ಟ ಪರಿಸ್ಥಿತಿಗಳಲ್ಲಿ ನಮ್ಮೊಡನೆ ನಿಂತದ್ದೇ ಅಲ್ಲದೆ ಭಾರತದ ಸ್ವತಂತ್ರ ಆರ್ಥಿಕ ಅಭಿವೃದ್ಧಿಗೆ ನೆರವಾದ ಸೋವಿಯತ್ ಒಕ್ಕೂಟದ ಸ್ನೇಹ ಸಂಬಂಧಗಳಿಗೆ ಆಧಾರವಾಗಿದ್ದ ಮೂಲ ಅಂಶಗಳ ಬಗ್ಗೆ ಪರಿಜ್ಞಾನವಿಲ್ಲದ ಪ್ರಧಾನಿಯವರಿಗೆ ಇವೆಲ್ಲವೂ ಬೇಡದ ಸಂಗತಿಗಳು. ಭಾರತದ ವಸಾಹತುಶಾಹಿ ಮತ್ತು ಸಾಮ್ರಾಜ್ಯಶಾಹಿ ವಿರುದ್ಧದ ನೀತಿಗಳ ನಮ್ಮ ಭವ್ಯ ಪರಂಪರೆ, ಸ್ವತಂತ್ರ ಆರ್ಥಿಕ ಅಭಿವೃದ್ಧಿ, ಸ್ವಾವಲಂಬನೆ, ವಿಶ್ವಶಾಂತಿ, ನಿಶ್ಶಸ್ತ್ರೀಕರಣ, ಅಲಿಪ್ತ ನೀತಿಗಳಂತಹ ಉದಾತ್ತ ಮೌಲ್ಯಗಳ ಆಧಾರದ ಮೇಲೆ ರೂಪುಗೊಂಡಿರುವ ನಮ್ಮ ವಿದೇಶಾಂಗ ನೀತಿ, ಇವುಗಳ ಬಗ್ಗೆ ಪ್ರಾಥಮಿಕ ಅರಿವಿದ್ದಿದ್ದರೆ ಪ್ರಧಾನಿಯವರು ಇಂತಹ ಉದ್ಧಟತನದ ಮಾತುಗಳನ್ನು ಆಡುತ್ತಿರಲಿಲ್ಲವೇನೋ. ನಿಜ, ಇವರ ರಾಜಕೀಯ ಜೀವನ ಪ್ರಾರಂಭವಾದದ್ದು ತೊಂಭತ್ತರ ದಶಕದಿಂದೀಚೆಗೆ. ಪೂರ್ವಾಶ್ರಮದಲ್ಲಿ ವಿಶ್ವಬ್ಯಾಂಕಿನಲ್ಲಿ ಸೇವೆ ಸಲ್ಲಿಸುವ ಮೂಲಕ ಬಂಡವಾಳಶಾಹಿ ವ್ಯವಸ್ಥೆಯ ಆರ್ಥಿಕ ನೀತಿಗಳಲ್ಲಿ, ಅಧ್ಯಯನಗಳಲ್ಲಿ ತೊಡಗಿದ್ದ ಮಾನ್ಯ ಸಿಂಗ್ ಮೂಲತಃ ಅಧಿಕಾರಶಾಹಿ ಪ್ರವೃತ್ತಿಯವರು. ಒಮ್ಮೆಯೂ ನೇರವಾಗಿ ಜನರಿಂದ ಆರಿಸಿ ಬರಲಾಗದ ಇವರು ಅಂದಿನ ಪ್ರಧಾನಿ ನರಸಿಂಹರಾಯರ ಕೃಪೆಯಿಂದಾಗಿ ವಿತ್ತಮಂತ್ರಿಯಾಗಿ ಜಾಗತೀಕರಣ – ಉದಾರೀಕರಣ – ಖಾಸಗೀಕರಣ ಪ್ರಕ್ರಿಯೆಯ ರೂವಾರಿ ಎಂಬ 'ಹೆಗ್ಗಳಿಕೆ'ಗೆ ಪಾತ್ರರಾಗಿದ್ದಾರೆ.

ಎನ್‌ಡಿಎ ಸರ್ಕಾರದ ಅವಧಿಯೂ ಸೇರಿದಂತೆ ತೊಂಭತ್ತರ ದಶಕದಿಂದಲೂ ಎಲ್ಲ ಸರಕಾರಗಳ ತೀವ್ರ ಅನಾದರಕ್ಕೆ ಗುರಿಯಾಗಿ ವಿನಾಶದತ್ತ ಸಾಗಿರುವ ಗ್ರಾಮೀಣ ಜನತೆಯ ದುರಂತಮಯ ಬದುಕಿನ ಬಗ್ಗೆಯಾಗಲಿ, ಗಗನಕ್ಕೇರುತ್ತಿರುವ ಬೆಲೆಗಳ ಬಗ್ಗೆಯಾಗಲಿ, ನಿರುದ್ಯೋಗ ಸಮಸ್ಯೆಯ ಬಗ್ಗೆಯಾಗಲಿ, ಇವರ ಸರ್ಕಾರವು ಇದುವರೆವಿಗೂ ಗಮನಹರಿಸಿಲ್ಲ. ಇದುವರೆವಿಗೂ ಯಾವುದೇ ರಚನಾತ್ಮಕವಾದ ನೀತಿಗಳನ್ನು ರೂಪಿಸಲು ವಿಫಲರಾಗಿರುವ ಪ್ರಧಾನಿಯವರು ವಿದರ್ಭ ಪ್ಯಾಕೇಜ್‌ನಂತಹ ಹುರುಳಿಲ್ಲದ ಯೋಜನೆಗಳಿಗೆ ಮೊರೆಹೋಗಿ ಸಾಮಾನ್ಯ ಕನಿಷ್ಠ ಕಾರ್ಯಕ್ರಮವನ್ನು ಅಲಕ್ಷಿಸುತ್ತಿರುವುದು ಖಂಡನೀಯ.

ಯುಪಿಎ ಹಾಡಿ ಹೊಗಳುವ ಪರಮಾಣು ಒಪ್ಪಂದದಿಂದ ಅಮೆರಿಕಾದ ಖಾಸಗಿ ಪರಮಾಣು ಉದ್ಯಮಗಳು ಎರಡು ದಶಕಗಳಷ್ಟು ಹಿಂದುಳಿದ ತಂತ್ರಜ್ಞಾನದ ರಿಯಾಕ್ಟರ್‌ಗಳನ್ನು ಪೂರೈಸಿ ೧೫೦ ಬಿಲಿಯನ್ ಡಾಲರುಗಳ ವ್ಯವಹಾರ ಕುದುರಿಸಿಕೊಂಡು ಅಪಾರ ಲಾಭಗಳಿಸಲಿವೆ. ಈ ಒಪ್ಪಂದದ ಹಿಂದೆ ಅಮೆರಿಕಾದ ಪರವಾಗಿ ಪರಮಾಣು ರಿಯಾಕ್ಟರ್ ಮತ್ತು ವಿದ್ಯುತ್ ತಯಾರಿಸುವ ಎಡಿಸನ್ ಎಲೆಕ್ಟ್ರಿಕ್ ಸಂಸ್ಥೆಯಂತಹ ದೈತ್ಯ ಕಂಪನಿಗಳ ಕೈವಾಡವಿದೆ. ಭಾರತದ ಖಾಸಗೀ ಕಂಪನಿಗಳೂ ಈ ಅವಕಾಶವನ್ನು ಬಳಸಿಕೊಂಡು ತಮ್ಮ ಪಾಲು ಗಿಟ್ಟಿಸಿಕೊಳ್ಳಲು ಕಾಯುತ್ತಿವೆ. ಈ ಒಪ್ಪಂದಕ್ಕೆ ೨೦೦೧ರಲ್ಲಿ ಆ ರಾಷ್ಟ್ರವು ಘೋಷಿಸಿದ ಆಂತರಿಕ ಶಕ್ತಿ ನೀತಿ ಕಾಯಿದೆಯೇ ಪರಮಾವಧಿಯಾಗಿದೆ. ಅಂದರೆ, ಅಮೆರಿಕದ ಆಂತರಿಕ ಕಾನೂನು ಹೈಡ್ ಆಕ್ಟ್ ಭಾರತ-ಅಮೆರಿಕ ಒಪ್ಪಂದದ ಮೇಲೆ ಮೇಲ್ವಿಚಾರಣೆ ನಡೆಸಲು ಅವಕಾಶವಿದೆ. ನಮ್ಮ ಸಂಸತ್ತಿಗೆ ಇದರ ಮೇಲೆ ಯಾವ ನಿಯಂತ್ರಣವೂ ಇರುವುದಿಲ್ಲ. ನಾವೂ ಅದಕ್ಕೆ ಪ್ರತಿಯಾಗಿ ಅಂತಹುದೇ ಕಾನೂನನ್ನು ರೂಪಿಸೋಣವೆಂದರೆ ಸರ್ಕಾರ ಒಪ್ಪುತ್ತಿಲ್ಲ. ಇದರಿಂದಾಗಿ ನಮ್ಮ ಸಾರ್ವಭೌಮತ್ವಕ್ಕೆ ಧಕ್ಕೆ ಉಂಟಾಗುವುದು ಖಂಡಿತ. ೨೦೫೦ರ ವೇಳೆಗೆ ಈ ಒಪ್ಪಂದದಿಂದಾಗಿ ಲಭ್ಯವಾಗಲಿರುವ ಪರಮಾಣು ಶಕ್ತಿಯು ವಿದ್ಯುತ್ ಕ್ಷೇತ್ರದಲ್ಲಿ ನಮ್ಮ ಶೇ. ೨೫ರಷ್ಟು ಅಗತ್ಯತೆಯನ್ನು ಮತ್ತು ೨೦೨೦ರ ವೇಳೆಗೆ ಶೇ. ೧೦ರಷ್ಟು ಅಗತ್ಯತೆಯನ್ನು ಪರಮಾಣು ಶಕ್ತಿ ಪೂರೈಸುತ್ತದೆ ಎಂದು ಹೇಳಲಾಗುತ್ತಿದೆ. ವಾಸ್ತವದಲ್ಲಿ ಇದು ಶೇ. ೬ರಷ್ಟು ಮಾತ್ರ ಎಂಬ ಅಂಶವನ್ನು ಮರೆಮಾಚಲಾಗುತ್ತಿದೆ. ಇನ್ನು ೩-೪ ದಶಕಗಳ ಅವಧಿಯಲ್ಲಿ ಸಂಶೋಧನಾ ಕ್ಷೇತ್ರದಲ್ಲಿ ಮಾಡಲಾಗುವ ನಮ್ಮ ಪ್ರಯತ್ನಗಳಿಂದಲೇ ಲಭ್ಯವಿರುವ

ಥೋರಿಯಮ್ ಮತ್ತು ಪ್ಲುಟೋನಿಯಂ ಬಳಸಿ, ಪರಮಾಣು ಶಕ್ತಿಯ ಅಗತ್ಯತೆಗಳನ್ನು ಪೂರೈಸಿಕೊಳ್ಳಬಹುದು ಎಂದು ತಜ್ಞರು ಅಭಿಪ್ರಾಯಪಡುತ್ತಾರೆ. ಅಲ್ಲದೆ, ಪರಮಾಣು ಶಕ್ತಿಯ ಬಳಕೆಯ ಉಪಯುಕ್ತತೆಯ ಬಗೆಯೇ ವಿಜ್ಞಾನಿಗಳು ತಮ್ಮ ಭಿನ್ನಾಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಿದ್ದಾರೆ. ಅಂತೆಯೇ ಸೌರಶಕ್ತಿ ತಯಾರಿಸಬಹುದಾದ ವಿದ್ಯುತ್ ಇವೇ ಮೊದಲಾದ ಶಕ್ತಿ ಮೂಲಗಳ ಬಳಕೆಯ ಬಗ್ಗೆಯೂ ವ್ಯಾಪಕ ಚರ್ಚೆಯಾಗಬೇಕಿದೆ. ಈ ಕುರಿತು ಯಾವ ವಿವೇಚನೆಯೂ ಇಲ್ಲದೆ ಭಾರತದ ವಿದೇಶಾಂಗ ನೀತಿಯನ್ನು ಅಮೇರಿಕಕ್ಕೆ ಒತ್ತೆ ಇಡಲು ಹೊರಟಿರುವ ಸರ್ಕಾರದ ಪ್ರಯತ್ನಗಳನ್ನು ಜನಸಾಮಾನ್ಯರು ತೀವ್ರವಾಗಿ ವಿರೋಧಿಸುತ್ತಿದ್ದಾರೆ. ಸರ್ಕಾರವು ನಮ್ಮ ಪ್ರಜಾಪ್ರಭುತ್ವದಲ್ಲಿ ಸಂಸತ್ತನ್ನು ವಿಶ್ವಾಸಕ್ಕೆ ತೆಗೆದುಕೊಂಡು ಮುಂದಿನ ಹೆಜ್ಜೆಗಳನ್ನಿಡುವುದು ದೇಶದ ಹಿತದೃಷ್ಟಿಯಲ್ಲಿ ಸರಿಯಾದ ಮಾರ್ಗ.

ಎಲ್ಲ ರೀತಿಯಲ್ಲೂ ರಾಷ್ಟ್ರದ ಹಿತದೃಷ್ಟಿಗೆ ಮಾರಕವಾಗಲಿರುವ ಪರಮಾಣು ಒಪ್ಪಂದವನ್ನು ಜನತೆಯ ಮೇಲೆ ಹೇರಲು ಮುಂದಾಗಿರುವ ಪ್ರಧಾನಿ ಮತ್ತು ಯು ಪಿ ಎ ಸರ್ಕಾರ ಮೊದಲಿಗೆ ಭೂತಪ್ರೇತಗಳು ಯಾರು, ಅವು ಇರುವುದಾದರೂ ಎಲ್ಲಿ ಎಂಬುದರ ಬಗ್ಗೆ ಆಳವಾಗಿ ಚಿಂತಿಸಿ ಈ ನೆಲದ ಕೋಟ್ಯಂತರ ಜನರ ಭವಿಷ್ಯವನ್ನು ರೂಪಿಸಲು ತಾವು ನಿಜಕ್ಕೂ ಸಮರ್ಥರೇ ಎಂದು ತುರ್ತಾಗಿ ಆತ್ಮವಿಮರ್ಶೆ ಮಾಡಿಕೊಳ್ಳುವುದು ಸೂಕ್ತ. ಇಲ್ಲದಿದ್ದರೆ ಬರುವ ದಿನಗಳಲ್ಲಿ ಜನತೆ ಈ ಎಲ್ಲ ನಕಾರಾತ್ಮಕ ಬೆಳವಣಿಗೆಗಳಿಗೆ ತಕ್ಕ ಪ್ರತಿಕ್ರಿಯೆ ನೀಡಲು ಸಜ್ಜಾಗಬೇಕು.

## ಎಪೆಕ್ ಶೃಂಗಸಭೆ

ಇದೇ ತಿಂಗಳ ಮೊದಲನೇ ವಾರದಲ್ಲಿ ಆಸ್ಟ್ರೇಲಿಯಾದ ಸಿಡ್ನಿಯಲ್ಲಿ ಎಪೆಕ್ ಸಂಘಟನೆಯ ಶೃಂಗಸಭೆ ಜರುಗಿತು. ಎಪೆಕ್ (ಏಷಿಯಾ ಪೆಸಿಫಿಕ್ ಆರ್ಥಿಕ ಸಹಕಾರ) ಸಂಘಟನೆಯಲ್ಲಿ ವಿಭಿನ್ನ ರಾಜಕೀಯ ವ್ಯವಸ್ಥೆಗಳನ್ನು ಹೊಂದಿರುವ, ವಿಭಿನ್ನ ಆರ್ಥಿಕ ನೀತಿಗಳನ್ನು ಅನುಸರಿಸುವ ಆಸ್ಟ್ರೇಲಿಯಾ, ಬ್ರೂನೀ, ಕೆನಡಾ, ಚಿಲಿ, ಚೀನಾ, ಜಪಾನ್, ರಷ್ಯ, ಪೆರು, ಅಮೆರಿದಂತಹ ರಾಷ್ಟ್ರಗಳೇ ಅಲ್ಲದೆ, ಪೆಸಿಪಿಕ್ ಸಾಗರದ ಅಂಚಿನಲ್ಲಿರುವ ಒಟ್ಟು ೨೧ ರಾಷ್ಟ್ರಗಳೂ ಇವೆ. ಆರ್ಥಿಕವಾಗಿ ಬಲಿಷ್ಠವಾಗಿರುವ, ಅಭಿವೃದ್ಧಿ ಹೊಂದುತ್ತಿರುವ ಮತ್ತು ಹಿಂದುಳಿದಿರುವ ರಾಷ್ಟ್ರಗಳ ಸದಸ್ಯರಾಗಿರುವ ಎಪೆಕ್ ಸಂಘಟನೆಯು ತನ್ನ ಚಟುವಟಿಕೆಗಳಲ್ಲಿ ಹೆಜ್ಜೆ ಹೆಜ್ಜೆಗೂ ತೀವ್ರ ಭಿನ್ನಾಭಿಪ್ರಾಯಗಳನ್ನು ಎದುರಿಸುತ್ತಿವೆ.

ಈ ಎಲ್ಲ ರಾಷ್ಟ್ರಗಳು ಒಟ್ಟಾರೆಯಾಗಿ ಅಂತರರಾಷ್ಟ್ರೀಯ ಮಟ್ಟದಲ್ಲಿ ಹೊರಸೂಸಲಾಗುವ ಶೇ. ೬೦ ಭಾಗದಷ್ಟು ಹಸಿರು ಮನೆ ಅನಿಲಗಳನ್ನು ಹೊರಸೂಸಿ ಜಗತ್ತಿನ ಪರಿಸರ ಹಾನಿಗೆ ಕಾರಣವಾಗುತ್ತಿವೆ. ಈ ಸಂಘಟನೆಯ ಬಹುಸಂಖ್ಯಾತ ರಾಷ್ಟ್ರಗಳು ಕ್ಯೊಟೋ ಒಪ್ಪಂದಕ್ಕೆ ಸಹಿ ಹಾಕಿಲ್ಲ. ಪರಿಸರ ಮಾಲಿನ್ಯದ ವಿರುದ್ಧ ಕೈಗೊಳ್ಳಲಾಗುತ್ತಿರುವ ಜಾಗತಿಕ ಮಟ್ಟದ ಪ್ರಯತ್ನಗಳಲ್ಲಿ ಈ ಎಲ್ಲ ರಾಷ್ಟ್ರಗಳೂ ಪಾಲ್ಗೊಳ್ಳುವಂತೆ ಮಾಡುವುದು ಒಂದು ಸವಾಲೇ ಸರಿ. ಅದರಲ್ಲೂ ಎಪೆಕ್ ಈ ದಿಶೆಯಲ್ಲಿ ಯಶಸ್ವಿಯಾಗುವುದಂತೂ ಸದ್ಯಕ್ಕೆ ದೂರದ ಮಾತು.

ಸಿಡ್ನಿ ಶೃಂಗಸಭೆಯಲ್ಲಿ ಚೀನಾ ತನ್ನ ಆರ್ಥಿಕ ಪ್ರಾಬಲ್ಯ ಮತ್ತು ರಾಜತಾಂತ್ರಿಕ ಕೌಶಲ್ಯಗಳನ್ನು ಮೆರೆಯಲು ಪ್ರಯತ್ನಿಸುತ್ತಿರುವಾಗಲೇ ಬಂಗಾಳ ಕೊಲ್ಲಿಯಲ್ಲಿ ಅಮೇರಿಕ ಭಾರತವೂ ಸೇರಿದಂತೆ ಇತರ ನಾಲ್ಕು ಎಪೆಕ್ ಸದಸ್ಯ ರಾಷ್ಟ್ರಗಳ ಜಂಟೀ ಆಶ್ರಯದಲ್ಲಿ ಮಿಲಿಟರಿ ಸಮರೋಭ್ಯಾಸಗಳನ್ನು ನಡೆಸುತ್ತಿದೆ. ಚೀನಾ ತನ್ನ ರಕ್ಷಣಾ ಪ್ರಾಬಲ್ಯವನ್ನು ವೃದ್ಧಿಸಿಕೊಳ್ಳುತ್ತಿರುವ ಹಿನ್ನೆಲೆಯಲ್ಲೇ ಅಮೇರಿಕವು ಭಾರತ, ಆಸ್ಟ್ರೇಲಿಯ, ಜಪಾನ್ ಮತ್ತು ಸಿಂಗಾಪುರಗಳ ಸಹಯೋಗದಲ್ಲಿ ಪಶ್ಚಿಮ ಪೆಸಿಪಿಕ್ ವಲಯಕ್ಕೆ ಹೊಂದಿಕೊಂಡಂತೆ ಕವಾಯತುಗಳನ್ನು ನಡೆಸುವುದರ ಮೂಲಕ ಏಷಿಯಾದ ರಾಷ್ಟ್ರಗಳೊಡನೆ ತನ್ನ ರಕ್ಷಣಾ ಸಂಬಂಧಗಳನ್ನು ಬಲಪಡಿಸಿಕೊಳ್ಳಲು ಹವಣಿಸುತ್ತಿದೆ. ಚೀನಾದ ವಿರುದ್ಧ ಭಾರತವನ್ನು ಎತ್ತಿ ಕಟ್ಟಲು ಅಮೇರಿಕ ಸಂಚು ಹೂಡುತ್ತಿದೆಯೇ ಎಂಬ ಸಂದೇಹವನ್ನೂ ತಳ್ಳಿಹಾಕುವಂತಿಲ್ಲ. ಭಾರತ ನೆರೆ ರಾಷ್ಟ್ರಗಳ ಹಿತಾಸಕ್ತಿಗಳಿಗೆ ಧಕ್ಕೆ ಉಂಟುಮಾಡಬಲ್ಲ, ಇಂತಹ ದುಷ್ಟ ಕಾರ್ಯಾಚರಣೆಗಳಲ್ಲಿ ಕೈ ಜೋಡಿಸುತ್ತಿರುವುದು ಸರ್ಕಾರ ನಮ್ಮ ವಿದೇಶಾಂಗ ನೀತಿಯ ಮೇಲೆ ಹಿಡಿತವನ್ನು ಕಳೆದುಕೊಳ್ಳುತ್ತಿರುವುದಕ್ಕೆ ಸೂಚನೆಯಾಗಿದೆ. ಅಲ್ಲದೆ, ಪೂರ್ವ ಯೂರೋಪ್, ದಕ್ಷಿಣ ಏಷಿಯಾ ಪ್ರದೇಶಗಳಲ್ಲಿಯೂ ಅಮೇರಿಕ ತನ್ನ ಸಶಸ್ತ್ರ ಪಡೆಗಳಿಗಾಗಿ ನೆಲೆಗಳನ್ನು ಸ್ಥಾಪಿಸಹೊರಟಿರುವುದು ಅತ್ಯಂತ ಅಪಾಯಕಾರಿ ಬೆಳವಣಿಗೆಯಾಗಿದೆ. ಚೀನಾ ಈ ಕುರಿತು ತನ್ನ ವಿರೋಧವನ್ನು ಈಗಾಗಲೇ ವ್ಯಕ್ತಪಡಿಸಿದೆ. ಈ ಎಲ್ಲ ಬೆಳವಣಿಗೆಗಳು ಶೀತಲ ಯುದ್ಧದ ವಾತಾವರಣವನ್ನು ಮತ್ತೆ ಹುಟ್ಟುಹಾಕುವ ನಿಟ್ಟಿನಲ್ಲಿ ಪ್ರಾರಂಭಿಕ ಹೆಜ್ಜೆಗಳಾಗಿವೆ.

ಅಮೇರಿಕ, ಏಷಿಯಾ ರಾಷ್ಟ್ರಗಳ ಸಖ್ಯವನ್ನು ಬೆಳೆಸಿಕೊಳ್ಳುತ್ತಿರುವ ಹೊತ್ತಿನಲ್ಲೇ ಚೀನಾ, ರಷ್ಯ ಮತ್ತು ಷಾಂಘಾಯ್ ಸಹಕಾರ ಸಂಘಟನೆಗಳೊಂದಿಗೆ ಹೆಚ್ಚಿನ ಸ್ನೇಹಸಂಬಂಧಗಳ ಸ್ಥಾಪನೆಗೆ ಮುಂದಾಗಿದೆ. ಈ ಮಧ್ಯೆ ಜಪಾನ್, ಆಸ್ಟ್ರೇಲಿಯ, ಅಮೇರಿಕ ಮೂರೂ ರಾಷ್ಟ್ರಗಳು ತಮ್ಮದೇ ಮಿಲಿಟರಿ ಕೂಟವೊಂದನ್ನು ರಚಿಸಿಕೊಳ್ಳಲು ಆಲೋಚಿಸುತ್ತಿವೆ.

ಸಿಡ್ನಿ ಎಪೆಕ್ ಶೃಂಗಸಭೆ ಜರುಗುತ್ತಿರುವ ಸಂದರ್ಭದಲ್ಲಿ ವಿಶ್ವ ಶಾಂತಿ ಚಳುವಳಿ ಮತ್ತು ನಾಗರಿಕ-ಸಾಮಾಜಿಕ ಸಂಘಟನೆಗಳು ಪ್ರಕಟಿಸಿದ ವ್ಯಾಪಕವಾದ ವಿರೋಧವನ್ನು ಹತ್ತಿಕ್ಕಲು ಅಲ್ಲಿನ ಸರ್ಕಾರ ಹರಸಾಹಸ ಪಡಬೇಕಾಯಿತು. ಬರುವ ದಿನಗಳಲ್ಲಿ ಎಪೆಕ್‌ನಂತಹ ಮಿಲಿಟರಿ ಕೂಟಗಳ ವಿರುದ್ಧ ಜನಸಾಮಾನ್ಯರು ಉಗ್ರ ಹೋರಾಟಗಳನ್ನು ಹಮ್ಮಿಕೊಳ್ಳುವುದು ಅನಿವಾರ್ಯವಾಗಿದೆ.


ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

**ಸಮಾಲೋಚಕ ಮಂಡಲಿ**

ಟಿ. ಆರ್. ಅನಂತರಾಮು
ಸಿ. ಆರ್. ಚಂದ್ರಶೇಖರ್
ವಿ. ಚಂದ್ರಶೇಖರ ನಂಗಲಿ
ಕೆ. ಎಲ್. ಗೋಪಾಲಕೃಷ್ಣ ರಾವ್
ಎಚ್. ಎಸ್. ಗೋಪಾಲ ರಾವ್
ಜಿ. ಕೆ. ಗೋವಿಂದ ರಾವ್
ಎಂ. ಸಿ. ನರಸಿಂಹನ್
ನೇಮಿಚಂದ್ರ
ಪ್ರಕಾಶ್ ಸಿ. ರಾವ್
ಬರಗೂರು ರಾಮಚಂದ್ರಪ್ಪ
ಕೆ. ಮರುಳಸಿದ್ದಪ್ಪ
ಮಹಾಬಲೇಶ್ವರ ರಾವ್
ವ್ಯಾಸರಾಯ ಬಲ್ಲಾಳ
ವಿಜಯಾ
ಬಿ. ವಿ. ವೀರಭದ್ರಪ್ಪ
ಟಿ. ವೆಂಕಟೇಶ ಮೂರ್ತಿ
ಯು. ಎಸ್. ಶ್ರೀನಿವಾಸನ್
ಸಿದ್ದನಗೌಡ ಪಾಟೀಲ
ಎಲ್. ಹನುಮಂತಯ್ಯ

**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೨೫/- |
| ಮೂರು ವರ್ಷಕ್ಕೆ | ರೂ. ೩೦೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೦೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨




**ಆ**ಗಸ್ಟ್ ತಿಂಗಳ 'ಹೊಸತು' ಸಂಪಾದಕೀಯ ಬಹಳ ಅರ್ಥಗರ್ಭಿತವಾಗಿತ್ತು.

ಸಶಸ್ತ್ರ ಹೋರಾಟದ ೪೦ ವರ್ಷದ ಇತಿಹಾಸವೆಂದು ಹೇಳಿಕೊಳ್ಳುತ್ತಿರುವವರಿಗೆ ತಮ್ಮ ತಪ್ಪು ಹೆಜ್ಜೆಯ ಅರಿವಾಗುತ್ತಿಲ್ಲ.

ತ್ಯಾಗದ ಹೆಸರಲ್ಲಿ ಒಂದು ರೀತಿಯ ಉನ್ಮಾದ ಕಾಣುತ್ತಿದೆ. ತತ್ವ, ಸಿದ್ಧಾಂತದ ಪ್ರಶ್ನೆಯಲ್ಲ.

ನಕ್ಸಲಿಸಂ ಜನರಿಂದ ದೂರ ಉಳಿದಿದೆ. ಪ್ರಜಾತಾಂತ್ರಿಕ ಹೋರಾಟಗಳಿಂದ ದೂರವಿದೆ. ಅವರಲ್ಲಿ ತಾವೇ ಅಚಲ ದೇಶಭಕ್ತರೆಂಬ ಹುಂಬತನವಿದೆ. ಕಾಲ, ದೇಶ, ಪ್ರದೇಶಗಳನ್ನು ನೋಡುವುದರಲ್ಲಿ ಕೊರತೆಯಿದೆ. ರಾಜಕೀಯಕ್ಕಿಂತ ಬಂದೂಕಿಗೆ ಮಹತ್ವವಿದೆ. ಇದೇ ಪ್ರಧಾನವಾಗಿರುವುದು ಆ ಚಳವಳಿ ದಾರಿತಪ್ಪಲು ಕಾರಣವೆಂದು ತೋರುತ್ತದೆ.

*ಚಿತ್ರದುರ್ಗ* **ಅಚಲ, ಸಿ. ಕೆ. ಪುರ**

ಬೆಂಗಳೂರಿನ ಹಳೆಯ ಸೆಂಟ್ರಲ್ ಜೈಲ್‌ನ ಪಳೆಯುಳಿಕೆಗಳ ಬಗ್ಗೆ ಸೊಗಸಾಗಿ ನವಿರಾಗಿ ಓದುಗರ ಮುಂದಿಡುವಲ್ಲಿ ಯಶಸ್ವಿಯಾಗಿದ್ದಾರೆ ಪ್ರೊ|| ಎಂ. ಎಚ್. ಕೃಷ್ಣಯ್ಯ. ಮುಖಪುಟದ ಜೊತೆ ಒಳ ರಕ್ಷಾಪುಟದಲ್ಲಿ ಆಕರ್ಷಕ ವರ್ಣಪಾರದರ್ಶಿಕೆಗಳು ಓದುಗರ ಗಮನ ಸೆಳೆಯುತ್ತವೆ.

ತಮ್ಮ ಲೇಖನದಲ್ಲಿ 'ಜನಾರೋಗ್ಯದ ಅನಾರೋಗ್ಯ'ವನ್ನು ವಸ್ತುಶಃ ವಿಶ್ಲೇಷಿಸಿ ಅಂಕಿ-ಅಂಶಗಳೊಂದಿಗೆ ಭಾರತವನ್ನು ಕಾಡುತ್ತಿರುವ ಬಡತನದ ನೈಜ ಚಿತ್ರಣವನ್ನು ಸಾದೃಶರಾಗಿಸಿದ್ದಾರೆ ಡಾ|| ಪ್ರಕಾಶ್ ಸಿ. ರಾವ್.

ಇಂದಿನ ಪಠ್ಯಪುಸ್ತಕಗಳಲ್ಲಿ ಕಾಣಬರುವ ಇತಿಹಾಸ ಕುರಿತಾದ ಡಾ|| ಎಚ್. ಎಸ್. ಗೋಪಾಲರಾವ್ ಅವರ 'ಶಾಲಾ ಇತಿಹಾಸ ಪಠ್ಯಗಳಲ್ಲಿ ದೋಷಗಳು' ನಮ್ಮ ಪ್ರಸ್ತುತ ಸರ್ಕಾರದ ಕಣ್ಣು ತೆರೆಸೀತೆ ? ಕಾದುನೋಡಬೇಕು.

*ಬೆಂಗಳೂರು* **ನೆ. ಲ. ರಾಮಮೂರ್ತಿ**

### ಆದಿವಾಸಿಗಳ ಕುರಿತು ಒಂದಿಷ್ಟು

ಆದಿವಾಸಿಗಳು ಶತಮಾನದಿಂದಲೂ ಗುಡ್ಡ ಕಾಡುಗಳಲ್ಲಿ ಒಂದಿಷ್ಟು ಗದ್ದೆ ಮಾಡಿಕೊಳ್ತಾ, ಕಾಡುತ್ಪನ್ನಗಳನ್ನು ಸಂಗ್ರಹಿಸಿಕೊಳ್ತಾ, ತಾವು ಸಂಗ್ರಹಿಸಿದ ಕಾಡು ಉತ್ಪನ್ನಗಳನ್ನು ವ್ಯಾಪಾರೀ ದೃಷ್ಟಿಕೋನವನ್ನು ಹೊರತುಪಡಿಸಿ ತಮ್ಮ ಆಹಾರದ ಕೊಂಡಿಯಾಗಿ ಅವನ್ನ ಬಳಸ್ತಾ, ಸಂಗ್ರಹಿಸಿದ ಜೇನು ಮುಂತಾದುವನ್ನು ಹೊರಗಿನವರಿಗೆ ಕೊಡುವಾಗಲೂ ವ್ಯಾಪಾರಿ ಮನೋಭಾವ ಹೊಂದದೆ, ಕೇವಲ ತಮ್ಮ-ಅವರ ಬಾಂಧವ್ಯದ ಬೆಸುಗೆಗಾಗಿ ಕೊಡುಕೊಳ್ಳುತ್ತಾ ಹೊರ ಜಗತ್ತಿನೊಂದಿಗೆ ಒಂದು ಸೀಮಿತ ಬಾಂಧವ್ಯವನ್ನು ಹೊಂದಿದ್ದರು. ಹೀಗೆ ಬದುಕುತ್ತಿದ್ದಾಗಲೂ ಕಾಡಿನೊಂದಿಗಿನ ಅವರ ಸಂಬಂಧ ಮತ್ತು ಕಾಡಿನ ಬಗ್ಗೆ ಅವರಿಗಿದ್ದ ತಿಳುವಳಿಕೆ ಹೊರ ಜಗತ್ತು ಗ್ರಹಿಸಲಾರದಷ್ಟು ವಿಶೇಷವಾಗಿತ್ತು. ಆ ಸಂಬಂಧ ಅವರ ಆಹಾರ ಪದ್ಧತಿ ಮತ್ತು ಅವರ ಸಹಜ ಒಡನಾಟದಿಂದ ಬಂದುದಾಗಿತ್ತು. ತಮ್ಮ ಗದ್ದೆ, ತೋಟ ಹಾಗೂ ಮನೆಗಳಲ್ಲಿ ಕಳೆದಷ್ಟೇ ಅಥವಾ ಅದಕ್ಕಿಂತಲೂ ಹೆಚ್ಚಿನ ಸಮಯವನ್ನು ಅವರು ಕಾಡಿನಲ್ಲಿ ಕಳೆಯುತ್ತಿದ್ದರು. ತಮ್ಮ ಅಗತ್ಯವಿರುವ ಆಹಾರದ ಹೆಚ್ಚಿನ ಭಾಗವನ್ನು ತಾವೇ ಬೆಳೆಯುತ್ತಾ ಮತ್ತು ಕಾಡಿನಲ್ಲಿ ಸಿಕ್ಕುವ ಅಣಬೆ, ಸೊಪ್ಪು, ಕಳಲೆ ಇವುಗಳನ್ನೇ ಕಾಲ ಕಾಲದ ವಾತಾವರಣಕ್ಕೆ ಹೊಂದುವಂತೆ ಆಹಾರದೊಂದಿಗೆ ಔಷಧಿಯ ಗುಣವನ್ನು ಪಡೆಯುತ್ತಿದ್ದರು. ತಮ್ಮ




ಹೆಚ್ಚಿನ ಆರೋಗ್ಯ ಸಮಸ್ಯೆಗಳಿಗೆ ನಾಟಿ ವೈದ್ಯರಿಂದ ಸಿಕ್ಕುವ ಔಷಧಗಳು, ಸ್ಥಳೀಯ ನಾರು-ಬೇರುಗಳನ್ನು ಆಧರಿಸಿದ ಆಯುರ್ವೇದ ಪದ್ಧತಿಯನ್ನು ಅನುಸರಿಸುತ್ತಿದ್ದರು. ಅದು ಕೆಲವೊಮ್ಮೆ ವ್ಯತಿರಿಕ್ತ ಪರಿಣಾಮ ಉಂಟುಮಾಡಿದರೆ, ತಾವು ನಂಬಿದ ದೈವವನ್ನೇ ಹೊಣೆ ಮಾಡ್ತಾ ಹೇಗೋ ಬದುಕುತ್ತಿದ್ದರು.

ಆದಿವಾಸಿಗಳು ಮೊದಲ ಬಾರಿಗೆ ಸಂಘಟಿತರಾಗಿ ರಾಷ್ಟ್ರೀಯ ಉದ್ಯಾನವನ್ನು ವಿರೋಧಿಸಿದಾಗ ಅವರೊಂದಿಗೆ ನಿಂತದ್ದು ಅವರದೇ ಆದ ಗಿರಿಜನ ಹಿತ ರಕ್ಷಣಾ ಸಮಿತಿ ಮತ್ತು ಹಲವು ಪ್ರಗತಿಪರ ಸಂಘಟನೆಗಳನ್ನೊಳಗೊಂಡ 'ರಾಷ್ಟ್ರೀಯ ಉದ್ಯಾನ ವಿರೋಧಿ ಒಕ್ಕೂಟ'. ಒಕ್ಕೂಟದ ೭-೮ ವರ್ಷದ ಅವಿರತ ಹೋರಾಟದ ನಂತರವೂ ಸರ್ಕಾರ ಪುನರ್ವಸತಿ ಪ್ಯಾಕೇಜ್ ಘೋಷಣೆ ಮಾಡಿತೇ ಹೊರತು ಆದಿವಾಸಿಗಳ ಬೇಡಿಕೆಯಾದ ''ರಾಷ್ಟ್ರೀಯ ಉದ್ಯಾನ ಯೋಜನೆಯನ್ನು ರದ್ದು ಮಾಡಿ, ನಮ್ಮ ಜಮೀನಿಗೆ ಹಕ್ಕು ಪತ್ರ ಕೊಡಿ, ಮೂಲಭೂತ ಸೌಲಭ್ಯಗಳಿಂದ ರಸ್ತೆ, ನೀರು, ಕರೆಂಟ್, ಶಾಲೆ, ಆಸ್ಪತ್ರೆ ಈ ಸೌಲಭ್ಯಗಳನ್ನೊದಗಿಸಿಕೊಡಿ'' ಎನ್ನುವ ಬೇಡಿಕೆ ಒಂದು ಅರಣ್ಯರೋದನವಾಯ್ತೆ ಹೊರತು ಅದು ಈಡೇರಲೇ ಇಲ್ಲ.

ಇನ್ನೊಂದೆಡೆ ನಕ್ಸಲೀಯರು ಪ್ರಾರಂಭಿಸಿದ ಹೋರಾಟ ತೀವ್ರ ಸ್ವರೂಪ ಪಡೆದು ಸರ್ಕಾರ ಅವರನ್ನು ದಮನ ಮಾಡುತ್ತಲೇ ಪ್ರತಿ ಎನ್‌ಕೌಂಟರ್ ನಂತರವೂ ಹೊಸ ಹೊಸ ಪ್ಯಾಕೇಜ್ ಘೋಷಣೆ ಮಾಡ್ತಾ, ಅವರೊಂದಿಗೆ ಚರ್ಚೆ ಮಾಡ್ತೀವಿ ಅಂತಾನೂ ಹೇಳ್ತಾಬಂತು. ೭-೮ ವರ್ಷದ ಒಕ್ಕೂಟದ ಹೋರಾಟಕ್ಕೆ ಕಿಂಚಿತ್ತು ಬೆಲೆ ಕೊಡದ ಸರ್ಕಾರ ನಾಗರಿಕ ಸಮಾಜದಿಂದ ದೂರವಿದ್ದ, ಪ್ರಜಾಪ್ರಭುತ್ವವನ್ನು ವಿರೋಧಿಸುವ ನಕ್ಸಲರೊಂದಿಗೆ ಮಾತಾಡ್ತೀವಿ ಅಂತ ಹೇಳ್ತಾ ತಾನೇ ಸ್ವತಃ ಪ್ರಜಾತಂತ್ರ ಹೋರಾಟಕ್ಕೆ ಮಸಿ ಬಳೀತು.

ಒಂದು ಪ್ರಶ್ನೆ ಈಗ ಎಲ್ಲರನ್ನೂ ಕಾಡುತ್ತಿದೆ. ಹಾಗಿದ್ರೆ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ನಮ್ಮ ಹಕ್ಕನ್ನು ಕೇಳುವ, ನಮಗಾಗಿರುವ ಅನ್ಯಾಯವನ್ನು ಪ್ರಶ್ನೆ ಮಾಡುವ ವಿಧಾನ ಯಾವುದು ? ಎಲ್ಲಾ ಚಳುವಳಿಗಳೂ ನಕ್ಸಲ್ ಹೋರಾಟ ಅಂತ ಹೆಸರಿಡುವ ಸರ್ಕಾರದ ನೀತಿಗೆ ಏನು ಕಾರಣ ? ಬರೀ ನಕ್ಸಲೀಯರನ್ನೇ ಮಟ್ಟ ಹಾಕೋ ಕಾರಣವಿದ್ರೆ ನೇರವಾಗಿ ಆ ಕೆಲಸವನ್ನೇ ಮಾಡ್ಲಿ. ಅದು ಬಿಟ್ಟು ಆದಿವಾಸಿಗಳ ಚಳುವಳಿಯನ್ನೇ ಈ ರೀತಿ ತಪ್ಪಾಗಿ ಗುರುತಿಸುವುದು ಎಷ್ಟು ಸರಿ ? ಸರ್ಕಾರಕ್ಕೆ ನಿಜವಾದ ಕಾಳಜಿ ಇರೋದಾದಲ್ಲಿ ಅದು ಆದಿವಾಸಿಗಳ ಪರ ಧ್ವನಿ ಎತ್ತುತ್ತಿರುವ ಒಕ್ಕೂಟದೊಂದಿಗೆ ಮಾತಾಡ್ಲಿ. ಆದಿವಾಸಿಗಳ ಮೂಲ ಸಮಸ್ಯೆಯನ್ನು ಪರಿಹರಿಸಲಿ. ಸರ್ಕಾರ ಮೊದಲು ಮಾಡಬೇಕಾದ ಕೆಲಸ ಇದೇ ಆಗಿದೆ. ಆದರೆ ಸರ್ಕಾರ ಅದ್ಯಾವುದನ್ನೂ ಮಾಡದೆ ಇಡೀ ಒಕ್ಕೂಟದ ಹೋರಾಟವನ್ನೇ ಮಟ್ಟ ಹಾಕೋ ಮುಖಾಂತರ ಆದಿವಾಸಿಗಳ ಧ್ವನಿ ಅಡಗಿಸುವ ಪ್ರಯತ್ನ ಮಾಡ್ತಿದೆ. ಹಾಗೆ ಮಾಡಿ ಆದಿವಾಸಿಗಳನ್ನು ಏಕಾಂಗಿಯಾಗಿಸಿ ಅವರು ಸ್ವತಃ ತಾವೇ ತಮ್ಮ ನೆಲ ಬಿಟ್ಟುಹೋಗೋ ಹಾಗೆ ಮಾಡಿ ಒಟ್ಟಾರೆ ತಮ್ಮ ಮೂಲ ಅಜೆಂಡಾಆದ ರಾಷ್ಟ್ರೀಯ ಉದ್ಯಾನದಲ್ಲಿ ಜನವಸತಿ ಇರಬಾರದು ಅನ್ನೋದನ್ನು ಪರೋಕ್ಷವಾಗಿ ಜಾರಿಗೆ ತರುವುದೇ ಇದರ ಉದ್ದೇಶವಾಗಿದೆ. ಆ ಮುಖಾಂತರ ರಾಷ್ಟ್ರೀಯ ಉದ್ಯಾನ ಯೋಜನೆ ಜಾರಿಗೆ ತಂದು ವಿದೇಶಿ ಕಂಪನಿಗಳ ಹಿತಾಸಕ್ತಿಗಳನ್ನು ಕಾಪಾಡಲು ಹೊರಟಿದೆ. ಇನ್ನೊಂದೆಡೆ ಹೆಚ್ಚುತ್ತಿರುವ ವಿದೇಶಿ ಬಂಡವಾಳ ಹೂಡಿಕೆದಾರರಿಗೆ ಇಲ್ಲಿರುವ ಜನರ ಪ್ರತಿಭಟನೆಯನ್ನು ಮಟ್ಟಹಾಕೊ ಮುಖಾಂತರ ಅವರು ನಿರ್ಭಯವಾಗಿ ಇಲ್ಲಿನ ಸಂಪತ್ತನ್ನ ಲೂಟಿಮಾಡುವ, ಬಂಡವಾಳ ಹೂಡಿ ಲಾಭ ಮಾಡುವ ಪ್ರಕ್ರಿಯೆಗೆ ಬೆಂಬಲವಾಗಿ ನಿಲ್ಲೋದೆ ಅದರ ಪ್ರಥಮ ಆದ್ಯತೆಯಾಗಿದೆ. ಈ ಕಾರಣಕ್ಕಾಗಿಯೇ ಅದಕ್ಕೆ ಎಲ್ಲಾ ಹೋರಾಟಗಳು ಪ್ರಜಾತಂತ್ರ ವಿರೋಧಿ ಹೋರಾಟಗಳಾಗಿ ಕಾಣುತ್ತವೆ. ಅದಕ್ಕಾಗಿ ಸರ್ಕಾರ ಲಕ್ಷಾಂತರ ರೂಪಾಯಿ ಹಣವನ್ನು ವೆಚ್ಚ ಮಾಡುತ್ತೆ. ಹಳ್ಳಿಯ ಆಸ್ಪತ್ರೆಗೆ ಡಾಕ್ಟ್ರು, ಔಷಧಿ ಎರಡೂ ಇಲ್ಲದಿದ್ರೂ ಹಳ್ಳಿ ಹಳ್ಳಿಗಳಲ್ಲಿ ಪೊಲೀಸ್ ಕ್ಯಾಂಪುಗಳಿಗೆ ವ್ಯವಸ್ಥೆ ಕಲ್ಪಿಸುತ್ತೆ. ಆ ಮೂಲಕ ಶತಮಾನದಿಂದ ನಡೆಸಿಕೊಂಡು ಬಂದು ಜನ ವಿರೋಧಿ ನೀತಿಯನ್ನೇ ಮುಂದುವರಿಸುತ್ತೆ. ಜನ ಎಲ್ಲಿಯವರೆಗೆ ಎಚ್ಚೆತ್ತುಕೊಳ್ಳುವುದಿಲ್ಲವೋ ಅಲ್ಲಿಯವರೆಗೂ ಆಳುವವರ ಈ ರೀತಿಯ ದಮನ ಮುಂದುವರಿಯುತ್ತಲೇ ಇರುತ್ತೆ.

*ಕಂಚೇಬೈಲು, ಶೃಂಗೇರಿ ತಾ.* **ಭಾಗ್ಯ ಹಾಗಲಗಂಚಿ**

೩ನೇ ಪುಟದಿಂದ (ಈ ತಿಂಗಳು)

ಹೇಳುವುದಾದರೆ, ದೇಶದ ಜನರ ಜೊತೆ ಮತ್ತು ಎಡಪಕ್ಷ ಗಳೊಡನೆ ಕಾಂಗ್ರೆಸ್ ಮಾಡಿಕೊಂಡ ಕರಾರಿಗೆ ಬೆಲೆಯಿಲ್ಲ. ಏಕೆಂದರೆ ಆ ಪಕ್ಷವು ಅಮೆರಿಕಾದೊಡನೆ ಒಪ್ಪಂದಕ್ಕೆ ಹಾತೊರೆಯುತ್ತಿದೆ. ರಾಜಕೀಯ ಅಸ್ಥಿರತೆಯನ್ನು ಎಡಪಕ್ಷಗಳು ಉಂಟು ಮಾಡುತ್ತಿವೆಯೆಂದು ನಿರಂತರವಾಗಿ ಪ್ರಚಾರ ಮಾಡುವ ಮಾಧ್ಯಮಗಳಿಗೆ ಕರಾರು; ಅದರ ಪಾಲನೆಗಿರುವ ಮೌಲ್ಯ, ಯಾವುದೂ ಬೇಕಿಲ್ಲ, ಅಮೆರಿಕಾಕ್ಕೆ ಶರಣಾದರೆ ಸಾಕು, ಅವುಗಳ ಪುರುಷಾರ್ಥ ಸಿದ್ಧಿಯಾದಂತೆ. ಹೆಚ್ಚು ಕಡಿಮೆ ಅದೇ ಧೋರಣೆಯನ್ನು ಅಡ್ವಾನಿಯವರ ಪಕ್ಷವು ಬೇರೊಂದು ರೀತಿಯಲ್ಲಿ ಪ್ರಕಟಿಸುತ್ತದೆ, ಅಷ್ಟೆ.

ಕರಾರುಗಳನ್ನು ಮುರಿಯುವವರು ಬೇರೆಯವರೂ ಇದ್ದಾರೆ. ಮಮತಾ ಬ್ಯಾನರ್ಜಿ, ಜಯಲಲಿತಾ ಮುಂತಾದವರು ಇದರಲ್ಲಿ ಹಿಂದೆ ಬೀಳುವುದಿಲ್ಲ. ಜನತೆಯ ಜೊತೆ ಇವರಾರೂ ಕರಾರು ಮಾಡಿಕೊಳ್ಳುವುದಿಲ್ಲ, ಕೇವಲ ಅವರ ಮತ ಪಡೆಯುತ್ತಾರೆ. ಎಡಪಕ್ಷಗಳು ಹಾಗೆ ಮಾಡುವುದಿಲ್ಲವೆಂದು ಮನಮೋಹನ ಸಿಂಗರಿಗೆ ಕೆಂಗಣ್ಣು.

* * *

ಸೇತುವೆಯಲ್ಲದ ಒಂದು 'ಸೇತುವೆ' ಬಗೆಗಿನ ಅತಾರ್ಕಿಕ ನಂಬಿಕೆಯನ್ನು ಕುರಿತಂತೆ 'ಪ್ರತಿಭಟನೆ' ನಡೆದಿದೆ ಹಾಗೂ ಹತ್ತಾರು ಹೇಳಿಕೆಗಳು ಬಂದಿವೆ. ಸೇತುವೆಯನ್ನು ಕುರಿತ ಪುಸ್ತಕವೊಂದು ಸಹ ಹೊರಬರಲಿದೆ. ಆ ಪುಸ್ತಕದ ಪ್ರಕಾಶಕರು ಹೇಳುತ್ತಾರೆ : ''ನಂಬಿಕೆಯಲ್ಲಿ ಪ್ರೀತಿ-ಪ್ರೇಮ, ವಿಶ್ವಾಸಗಳು ತುಂಬಿರುತ್ತವೆ'' ಎಂದು. ಎಂದರೆ, ಪ್ರೀತಿ-ಪ್ರೇಮ, ವಿಶ್ವಾಸಗಳು ಮೌಢ್ಯದ ವಾತಾವರಣದಲ್ಲಿ ವಿಕಾಸವಾಗುವ ಭಾವನೆಗಳೆಂಬ ಭಾವನೆ ಉಂಟಾಗುತ್ತದೆ. ಜ್ಞಾನದ ಅಭಾವದಲ್ಲಿನ ನಂಬಿಕೆಗಳು ಜ್ಞಾನದ ಪ್ರಾಪ್ತಿಯಾದಂತೆ ಬದಲಾಗುತ್ತವೆ. ಬ್ರಹ್ಮಗುಪ್ತನು ಗ್ರಹಣಗಳನ್ನು ವ್ಯಾಖ್ಯಾನಿಸುವಾಗ ಇದನ್ನು ಸಾವಿರ ವರ್ಷಗಳ ಹಿಂದೆಯೇ ಪ್ರತಿಪಾದಿಸಿದ್ದ. ತಿಳಿವಳಿಕೆಯು ವಿಸ್ತಾರವಾದಾಗಲೂ ಹಳೆಯ ಜ್ಞಾನವನ್ನಾಧರಿಸಿದ ನಂಬಿಕೆಯನ್ನು ಪೋಷಿಸುವುದು ಯಾವ ಪುರುಷಾರ್ಥದ ಸಾಧನೆಗೆಂದು ತಿಳಿಯುತ್ತಿಲ್ಲ. ಆದಿಶೇಷನ ಹೆಡೆಯ ಮೇಲೆ ಭೂಮಿ ನಿಂತಿಲ್ಲವೆಂದು ಆರ್ಯಭಟ ಮತ್ತು ಅವನ ಭಾಷ್ಯಕಾರನು ಸ್ಥಾಪಿಸಿದ ನಂತರವೂ ಹಳೆಯ ನಂಬಿಕೆಯು ಶ್ರೇಷ್ಠವೆಂದು ಬಗೆಯುವುದು ಬಾಲಿಶತನ. ಅದನ್ನು ಹಾಗೆಯೇ ಸ್ವೀಕರಿಸಬೇಕೆಂದು ಆಗ್ರಹಿಸುವುದು ವಿಕಾಸಹೊಂದುವ ಜ್ಞಾನದ ಶತ್ರುಗಳಿಗೆ ಸಾಧ್ಯ, ಇಲ್ಲವೇ ಸಾಮಾಜಿಕ ಸ್ಥಗಿತತೆಯನ್ನು ಅಪೇಕ್ಷಿಸುವವರಿಗೆ ಅಗತ್ಯ. ಕಾವ್ಯದಲ್ಲಿ ಬರುವ ಅಮೋಘ ಕಲ್ಪನೆಗಳನ್ನು ವಾಸ್ತವ ಜೀವನದ ಪ್ರಕ್ರಿಯೆಗಳೆಂದು ನಂಬದೆಯೂ ಕಾವ್ಯವನ್ನು ಆಸ್ವಾದಿಸುವುದು ನಡೆದುಬಂದ ದಾರಿ. ಕಾವ್ಯವನ್ನು ಓದದೆ ಕೇವಲ ಆಗಾಗ್ಗೆ ಪೂಜೆ ಮಾಡುವ ಹವ್ಯಾಸವುಳ್ಳವರಿಗೆ ಕಾವ್ಯ ಮತ್ತು ಇತಿಹಾಸದ ನಡುವೆ ವ್ಯತ್ಯಾಸ ತೋರದಿರಬಹುದು; ಅಂಥವರನ್ನು ಗೌರವಿಸುವುದು ಸಮರ್ಥನೀಯವಲ್ಲ. ವಾಲ್ಮೀಕಿಯ ಹನುಮಂತನಿಗೆ ಇಷ್ಟ ಬಂದಂತೆ ಬೆಳೆಯುವ, ಕುಗ್ಗುವ, ಬಾಲ ದೊಡ್ಡದು-ಸಣ್ಣದು ಮಾಡುವ ಶಕ್ತಿಯಿದೆ. ಆ ಕಲ್ಪನೆಯನ್ನು ಶ್ಲಾಘಿಸು ವುದಕ್ಕೂ ಅದನ್ನು ಸುಳ್ಳು ಸುಳ್ಳೇ ನಂಬುವುದಕ್ಕೂ ವ್ಯತ್ಯಾಸವಿದೆ. ವಾಲಿಯ ಗುಹೆಯಲ್ಲಿ ಅನೇಕ ಅಂತಸ್ತುಗಳ ಪ್ರಾಸಾದಗಳಿದ್ದುವೆಂಬ ವರ್ಣನೆ ರಾಮಾಯಣದಲ್ಲಿದೆ. ಅದನ್ನು ನಂಬದೆ ವಾಲ್ಮೀಕಿಯನ್ನು ಮೆಚ್ಚಲಾಗುವುದಿಲ್ಲವೆ ?

ಭಾರತದಲ್ಲಿ ಕಾವ್ಯ ಪರಂಪರೆ ಇರುವಂತೆ ವಿಜ್ಞಾನದ ಪರಂಪರೆಯೂ ಇದೆ, ತಾರ್ಕಿಕ ಮನೋಭಾವದ ಹೆಗ್ಗಳಿಕೆಯೂ ಇದೆ. ಆದೇಕೆ ಮೌಢ್ಯಕ್ಕೆ ಹೆಚ್ಚು ಬೆಲೆ ಕಟ್ಟಲಾಗುತ್ತದೆ ಎಂಬುದು ಸಾಂಸ್ಕೃತಿಕ ಪ್ರಶ್ನೆಯಲ್ಲ; ಅದು ರಾಜಕೀಯ ಪ್ರಶ್ನೆ. ಸಮಾಜದ ತಥಾಕಥಿತ ಶ್ರೇಷ್ಠರು ತಮ್ಮ ಸ್ಥಾನವು ಕಳೆದುಹೋಗದಂತೆ ಅದನ್ನು ಭದ್ರಪಡಿಸಿಕೊಳ್ಳಲು ಇತಿಹಾಸದುದ್ದಕ್ಕೂ ಮೌಢ್ಯವನ್ನು ಪೋಷಿಸುತ್ತಾ ಬಂದಿದ್ದಾರೆ, ವಿಕಾಸಶೀಲ ಜ್ಞಾನಕ್ಕೆ ಗೌಣವಾದ ಸ್ಥಾನ ನೀಡುತ್ತಾ ಬಂದಿದ್ದಾರೆ. ಇಪ್ಪತ್ತೊಂದನೆಯ ಶತಮಾನದಲ್ಲಿ ಇದರ ಅಗತ್ಯವಿಲ್ಲ. ಕೌಟಿಲ್ಯನು ತನ್ನ 'ಅರ್ಥಶಾಸ್ತ್ರ' ಗ್ರಂಥದಲ್ಲಿ ಮೂಢನಂಬಿಕೆಗಳನ್ನು ಏತಕ್ಕಾಗಿ ಪೋಷಿಸಬೇಕೆಂದು ಸುದೀರ್ಘವಾಗಿ ವಿವರಿಸಿದ್ದಾನೆ. ಅದನ್ನು ಗಮನಿಸಿ ವಿಶ್ಲೇಷಿಸಿಕೊಳ್ಳುವುದು ಆರೋಗ್ಯಕರ.

ಕವಿತಾ ಶಾಖೆಯ ಮೇಲೆ ಕುಳಿತು 'ರಾಮ-ರಾಮ' ಎಂದು ಸುಮಧುರವಾಗಿ ಹಾಡುವ ಕೋಗಿಲೆ ವಾಲ್ಮೀಕಿ. ಅವನು ಕಲ್ಪಿಸಿಕೊಂಡ ಸೇತುವೆಯನ್ನು ಇಂದು ರಾಜಕೀಯ ದಾಳವನ್ನಾಗಿ ಬಳಸಿಕೊಳ್ಳಲು ಅದು ಒಂದು ಗಹನವಾದ ನಂಬಿಕೆಯಾಗಿ ಪರಿವರ್ತನೆಗೊಂಡಿದೆಯೆಂದು ಹೇಳುತ್ತಿರುವ ವಿದ್ವಾಂಸರ ಕುಚೋದ್ಯವು ಮಾನ್ಯವಲ್ಲ. ಈಗ ಚರ್ಚೆಗೆ ಗ್ರಾಸವಾಗಿರುವ ನಿಸರ್ಗ ನಿರ್ಮಿತ ಅದ್ಭುತವನ್ನು ಸೇತುವೆಯೆಂದು ಕರೆಯುವುದು ಕಲುಷಿತ ಮನಸ್ಸಿಗೆ ಮಾತ್ರ ಸಾಧ್ಯ. ಅದರಿಂದ ಕ್ಷುಲ್ಲಕ ರಾಜಕೀಯ ನಡೆಸುವುದು ಖಂಡನೀಯ. ನಮ್ಮ ವಿದ್ವಾಂಸರು ಎರಡು ಹೆಜ್ಜೆ ಮುಂದೆ ಹೋಗಿ ಸೇತುವೆ ಕಟ್ಟಲು ನೆರವಾದ ಅಳಿಲಿಗೆ ದೇವಸ್ಥಾನ ಕಟ್ಟಿಸಿ 'ನಂಬಿಕೆ'ಯನ್ನು ಇನ್ನೂ ವ್ಯಾಪಕವಾಗಿ ಬೆಳೆಸಬಹುದೇನೋ !

## ಬೇಕಿರುವುದೆಲ್ಲ...

ಬೊಲಿವಿಯಾದಲ್ಲಿ ಒಂದು ದಿನ
ಅಮೆರಿಕಾ 'ಚೆ'ಯನ್ನು ಕೊಲ್ಲಿಸಿದ ಆ ದಿನ
ಮೂಕಮೌನಕ್ಕೆ ಒಂದು ದನಿ, ಗಾಯಕ್ಕೆ ಭರವಸೆ,
ಕಣ್ಣೀರಿಗೆ ಕೈ ಇಲ್ಲವಾದ ಒಂದು ದಿನ
ಕಾಂಡರ್ ಹದ್ದು ಸದ್ದಿಲ್ಲದೆ ಅತ್ತಿತು
ಮ್ಯಾಕಾ ಗಿಳಿಗೆ ತನ್ನದೇ ಪಂಚವರ್ಣ ಅಸಹ್ಯವಾಯಿತು
ಅಮೆಜ಼ಾನಿನ ಅಲೆಗಳಲ್ಲಿ, ಆಂಡೀಸಿನ ಹಿಮದಲ್ಲಿ
ರಕ್ತ ಹೋರಾಡಿದ್ದನ್ನು ಅದು ಕಂಡಿದ್ದಿತು
ಸಾಫೈಯರ್ ಹೂಗಳಿಗೆ ತಿಳಿದಿತ್ತು
ಗಾಳಿಗುದುರೆ ಏರಿಹೋದ ಹೋರಾಟದ ಪರಾಗರೇಣುಗಳಿಗೆ
ಗಡಿಯಿಲ್ಲ, ಭಯದ ಬೆದರಿಕೆ ಇಲ್ಲ ಎಂದು
ಸಾಮ್ರಾಜ್ಯಶಾಹಿಯ ಕ್ರೂರ ಶಾಂತಿ ವಿರಾಮ ಕಾಣಲು
ಬಂಡಾಯದ ಅಂತಃಕರಣ ಬೇಕೆಂದು

ಸರ್ವಾಧಿಕಾರಿಗಳ ಸಂಕೋಲೆಗಳಿಗೆ
ಮತಾಂಧರ ಮತಿಗೇಡಿ ಅಟ್ಟಹಾಸಗಳಿಗೆ
ಅಂಕಲ್ ಸ್ಯಾಮನ ಬೆಂಬಲದ ಬೀಗ
ಕೋವಿಯ ಕೀಲಿಯಾಗಿ ಕಾವ್ಯದೊಂದಿಗೆ
ಮುಗುಳುನಗುತ್ತ 'ಚೆ' ಬಂದಾಗ



ಹೇಡಿ ಸ್ಯಾಮಿಗೆ ತೊಳ್ಳೆ ನಡುಗಿದ ದಿನಗಳೆಷ್ಟು
ಅದಮ್ಯ ಕನಸುಗಳೇ ಇಲ್ಲ ಅವನಿಗೆ
ಕಿಲುಬು ಹಿಡಿಯುವ ಆಯುಧಗಳ ಬಿಟ್ಟು
ಎದೆಯ ಮೇಲಿದೆ 'ಚೆ'ನ ಮುಗುಳುನಗೆ
ಚಡಪಡಿಕೆ ರಟ್ಟೆಯೊಳಗೆ
ಯಾಂಕಿಗಳ ಸೊಡ್ಡಿಗೆ ಗುದ್ದಬೇಕು
ಸ್ಯಾಮನ ಗೋಣು ಮುರಿಯಬೇಕು
ಬದುಕಿಗೆ ಬೇಕಿರುವುದು ಸಿರಿಯ ಮದವಲ್ಲ
ಕಾಲು ನೆಕ್ಕುವ ಗುಲಾಮ ಪ್ರಭುತ್ವಗಳಲ್ಲ
ಬೇಕಿರುವುದೆಲ್ಲ ರಕ್ತಸ್ರಾವದ ಕಾಲಿಗೆ,
ಗುಳಿಬಿದ್ದ ಕಣ್ಣುಗಳಿಗೆ ಕನಸುಗಳು,
ನೆಲದಲ್ಲಿ ನಕ್ಷತ್ರನಗೆಯ
ಸ್ವಾತಂತ್ರ್ಯದ ಕನಸುಗಳು

ಹಾಸನ — **ಕೆ. ಎಸ್. ರವಿಕುಮಾರ್**

*(ಅಕ್ಟೋಬರ್ ೯, ೧೯೬೭ರಂದು ಕ್ರಾಂತಿಕಾರಿ ಚೆ ಗುವಾರಾ ಬೊಲಿವಿಯಾದಲ್ಲಿ ಅಮೆರಿಕಾದ ಬಾಡಿಗೆ ಕೊಲೆಗಾರರಿಂದ ಹತ್ಯೆಗೀಡಾದರು. ಸಾಮ್ರಾಜ್ಯಶಾಹಿಯ ಕ್ರೌರ್ಯ ಎದುರಿಸುತ್ತಲೇ ಕೊನೆಯುಸಿರೆಳೆದ 'ಚೆ'ಗೆ ಈ ಕವಿತೆಯ ಸಮರ್ಪಣೆ : ಅಂದೇ ಜನಿಸಿದ ರವಿಕುಮಾರ್ ಅವರಿಂದ.)*

ವಸುಂಧರೆಯ ರತ್ನಗರ್ಭದಿಂದ ಅನೇಕ ಅಮೂಲ್ಯವಾದ ವಸ್ತುಗಳನ್ನು ಹೊರ ತೆಗೆಯದೆಯೇ ನಾಗರಿಕತೆ ಬೆಳೆದಿಲ್ಲ. ಅದು ಬೆಳೆಯುವುದು ಬೇಡವೆಂದು ಆಗ್ರಹಿಸಿದರೆ ಅದರ ಚಲನೆ ನಿಲ್ಲುವುದೂ ಇಲ್ಲ. ನಾಳೆ ಹಿಮಾಲಯ ಸ್ಫೋಟಿಸಲು ಸನ್ನದ್ಧರಾಗುತ್ತಿರುವವರನ್ನು ನಿಗ್ರಹಿಸುವುದು ಅವಶ್ಯಕವೆಂಬುದು ನಿಜ. ಈಗಾಗಲೇ ಗೋಮುಖದಲ್ಲಿ ಹಿಮದ ಕಲ್ಲು ಹಿಂದಕ್ಕೆ ಸರಿಯುತ್ತಿದೆ. ಅದಕ್ಕೆ ಪ್ರತಿರೋಧ ಒಡ್ಡಬೇಕಾದ್ದು ಯಾವುದೋ ಯಃಕಶ್ಚಿತ್ ನಂಬಿಕೆಯನ್ನು ಊರ್ಜಿತಗೊಳಿಸಲು ಅಲ್ಲ. ಪ್ರಸ್ತುತ, ನಿಸರ್ಗದ ಒಂದು ಅದ್ಭುತವನ್ನು ರಾಮಸೇತುವೆಂದು ಕರೆಯುವುದು ಸಂಕುಚಿತ ಬೌದ್ಧಿಕ ವ್ಯಾಪಾರದ ಒಂದು ಫಲ. ಹಳೆ ಒಡಂಬಡಿಕೆ ಮತ್ತು ಹೊಸ ಒಡಂಬಡಿಕೆ ರಾಜಕೀಯ ವಿಹ್ವಲಗಳಿಗೆ ಕೆಲವೇಳೆ ದಾಖಲೆಗಳಾಗಿರುವಾಗ ರಾಮಾಯಣಕ್ಕೆ ಆ ದುರ್ಗತಿ ಏಕೆ ಬೇಡವೆಂಬ ವಾದ ಅಪಥ್ಯ.

* * *

ರಾಜ್ಯದಲ್ಲಿ ಮತ್ತೆ ಚುನಾವಣೆಯ ಕಾವು ಏರುತ್ತಿದೆ. ಮುಖ್ಯಮಂತ್ರಿಯವರ ಪಕ್ಷವು ಮೈತ್ರಿ ಪಕ್ಷದೊಂದಿಗೆ ಸೇರದೆ ಸ್ವತಂತ್ರವಾಗಿ ಚುನಾವಣೆಯಲ್ಲಿ ಸ್ಪರ್ಧಿಸುವುದಾಗಿ ಘೋಷಿಸಿಕೊಂಡಿದೆ. ಭಾರತೀಯ ಜನತಾ ಪಕ್ಷವು ಅನಿವಾರ್ಯವಾಗಿ ಸ್ವತಂತ್ರವಾಗಿ ಕಣಕ್ಕಿಳಿಯಬೇಕಾಗಿದೆ. ಸೇತುಸಮುದ್ರಂ 'ಪ್ರತಿಭಟನೆಗಳು' ಆ ಪಕ್ಷದ ಚುನಾವಣಾ ಪ್ರಚಾರ ವೈಖರಿಗೆ ಒಂದು ಮಾದರಿಯಾಗಿದೆ. ಕುಮಾರಸ್ವಾಮಿಯವರು ಅಧಿಕಾರಕ್ಕೆ ಬಂದಾಗ ತಮಗೆ 'ಜಾತ್ಯತೀತ' ಎಂದರೇನೆಂದು ತಿಳಿಯದೆಂದು ಹೇಳಿ ತಮ್ಮ ಅಜ್ಞಾನವನ್ನು ಬಹಿರಂಗವಾಗಿ ಒಪ್ಪಿಕೊಂಡಿದ್ದರು. ಕಾಲ ಕಳೆದಂತೆ ಅದರರ್ಥ ಅವರಿಗೆ ಕ್ರಮೇಣ ಗೋಚರಿಸಿದೆಯಂತೆ. ಅವರ ಜ್ಞಾನದ ವ್ಯಾಪ್ತಿಯು ಸಮೃದ್ಧವಾಗಿ ವಿಸ್ತರಿಸಲೆಂದು ಆಶಿಸೋಣ. ಆದರೆ ಅದೇಕೆ ಈಗ ಅವರಿಗೆ 'ಜಾತ್ಯತೀತ' ಮೌಲ್ಯವು ಆಕರ್ಷಣೀಯವೆನಿಸಿದೆ ? ಭಾಜಪದೊಡನೆ ಸೇರಿದ್ದಕ್ಕೆ ಪಶ್ಚಾತ್ತಾಪಪಟ್ಟು, ಪ್ರಾಯಶ್ಚಿತ್ತ ಮಾಡಿಕೊಂಡು, ಯಡಿಯೂರಪ್ಪನವರಿಗೆ ಮುಖ್ಯಮಂತ್ರಿ ಪದವಿಯು ದೊರೆಯದಂತೆ ಮಾಡಲು ಇರಬಹುದು. ಮುಖ್ಯಮಂತ್ರಿಯವರಿಗೆ 'ಜಾತ್ಯತೀತ' ತಿಳಿದಿಲ್ಲದಿದ್ದರೂ 'ಜಾತಿ' ಚೆನ್ನಾಗಿ ತಿಳಿದಿದೆ. ಆದ್ದರಿಂದಲೇ ಕೆಲವು ಕಲಾವಿದರನ್ನು ಮತ್ತು ಮಾಧ್ಯಮದವರನ್ನು ಆಯ್ದುಕೊಂಡು ''ನೀವು ನಮ್ಮವರು, ಆದ್ದರಿಂದ ನಮ್ಮ ಚಾನೆಲ್‌ಗೆ ಬನ್ನಿ'' ಎಂದು ಕಾವೇರಿಯೋ, ಕಸ್ತೂರಿಯೋ ಯಾವುದೋ ಶ್ರೀಮತಿ ಅನಿತಾ ಕುಮಾರಸ್ವಾಮಿಯವರು ಆರಂಭಿಸುವ ಚಾನೆಲ್‌ಗೆ ಆಮಂತ್ರಿಸುತ್ತಿದ್ದಾರೆ. ''ಸೂರ್ಯೋದಯ' ಪತ್ರಿಕೆಯ ಮರು ಉದಯಕ್ಕೂ ದೇವೇಗೌಡರು ಒಲವು ತೋರಿದ್ದಾರೆಂದು ಹೇಳುತ್ತಾರೆ. ಆಗ 'ತಮ್ಮವರನ್ನು' ಇನ್ನೂ ಹೆಚ್ಚಿನ ಸಂಖ್ಯೆಯಲ್ಲಿ ಸೆಳೆದುಕೊಳ್ಳಲು ಯತ್ನಿಸಬಹುದು. ಲೋಕಸಭಾ ಸದಸ್ಯೆ ಶ್ರೀಮತಿ ತೇಜಸ್ವಿನಿ ಯಾರ ಕಡೆಯವರೆಂದು ಆಗ ತೀರ್ಮಾನವಾದೀತು !

* * *

ಇಂಗ್ಲೆಂಡಿನಲ್ಲಿ ಬಿ.ಸಿ.ಸಿ.ಐ.ನ ಕ್ರಿಕೆಟ್ ತಂಡ ಸಾಕಷ್ಟು ಹಿಗ್ಗಾಮುಗ್ಗಾ ಇಕ್ಕಿಸಿಕೊಳ್ಳಲಿಲ್ಲವೆಂದು ಕೆಲವರಿಗೆ ಅಸಮಾಧಾನವಿದೆ. ಮುಂದೆ ಕಪಿದೇವನ ತಂಡಕ್ಕೆ ಸೇರುವ ಬಯಕೆ ಉಳ್ಳವರಾದರೆ ಸ್ವತಃ ರಾಹುಲ ದ್ರಾವಿಡ್ ಕೂಡ ಹಾಗೆ ಭಾವಿಸಬಹುದು. ಉಳ್ಳವರ ಕ್ರೀಡಾಲೋಕದಲ್ಲಿ ನಡೆಯುವ ಕಾರುಬಾರಿನ ನೀತಿ-ಅನೀತಿಗಳನ್ನು ಕೆದಕಿ ಹೊರತೆಗೆಯಬಾರದೆಂಬ ಅಲಿಖಿತ ಕಾನೂನು ನಮ್ಮಲ್ಲಿ ಜಾರಿಯಲ್ಲಿದೆ. ಆದ್ದರಿಂದ ಮೈಸೂರು 'ಮಹಾರಾಜ' ಕರ್ನಾಟಕ ಕ್ರಿಕೆಟ್ ಬೋರ್ಡ್‌ನ ಅಧ್ಯಕ್ಷರಾದದ್ದು ಹೇಗೆ ಎಂಬುದನ್ನು ಪೂರ್ತಿಯಾಗಿ ತಿಳಿದುಕೊಳ್ಳಲು ಸಾಧ್ಯವಾಗಿಲ್ಲ. ಕೋಟಿಗಟ್ಟಲೆ ಖಜಾನೆ ಇರುವೆಡೆ ಯಾರು ಬಂದರೂ ಅವರು ಮಹಾರಾಜರಂತೆಯೇ ವರ್ತಿಸುತ್ತಾರಾದ್ದರಿಂದ ಯಾರಾದರೂ ಬರಲಿ, ನಮಗೇನು ಎನ್ನುವ ಭಾವನೆ ಹರಡಿದೆ. ಆದರೆ ಜಿ. ಕಸ್ತೂರಿ ರಂಗನ್ ಮಹಾರಾಜರೊಡನೆ ಸೇರಿಕೊಂಡದ್ದು ತೀರಾ ಅವಲಕ್ಷಣವೆನಿಸುತ್ತದೆ. ಮಾಧ್ಯಮಗಳ ಭರಾಟೆಗೆ ಸಿಗದೆ ಎಲ್ಲೋ ತಮ್ಮಷ್ಟಕ್ಕೆ ತಾವು ವಿಜೃಂಭಿಸುವ ಫುಟ್‌ಬಾಲ್ ಮತ್ತು ಹಾಕಿ ಈ ತಿಂಗಳಲ್ಲಿ ಗಣನೀಯ ಗೆಲುವನ್ನು ಸಾಧಿಸಿವೆ. ಮಾಧ್ಯಮ ಪೋಷಿತ ಕ್ರಿಕೆಟ್ ಹಿಂದಿಯನ್ನು ಉಗ್ರವಾಗಿ ಪೋಷಿಸುತ್ತಿದೆ. ಅಂಥದೇನನ್ನೂ ಮಾಡದ ಫುಟ್‌ಬಾಲ್‌ನಲ್ಲಿ ಸಂದ ವಿಜಯವು ಇನ್ನೂ ಗಟ್ಟಿಯಾಗಿ, ಫುಟ್‌ಬಾಲ್ ತಂಡಗಳನ್ನು ಚೆನ್ನಾಗಿ ಬೆಳೆಸಲೆಂದು ಆಶಿಸಬೇಕಾಗಿದೆ. ಸಿನಿಮಾದಲ್ಲಿ ಮಾತ್ರವೇ ಭಾರತಕ್ಕೆ ಹಾಕಿ ವಿಜಯ ಸಾಧ್ಯವೆಂಬ ಮಾತನ್ನು ಅಸತ್ಯವಾಗಿಸಿರುವ ಈ ತಿಂಗಳ ಹಾಕಿ ವಿಜಯವು ನೂರಾರು ಯುವಕ- ಯುವತಿಯರಿಗೆ ಸ್ಫೂರ್ತಿ ನೀಡಲೆಂದು ಸಹ ಆಶಿಸಬೇಕಾಗಿದೆ.

* * *

ಹೈದರಾಬಾದಿನಲ್ಲಿ ಎರಡನೆ ಬಾರಿಗೆ, ಬಹಳ ಕಡಿಮೆ ಅಂತರದಲ್ಲಿ, ಮತ್ತೆ ಬಾಂಬುಗಳನ್ನು ಸ್ಫೋಟಿಸಿರುವ ದುಷ್ಕರ್ಮಿಗಳನ್ನು ಪತ್ತೆಹಚ್ಚುವ ಕೆಲಸ ಭರದಿಂದ ಸಾಗಿದೆಎನ್ನಲಾಗಿದೆ. ''ಪೋಟಾ ಕಾಯಿದೆ ಇದ್ದಿದ್ದರೆ ಹೀಗೆಲ್ಲಾ ಆಗುತ್ತಿರಲಿಲ್ಲ'' ಎಂದು ಯಥಾಪ್ರಕಾರ ಬೊಚ್ಚುಬಾಯಿ ವೆಂಕಯ್ಯ ನಾಯ್ಡು ಹೇಳಿದ್ದಾರೆ. ಅಮೆರಿಕಾದೊಡನೆ ನಮ್ಮ ಪ್ರಧಾನಿ ಹೆಚ್ಚುಹೆಚ್ಚು ಬೆರೆಯುತ್ತಾ ಹೋದರೆ ಎಲ್ಲಾ ಪೋಟಾ-ಖೋಟಾಗಳೂ ಅಪ್ರಸ್ತುತವಾಗಿ ವಿನಾಕಾರಣ ಜೀವ ಕಳೆದುಕೊಳ್ಳುವ ಮಂದಿ ನಮ್ಮಲ್ಲಿ ಹೆಚ್ಚಬಹುದೆಂಬ ಆತಂಕ ನಮ್ಮದಾಗಿದೆ. ಮತೀಯ ದುಷ್ಟಶಕ್ತಿಗಳು ಕಾಲುಕೆರೆದು ಜಗಳಕ್ಕಿಳಿಯಲಿ, ಕೊಲೆಗಳು ಸಂಭವಿಸಲಿ ಎಂಬ ಮೃಗೀಯ ಅಪೇಕ್ಷೆಯನ್ನು ನಿರರ್ಥಕಗೊಳಿಸುವುದು ನಮ್ಮ ಜವಾಬ್ದಾರಿಯಾಗಿದೆ. ಅದನ್ನು ಹೈದರಾಬಾದಿನ ಜನತೆ ಎರಡು ಬಾರಿ ಬಹಳ ಸ್ಪಷ್ಟವಾಗಿ ಗುರುತಿಸಿ ಅಭಿನಂದನೀಯ ಕ್ರಮ ಅನುಸರಿಸಿದ್ದಾರೆ. ಈ ರೀತಿಯ ಸ್ಫೋಟಗಳು ನಡೆದಾಗ ''ನಾವು ಮಾತುಕತೆಗೆ ಸಿದ್ಧರಿದ್ದೇವೆ'' ಎಂಬ ಹೂರಣವಿಲ್ಲದ ಮಾತಿಗೆ ಅವಕಾಶವಿಲ್ಲದಿರುವುದು ಸಹಜವಾಗಿದೆ. ಇಂತಹ ಪ್ರಕರಣಗಳನ್ನು ಹತ್ತಿಕ್ಕಲು ಸಾರ್ವಜನಿಕರೇನು ಮಾಡಬಹುದೆಂಬುದನ್ನು ಕೇಂದ್ರ ಸರ್ಕಾರವು ತಿಳಿಸಿಕೊಡಬೇಕು. ಅದಕ್ಕೆ ಪೂರಕವಾದ ಕೆಲಸ ಆಯೋಜಿಸಲು ಆಗ ಸಾಧ್ಯವಾಗುತ್ತದೆ.

* * *

ಶ್ರೀಮದ್ಭಗವದ್ಗೀತೆಯ ಬಗ್ಗೆ ಅವಾಸ್ತವಿಕ ತಿಳಿವಳಿಕೆಯುಳ್ಳ ಶ್ರೀವಾಸ್ತವ ಎಂಬ ನ್ಯಾಯಮೂರ್ತಿಗಳು ಅಲಹಾಬಾದ್ ಶ್ರೇಷ್ಠ ನ್ಯಾಯಾಲಯದ ಒಂದು ತೀರ್ಪಿನಲ್ಲಿ ''ಗೀತೆಯು ಭಾರತದ ಎಲ್ಲ ಪ್ರಜೆಗಳ ಧರ್ಮವಾಗಬೇಕು'' ಎಂದು ಉಪದೇಶಿಸಿ ''ಶ್ರೀವಾಸ್ತವಾನಂದ'' ಎಂಬ ನಾಮಧೇಯಕ್ಕೆ ಅರ್ಹತೆ ಪಡೆಯಹೊರಟಿದ್ದಾರೆ. ಸಂವಿಧಾನ ಮತ್ತು ಕಾನೂನಿನ ಧರ್ಮಗಳನ್ನು ಅನುಸರಿಸಲು ಪ್ರೇರಕರಾಗಬೇಕಾದ ನ್ಯಾಯಮೂರ್ತಿಗಳು ಸ್ವಾಮಿಗಳಾಗಿ ಪರಿವರ್ತನೆ ಹೊಂದಿರುವುದು ಆಶ್ಚರ್ಯಕರ ಮತ್ತು ಅನಾರೋಗ್ಯಕರ. ''ಸ್ವಧರ್ಮೇ ನಿಧನಂ ಶ್ರೇಯಃ'' ಎಂದು ಬೋಧಿಸುವ ಗೀತೆಯ ಪ್ರಕಾರ ಭಾರತದಲ್ಲಿ ''ವರ್ಣಪ್ರಜ್ಞೆ'' ಮತ್ತು ''ವರ್ಣಧರ್ಮ'' ಆದರಣೀಯವಾದುದು. ಅಂದರೆ, ವರ್ಣವಿಂಗಡಣೆಯನ್ನು ಒಪ್ಪಿ, ಅದು ಸದಾ ಉಳಿಯಲೆಂದು ಹಾರೈಸಬೇಕೆಂದು ಗೀತಾಚಾರ್ಯನು ನಿರೀಕ್ಷಿಸುತ್ತಾನೆ. ಆದರೆ ಸಂವಿಧಾನಾಚಾರ್ಯರು ಇದಕ್ಕೆ ವ್ಯತಿರಿಕ್ತವಾಗಿ ವರ್ಣಾತೀತ (ಮತ್ತು ಜಾತ್ಯತೀತ) ಸಮಾಜವನ್ನು ರಚಿಸಬೇಕೆಂದು ಆದೇಶಿಸಿದ್ದಾರೆ. ನ್ಯಾಯಾಲಯದ ಆಯ್ಕೆ ಇವೆರಡರಲ್ಲಿ ಯಾವುದಾಗಿರಬೇಕೆಂಬುದರ ಬಗ್ಗೆ ಸಂಶಯದ ಮಾತೇ ಇಲ್ಲ. ಸಂವಿಧಾನದ ರಕ್ಷಕರು ಅದರ ಭಕ್ಷಕರಾಗಕೂಡದೆಂಬ ಮಾತು ಭಾರತದ ಎಲ್ಲ ಪ್ರಜೆಗಳಿಗೂ ಅನ್ವಯವಾಗುತ್ತದೆ. ಆ ಸಂವಿಧಾನವನ್ನು ಪರಿಷ್ಕರಿಸುವುದರಲ್ಲಿ ಜನರ ಪಾತ್ರವಿದೆ, ನಿಜ; ಆದರೆ ಇತಿಹಾಸದಲ್ಲಿ ಹಿಂದಕ್ಕೆ ಚಲನೆ ಅಸಾಧ್ಯವೆಂದು ಸ್ವತಃ ನ್ಯಾಯಮೂರ್ತಿಗಳು ಸಹ ಅಂಗೀಕರಿಸಬೇಕಾಗುತ್ತದೆ. ಏನೋ ಚಪಲ, ಏನೋ ಮೂಢಶ್ರದ್ಧೆ, ಏನೋ ಕಿತಾಪತಿ, ಎಂದೆಲ್ಲಾ ವ್ಯಾಖ್ಯಾನಿಸದೆ ಆಧುನಿಕ ಗೀತಾಭಾಷ್ಯಕಾರ ಶ್ರೀವಾಸ್ತವ ಅವರ ಮಾತನ್ನು ಅನುಚಿತವೆಂದು ತಳ್ಳಿಹಾಕುವುದು ಸೂಕ್ತ.

* * *

ಉಕ್ರೈನ್ ಗಣರಾಜ್ಯವು ಹಿಂದೆ ಸೋವಿಯತ್ ಒಕ್ಕೂಟದ ಭಾಗವಾಗಿತ್ತು. ೧೯೧೭ರ ಕ್ರಾಂತಿಯನ್ನು ಸಫಲಗೊಳಿಸಲು ವಿಶೇಷವಾಗಿ ಶ್ರಮಿಸಿದ್ದ ದೇಶ ಮತ್ತು ಹಿಟ್ಲರ್ ವಿರುದ್ಧ ಅಪ್ರತಿಮವಾಗಿ ಹೋರಾಡಿದ್ದ ನಾಡು ಅದು. ಅಲ್ಲಿ ಅಮೆರಿಕಾ ತನ್ನ ತೆರೆಮರೆಯ ಅಧಿಕಾರವನ್ನು ಈಚಿನ ವರ್ಷಗಳಲ್ಲಿ ಚಲಾಯಿಸಿ ಸದ್ಯಕ್ಕೆ ಸ್ವಲ್ಪ ಹಿಮ್ಮೆಟ್ಟಿದೆ. ಈ ತಿಂಗಳು ಉಕ್ರೈನ್‌ನಿಂದ ಬಂದಿರುವ ಒಂದು ಸುದ್ದಿ ಸ್ವಲ್ಪಮಟ್ಟಿಗೆ ಉಕ್ರೈನಿನ ಜನಸಾಮಾನ್ಯರು ಅಮೆರಿಕಾ ಪ್ರಭುಗಳ ಬಗ್ಗೆ ಎಂತಹ ''ಆದರ'' ಇರಿಸಿಕೊಂಡಿದ್ದಾರೆಂಬುದನ್ನು ಸೂಚಿಸುತ್ತದೆ. ನಮ್ಮ ವಿದ್ಯಾರ್ಥಿದೆಸೆಯಲ್ಲಿ ಶ್ರೀ ಬಿ. ಎಸ್. ಶೇಷಾದ್ರಿಯವರು ಯಾರನ್ನಾದರೂ ಚೆನ್ನಾಗಿ ಬಯ್ಯಬೇಕೆನಿಸಿದಾಗ ಅವರನ್ನು ''ಸ್ಕಂಕ್'' ಎಂದು ಕರೆಯುತ್ತಿದ್ದರು. ಅದೊಂದು ಪ್ರಾಣಿ. ಮೈಮೇಲೆ ಪಟ್ಟಿಗಳಿರುತ್ತವೆ. ದುರ್ವಾಸನೆ ಅದರ ವೈಶಿಷ್ಟ್ಯ. ಅದರಿಂದ ದೂರವಿರಬೇಕೇ ವಿನಾ ಹತ್ತಿರ ಸುಳಿಯುವಂತಿಲ್ಲ. ಉಕ್ರೈನಿನ ಒಬ್ಬ ತಿಳಿವಳಿಕಸ್ಥ ನಾಗರಿಕ ತನ್ನ ಎರಡು ಸಾಕು ಮರಿ ಸ್ಕಂಕ್‌ಗಳಿಗೆ ಆಪ್ತವಾಗಿ ಬುಷ್ ಮತ್ತು ಕ್ಲಿಂಟನ್ ಎಂದು ಹೆಸರಿಟ್ಟಿದ್ದಾನೆ. ಇದರರ್ಥ ಇಷ್ಟೆ: ಅಮೆರಿಕಾ ಒಂದು ಸ್ಕಂಕ್; ಅದರ ಬಳಿ ಸುಳಿಯಬೇಡಿ. ಮತ್ತು, ಅಮೆರಿಕಾದಲ್ಲಿ ಬುಷ್ ಇದ್ದರೂ ಅಷ್ಟೆ, ಕ್ಲಿಂಟನ್ ಇದ್ದರೂ ಅಷ್ಟೆ. ಅದು ಸ್ಕಂಕ್‌ತನ ಕಳೆದುಕೊಳ್ಳುವುದಿಲ್ಲ, ದುರ್ವಾಸನೆಯನ್ನು ದೂರೀಕರಿಸುವುದಿಲ್ಲ. ಮಾನ್ಯ ಮನಮೋಹನ ಸಿಂಗ್ ಅವರಿಗೆ ಅದು ತಿಳಿದರೆ ನಮ್ಮ ದೇಶಕ್ಕೆ ಆಪ್ಯಾಯಮಾನ.



# ರಾಜ್ಯ ಜಲಸಂಪನ್ಮೂಲ ಬಳಕೆ ಹಾಗೂ ವಿವಾದಗಳು

**ಎಚ್. ಕೆ. ಪಾಟೀಲ**

ಕರ್ನಾಟಕ ವಿಧಾನ ಪರಿಷತ್ ಸದಸ್ಯರು ಹಾಗೂ
ವಿರೋಧ ಪಕ್ಷದ ನಾಯಕರು

ರಾಜ್ಯದ ಜಲಸಂಪನ್ಮೂಲ ಬಳಕೆ, ವಿವಾದಗಳ ಬಗ್ಗೆ ಕೇವಲ ೩೦ ನಿಮಿಷಗಳಲ್ಲಿ ವಿಷಯ ಮಂಡನೆ ಮಾಡುವುದು ಕಠಿಣ. ಹಿಂದಿಯಲ್ಲಿ ಒಂದು ಮಾತಿದೆ 'ಗಾಘರ ಮೇ ಸಾಗರ' ಅಂದರೆ 'ಸಮುದ್ರವನ್ನು ಒಂದು ಕೊಡದಲ್ಲಿ' ಎಂದು. ಸಾಗರದಂತಹ ವಿಷಯವನ್ನು ಅಲ್ಪಕಾಲದಲ್ಲಿ ಸೂಕ್ಷ್ಮವಾಗಿ ಮಂಡಿಸಲು ಪ್ರಯತ್ನಿಸುವೆ.

ಕರ್ನಾಟಕ ರಾಜ್ಯವು ಪ್ರಕೃತಿಯ ವಿಶೇಷ ಅನುಗ್ರಹಕ್ಕೆ ಪಾತ್ರವಾದ ರಾಜ್ಯ. ರಮ್ಯ ಕರಾವಳಿ, ಹಸಿರು ಹೊತ್ತ ಸಹ್ಯಾದ್ರಿಯ ಸಾಲು, ವಿಶಾಲವಾದ ಬಯಲು ಸೀಮೆ, ಖನಿಜ ಸಂಪತ್ತಿನಿಂದ ಸಮೃದ್ಧವಾದ ವಸುಂಧರೆ. ರಾಜ್ಯದಲ್ಲಿ ಸರಾಸರಿ ಮಳೆಯೂ ಕಡಿಮೆಯೇನಲ್ಲ. ೧೧೦೦ ಎಂ.ಎಂ.ಗಿಂತ ಅಧಿಕ. ಆದರೆ ಒಂದೆಡೆ ಅತೀ ಕಡಿಮೆ. ಉದಾಹರಣೆಗೆ, ಚಳ್ಳಕೆರೆ, ಮೊಳಕಾಲ್ಮೂರು. ಇಲ್ಲಿ ೪೦೦ ಎಂ.ಎಂ. ಮಳೆ; ಇನ್ನೊಂದೆಡೆ ಆಗುಂಬೆ, ಹೊಸನಗರ. ಇಲ್ಲಿ ೪೦೦೦ ಎಂ.ಎಂ. ಗಿಂತ ಅಧಿಕ.

ಕರ್ನಾಟಕ ಜಲಸಂಪನ್ಮೂಲ ಅಂದರೆ ಭೂಮಿಯ ಮೇಲೆ ಹರಿಯುವ ಹಳ್ಳ-ಕೊಳ್ಳಗಳು, ನದಿಗಳ ಉಪನದಿಗಳು, ಕೆರೆ-ಕಟ್ಟೆಗಳು ಹಾಗೂ ಭೂಮಿಯ ಒಳಗಿರುವ ಅಂತರ್ಜಲ. ಇವೆರಡೂ ಸೇರಿದಾಗ ಕರ್ನಾಟಕದ ಜಲಸಂಪನ್ಮೂಲವಾಗುವುದು. ನಾವಿಂದು ಜಲಸಂಪನ್ಮೂಲ ವಿವಾದಗಳನ್ನು ಚರ್ಚಿಸಲಿರುವುದರಿಂದ ನದಿಗಳಲ್ಲಿರುವ ಜಲಸಂಪನ್ಮೂಲಕ್ಕೆ ವಿಷಯವನ್ನು ಸೀಮಿತಗೊಳಿಸೋಣ.

**ರಾಜ್ಯ ಒಟ್ಟು ಏಳು ನದಿ ಕಣಿವೆಗಳಲ್ಲಿ ಹಂಚಿಹೋಗಿದೆ**

೧. ಕೃಷ್ಣ ಕಣಿವೆ ಪ್ರದೇಶ ರಾಜ್ಯದ ಒಟ್ಟು ಭೌಗೋಳಿಕ ಪ್ರದೇಶದ ಶೇಕಡ ೫೮.೬೬ರಷ್ಟಿದೆ. ಮಲಪ್ರಭಾ, ಘಟಪ್ರಭಾ, ತುಂಗಭದ್ರಾ, ಭೀಮಾ ಹಾಗೂ ಡೋಣಿ ಕೃಷ್ಣ ನದಿಯ ಪ್ರಮುಖ ಉಪನದಿಗಳು. ಈ ನದಿಗಳಿಗೆ ನೀರೊದಗಿಸುವ ಅಸಂಖ್ಯ ಹಳ್ಳ-ತೊರೆಗಳ ಜಾಲ ಈ ಪ್ರದೇಶದಲ್ಲಿ ಹೆಣೆದುಕೊಂಡಿದೆ.

೨. ದಕ್ಷಿಣ ಗಂಗೆ ಎಂದೇ ಖ್ಯಾತವಾಗಿರುವ ಕಾವೇರಿಯ ಕ್ಷೇತ್ರ ರಾಜ್ಯದ ಶೇಕಡ ೧೮.೯೭ರಷ್ಟಿದೆ. ಹಾರಂಗಿ, ಕಬಿನಿ, ಹೇಮಾವತಿ ಪ್ರಮುಖ ಉಪನದಿಗಳು. ಈ ನದಿಗಳ ಉಪನದಿಗಳ ಹಳ್ಳಗಳ ಜಾಲದ ಹರಿವು ನಾಡಿನ ಸಮೃದ್ಧಿಯ ನೆಲೆಯಾಗಿದೆ.

೩. ರಾಜ್ಯದ ತೀರ ಉತ್ತರದಲ್ಲಿ ಗೋದಾವರಿ ನದಿ ಕಣಿವೆ ಪ್ರದೇಶ ರಾಜ್ಯದ ಶೇಕಡ ೨.೩೨ರಷ್ಟಿದೆ.

೪. ದಕ್ಷಿಣದಲ್ಲಿ ಉತ್ತರ ಪಿನಾಕಿನಿ ಶೇಕಡ ೩.೬೪.

೫. ದಕ್ಷಿಣ ಪಿನಾಕಿನಿ ಶೇಕಡ ೧.೯೭, ಹಾಗೂ

೬. ಪಾಲಾರ ಶೇಕಡ ೧.೫೬ ನದಿ ಕಣಿವೆ ಪ್ರದೇಶಗಳಿವೆ.

೭. ರಾಜ್ಯದಲ್ಲಿ ಹುಟ್ಟಿ ಪಶ್ಚಿಮಾಭಿಮುಖವಾಗಿ ಹರಿಯುವ ನದಿಗಳ ಸಂಖ್ಯೆ ೨೦. ಇವುಗಳ ಕ್ಷೇತ್ರ ರಾಜ್ಯದ ಶೇಕಡ ೧೨.೮೮ರಷ್ಟಿದೆ.

ರಾಜ್ಯದ ಎಲ್ಲ ನದಿಗಳ ಒಟ್ಟು ಜಲಸಂಪತ್ತು ೩೪೩೮ ಟಿಎಂಸಿ. ಇದರಲ್ಲಿ ಪಶ್ಚಿಮ ವಾಹಿನಿಗಳ ನೀರಿನದ್ದು ಸಿಂಹಪಾಲು; ಸುಮಾರು ೨೦೦೦ ಟಿಎಂಸಿ ಅಂದರೆ ರಾಜ್ಯದ ಒಟ್ಟು ನೀರಿನ ಶೇಕಡ ೫೪.೧೪ರಷ್ಟು.

ಕೃಷ್ಣ ಕಣಿವೆಯಲ್ಲಿ ೯೬೯.೪೪ ಟಿಎಂಸಿ ನೀರು ಹರಿದರೆ ಕಾವೇರಿ ಕಣಿವೆಯಲ್ಲಿ ೩೮೭.೭೬ ಟಿಎಂಸಿ ನೀರು ಹರಿಯುತ್ತದೆ. ಗೋದಾವರಿ ಕಣಿವೆಯಲ್ಲಿ ೫೦ ಟಿಎಂಸಿ. ಪಿನಾಕಿನಿ ಪಾಲಾರ ಕಣಿವೆಗಳಲ್ಲಿ ೩೨ ಟಿಎಂಸಿ ನೀರಿದೆ.

ರಾಜ್ಯದಲ್ಲಿ ಅಗಾಧ ಜಲಸಂಪತ್ತಿದೆ. ಆದರೆ ನೀರಾವರಿಗೆ ಬಳಸಬಹುದಾದ ನೀರು ಸುಮಾರು ೧೬೯೫ ಟಿಎಂಸಿ.

ಇದು ರಾಜ್ಯದ ಹರಿಯುವ ನೀರಿನ ಒಂದು ಸ್ಥೂಲ ಚಿತ್ರ. ಇದು ನಮ್ಮ ಜಲ ಸಂಪತ್ತು. ಇದನ್ನು ಗರಿಷ್ಠ ಪ್ರಮಾಣದಲ್ಲಿ ಉತ್ಪಾದಕತೆ ವೃದ್ಧಿಗೆ ಬಳಸಿಕೊಳ್ಳುವುದು ನಮ್ಮ ಜಾಣ್ಮೆ, ಬದ್ಧತೆಗಳನ್ನು ಅವಲಂಬಿಸಿದೆ.

ಅಂತರ್ಜಲದ ವಿಷಯಕ್ಕೆ ಬಂದರೆ ಅಂತರ್ಜಲ ಲಭ್ಯತೆ ಪ್ರಮಾಣ ೪೮೫ ಟಿಎಂಸಿ ಎಂದು ಅಂದಾಜು ಮಾಡಲಾಗಿದೆ. ರಾಜ್ಯದಲ್ಲಿ ಅಂತರ್ಜಲ ಬಳಕೆ ಏಕರೂಪವಾಗಿಲ್ಲ, ನಿಯಂತ್ರಿತವಾಗಿಲ್ಲ. ಇದರಿಂದಾಗಿ ಅಂತರ್ಜಲ ಮಟ್ಟ ಕುಸಿಯುತ್ತಿದ್ದು ರಾಜ್ಯದ ಒಟ್ಟು ೧೭೫ ತಾಲ್ಲೂಕುಗಳಲ್ಲಿ ೫೧ ತಾಲ್ಲೂಕುಗಳು ಮಾತ್ರ ಅಂತರ್ಜಲ ದೃಷ್ಟಿಯಿಂದ ಸುರಕ್ಷಿತವಾಗಿದ್ದು ಉಳಿದ ತಾಲ್ಲೂಕುಗಳಲ್ಲಿ ಅಪಾಯದ ಗಂಟೆ ಬಾರಿಸಿದ್ದು ರಾಜ್ಯ ಅಂತರ್ಜಲ ದೃಷ್ಟಿಯಿಂದ ತೀವ್ರ ಸಂಕಷ್ಟಮಯ ಪರಿಸ್ಥಿತಿ ಎದುರಿಸುತ್ತಿದೆ.

ನಮ್ಮ ರಾಜ್ಯ ಭೌಗೋಳಿಕವಾಗಿ ಒಂದೆಡೆ ಸಮುದ್ರ ಹಾಗೂ ಗೋವಾ,

ಮಹಾರಾಷ್ಟ್ರ, ಆಂಧ್ರಪ್ರದೇಶ, ತಮಿಳುನಾಡು, ಕೇರಳ ರಾಜ್ಯಗಳಿಂದ ಸುತ್ತುವರಿಯಲ್ಪಟ್ಟಿದೆ.

ರಾಜ್ಯ ೨೦೦೨ರಲ್ಲಿ ಪ್ರಕಟಿಸಿದ ಜಲನೀತಿಯಲ್ಲಿ ರಾಜ್ಯದ ಒಟ್ಟು ೧೦೭ ಲಕ್ಷ ಹೆಕ್ಟೇರ್ ಕೃಷಿಯೋಗ್ಯ ಭೂಮಿಯಲ್ಲಿ ೬೧ ಲಕ್ಷ ಹೆಕ್ಟೇರ್ ಪ್ರದೇಶಕ್ಕೆ ನೀರಾವರಿ ಸೌಲಭ್ಯ ಒದಗಿಸಲು ಸಾಧ್ಯವಿದೆ. ಈವರೆಗೆ ನಾವು ಸಾಧಿಸಿರುವುದು ಕೇವಲ ಇದರ ಅರ್ಧದಷ್ಟು.

**ವಿವಾದಗಳು**

ರಾಜ್ಯದ ಜಲವಿವಾದಗಳು ರಾಜ್ಯ ಹುಟ್ಟುವುದಕ್ಕಿಂತ ಮೊದಲಿನಿಂದಲೂ ಇವೆ. ರಾಜ್ಯದ ಭೌಗೋಳಿಕ ಸನ್ನಿವೇಶ ಇದಕ್ಕೆ ಕಾರಣ. ರಾಜ್ಯದಲ್ಲಿ ಹುಟ್ಟಿ ನೆರೆಯ ರಾಜ್ಯಗಳಿಗೆ ಹರಿಯುವ ನದಿಗಳೇ ಹೆಚ್ಚು. ಅದೇ ಕಾಲಕ್ಕೆ ನೆರೆ ರಾಜ್ಯಗಳಲ್ಲಿ ಹುಟ್ಟಿ ರಾಜ್ಯದ ಮೂಲಕ ಹರಿದು ಇನ್ನೊಂದು ರಾಜ್ಯಕ್ಕೆ ಹರಿಯುವ ನದಿಗಳು ಪ್ರಮುಖ. ಉದಾಹರಣೆಗೆ, ಕೃಷ್ಣ. ಇದು ಮಹಾರಾಷ್ಟ್ರದಲ್ಲಿ ಹುಟ್ಟಿ ಕರ್ನಾಟಕದಲ್ಲಿ ಹರಿದು ಉಪನದಿಗಳಿಂದೊಡಗೂಡಿ ಆಂಧ್ರ ಪ್ರವೇಶಿಸುತ್ತದೆ. ಅದೇ ರೀತಿ ಕಾವೇರಿ ಕರ್ನಾಟಕದಲ್ಲಿ ಹುಟ್ಟಿ ತಮಿಳುನಾಡು ಪ್ರವೇಶಿಸುತ್ತದೆ. ಈ ನದಿಯ ಉಪನದಿ ಕಬಿನಿಗೆ ನೀರಿನ ಹರಿವು ಕೇರಳದಿಂದ ಅಧಿಕ. ನಾವು ಮಧ್ಯದಲ್ಲಿರುವುದರಿಂದ ಮೇಲೆ ಹಾಗೂ ಕೆಳಗಿರುವ ರಾಜ್ಯಗಳ ಜೊತೆಗೆ ಜಲವಿವಾದಗಳಿವೆ.

ಕೃಷ್ಣನದಿಯ ನೀರಿನ ಹಂಚಿಕೆ ವಿವಾದ ಬಗೆಹರಿಸಲು ಬಚಾವತ್ ಆಯೋಗ ತೀರ್ಪು ನೀಡಿದೆ. ಈ ತೀರ್ಪಿನಂತೆ ರಾಜ್ಯಕ್ಕೆ ೭೨೯ ಟಿಎಂಸಿ ನೀರು ಲಭ್ಯವಾಗಿದೆ. ಈ ತೀರ್ಪಿನ ಆಶಯದಂತೆ ಹೆಚ್ಚುವರಿ ನೀರಿನ ಹಂಚಿಕೆಗೆ ಹೊಸ ನ್ಯಾಯಾಧಿಕರಣ ನೇಮಕಗೊಂಡಿದೆ. ಬಚಾವತ್ ಆಯೋಗದ ಐತೀರ್ಪಿನಲ್ಲಿ ಅಳವಡಿಸಲಾಗಿರುವ ಬಿ-ಸ್ಕೀಮ್ ಪ್ರಕಾರ ನಮಗೆ ೨೭೮.೭೪ ಟಿಎಂಸಿ ನೀರು ಹಂಚಿಕೆಯಾಗಬೇಕು. ಈ ಬಗ್ಗೆ ಹೊಸ ನ್ಯಾಯಾಧಿಕರಣ ನಿರ್ಣಯ ಮಾಡಬೇಕಾಗಿದೆ. ಅಂದರೆ ಕೃಷ್ಣ ಕಣಿವೆಯಲ್ಲಿ ನಮಗೆ ೭೨೯ ಹಾಗೂ ೨೭೮ ಅಂದರೆ ಒಟ್ಟು ೧೧೦೭ ಟಿಎಂಸಿ ನೀರು ದೊರೆಯುವುದೆಂದು ನಿರೀಕ್ಷಿಸಬಹುದು. ಈ ಅಗಾಧ ಪ್ರಮಾಣದ ನೀರಿನಲ್ಲಿ ನಾವು ಎಷ್ಟು ಬಳಸುತ್ತಿದ್ದೇವೆ ಎಂಬುದರ ಬಗ್ಗೆ ಆತ್ಮಾವಲೋಕನ ಮಾಡಿಕೊಳ್ಳಬೇಕು.

ರಾಜ್ಯದ ಒಟ್ಟು ಭೌಗೋಳಿಕ ಕ್ಷೇತ್ರದಲ್ಲಿ ಶೇಕಡ ೭೫ರಷ್ಟು ಭಾಗ ಬರ ಸಂಭವನೀಯ ಪ್ರದೇಶವಾಗಿದೆ. ಈ ಭಾಗವೆಲ್ಲ ರಾಜ್ಯದ ಉತ್ತರ ದಕ್ಷಿಣದಲ್ಲಿ ಹಂಚಿಕೊಂಡಿದೆ. ನಾವು ಕೃಷ್ಣ ಕೊಳ್ಳದಲ್ಲಿ ನಮ್ಮ ಪಾಲಿನ ಪ್ರತಿ ಹನಿ ನೀರು ಉಪಯೋಗಿಸಿಕೊಂಡರೆ ಅದ್ಭುತ ಸಮೃದ್ಧಿ ಸಾಧಿಸಬಹುದಾಗಿದೆ.

ಕಾವೇರಿ ಜಲವಿವಾದ ರಾಜ್ಯದ ಅತ್ಯಂತ ದೊಡ್ಡ ಹಾಗೂ ಮಹತ್ವದ ಜಲವಿವಾದವಾಗಿದೆ. ಪಶ್ಚಿಮಘಟ್ಟ ಶ್ರೇಣಿಯ ಕೊಡಗು ಜಿಲ್ಲೆಯ ಬ್ರಹ್ಮಗಿರಿಯಲ್ಲಿರುವ ತಲಕಾವೇರಿಯಲ್ಲಿ ಹುಟ್ಟಿ ೮೦೨ ಕಿ.ಮೀ. ದೂರ ಹರಿಯುವ ಕಾವೇರಿ ಹಲವು ವೈಶಿಷ್ಟ್ಯಗಳುಳ್ಳ ನದಿಯಾಗಿದೆ. ಭಾಷಾವಾರು ಪ್ರಾಂತ ರಚನೆಗಿಂತ ಮೊದಲಿನಿಂದಲೂ ಕನ್ನಡ ಭಾಷಿಕ ಪ್ರದೇಶ ಕಾವೇರಿ ನದಿ ನೀರಿನ ಹಂಚಿಕೆ ವಿಷಯದಲ್ಲಿ ತೀವ್ರ ಅನ್ಯಾಯಕ್ಕೊಳಗಾಗುತ್ತ ಬಂದಿದೆ.

ಕರ್ನಾಟಕದಲ್ಲಿ ಅಂದರೆ ಮೈಸೂರು ಸಂಸ್ಥಾನ ಪ್ರದೇಶದಲ್ಲಿ ನೀರಾವರಿ ಅಭಿವೃದ್ಧಿ ನಿಧಾನಗೊಳ್ಳಲು ಮೈಸೂರು ಸಂಸ್ಥಾನ ಹಾಗೂ ಬ್ರಿಟಿಷ್ ಪ್ರೆಸಿಡೆನ್ಸಿ ನಡುವೆ ಮಾಡಿಕೊಳ್ಳಲಾದ ೧೮೯೨ ಹಾಗೂ ೧೯೨೪ರ ಒಪ್ಪಂದಗಳೇ ಪ್ರಮುಖ ಕಾರಣ. ಈ ಕರಾಳ ಒಪ್ಪಂದದಿಂದಾಗಿ ಕೆ.ಆರ್.ಸಾಗರ ನಿರ್ಮಾಣ ೧೩ ವರ್ಷ ಕಾಲ ಸ್ಥಗಿತಗೊಂಡಿದ್ದಿತು.

ಭಾಷಾವಾರು ಪ್ರಾಂತಗಳ ರಚನೆ ನಂತರವೂ ಕಾವೇರಿ ಜಲವಿವಾದ ಮುಂದುವರೆದಾಗ ೧೯೭೨ರಲ್ಲಿ ಕೇಂದ್ರ ಸರಕಾರ ಸತ್ಯಶೋಧನ ಸಮಿತಿ ನೇಮಿಸಿತು. ಈ ಸಮಿತಿಯ ವರದಿಯ ಆಧಾರದ ಮೇಲೆ ೧೯೭೬ರಲ್ಲಿ ಒಪ್ಪಂದದ ರೂಪರೇಷೆ ಸಿದ್ಧಪಡಿಸಲಾಯಿತು. ಅದರ ಪ್ರಕಾರ ಕಾವೇರಿ ನೀರಿನ ಬಳಕೆಯಲ್ಲಿ ೬೭೧ ಟಿಎಂಸಿ ಲಭ್ಯವಿದೆ. ಅದರಲ್ಲಿ ೪೮೯ ಟಿಎಂಸಿ ತಮಿಳುನಾಡು, ೧೭೭ ಟಿಎಂಸಿ ಕರ್ನಾಟಕ ಹಾಗೂ ೫ ಟಿಎಂಸಿ ಕೇರಳ ರಾಜ್ಯಗಳಿಗೆ ಅನಂತರ ಮುಂದಿನ ೧೫ ವರ್ಷಗಳಲ್ಲಿ ತಮಿಳುನಾಡು ೧೦೦ ಟಿಎಂಸಿ, ಕರ್ನಾಟಕ ೨೫ ಟಿಎಂಸಿ ಉಳಿತಾಯ ಸಾಧಿಸಿ ಅನಂತರ ನೀರಿನ ಮರುಹಂಚಿಕೆಯಲ್ಲಿ ತಮಿಳುನಾಡು ೪ ಟಿಎಂಸಿ, ಕನಾಟಕ ೮೭ ಟಿಎಂಸಿ ಹಾಗೂ ಕೇರಳಕ್ಕೆ ೩೪ ಟಿಎಂಸಿ ನೀರು ಪಡೆಯಬೇಕಾಗಿದ್ದಿತು. ಅಂತರರಾಜ್ಯ ಕಾವೇರಿ ಕಣಿವೆ ಪ್ರಾಧಿಕಾರ ರಚನೆಯ ಪ್ರಸ್ತಾಪವಿದ್ದಿತು. ಆಗ ತಮಿಳುನಾಡಿನಲ್ಲಿ ರಾಜ್ಯಪಾಲರ ಆಡಳಿತವಿದ್ದಿತು. ಚುನಾಯಿತ ಸರಕಾರ ಈ ಒಪ್ಪಂದ ತಿರಸ್ಕರಿಸಿದ್ದರಿಂದ ಕಾವೇರಿ ಜಲವಿವಾದ ಕಗ್ಗಂಟು ಹಾಗೇ ಉಳಿಯಿತು.

ಕರುಣಾನಿಧಿಯವರ ಪಕ್ಷದ ಬಾಹ್ಯ ಬೆಂಬಲದಿಂದಾಗಿ ಅಧಿಕಾರದಲ್ಲಿದ್ದ ವಿಶ್ವನಾಥ ಪ್ರತಾಪ ಸಿಂಗ್ ಸರಕಾರ ೧೯೯೦ರಲ್ಲಿ ಕಾವೇರಿ ಜಲವಿವಾದ ಇತ್ಯರ್ಥಕ್ಕೆ ನ್ಯಾಯಾಧಿಕರಣ ನೇಮಕ ಮಾಡಿತು. ಈ ನ್ಯಾಯ ಪಂಚಾಯಿತಿ ೧೯೯೧ರಲ್ಲಿ ಕರ್ನಾಟಕವು ತಮಿಳುನಾಡಿಗೆ ೨೦೫ ಟಿಎಂಸಿ ನೀರನ್ನು ಮೆಟ್ಟೂರು ಜಲಾಶಯದಲ್ಲಿ ಲಭ್ಯಗೊಳಿಸಬೇಕೆಂದು ಮಧ್ಯಂತರ ಆದೇಶ ನೀಡಿತು.

ಕರ್ನಾಟಕ ಸರಕಾರ ಹಾಗೂ ನಾಡಿನ ಜನತೆಯ ತೀವ್ರ ವಿರೋಧದಿಂದಾಗಿ ಮಧ್ಯಂತರ ಆದೇಶ ಜಾರಿಗೊಳಿಸುವ ಉಸ್ತುವಾರಿ ಸಮಿತಿ ರಚನೆ ಪ್ರಯತ್ನ ಫಲ ನೀಡಲಿಲ್ಲ. ಆದರೆ ಬರಗಾಲದಲ್ಲಿ ಕಾವೇರಿ ಜಲವಿವಾದ ಭುಗಿಲೇಳುವುದು ನಿರಂತರವಾಗಿ ಮುಂದುವರೆದಿದೆ. ೧೬ ವರ್ಷಗಳ ನಂತರ ಕಾವೇರಿ ನ್ಯಾಯ ಮಂಡಳಿ ೦೫-೦೨-೨೦೦೭ರಂದು ತನ್ನ ಅಂತಿಮ ತೀರ್ಪು ನೀಡಿದೆ. ಅದರ ಪ್ರಕಾರ ಕರ್ನಾಟಕಕ್ಕೆ ೨೭೦ ಟಿಎಂಸಿ ನೀರು ಹಂಚಿಕೆಯಾಗಿದೆ. ತಮಿಳುನಾಡಿಗೆ ೪೧೯ ಟಿಎಂಸಿ, ಕೇರಳಕ್ಕೆ ೩೦ ಹಾಗೂ ಪಾಂಡಿಚೇರಿಗೆ ೭ ಟಿಎಂಸಿ ನೀರು ಹಂಚಿಕೆ ಮಾಡಲಾಗಿದೆ.

ವಾಸ್ತವಿಕತೆಯ ತಳಹದಿ ಇಲ್ಲದ ಈ ತೀರ್ಪಿನಿಂದ ರಾಜ್ಯದ ಹಾಗೂ ರೈತರ ಹಿತಕ್ಕೆ ಧಕ್ಕೆಯಾಗಿದೆ. ನೈಜ ಸ್ಥಿತಿಯ ಹಿನ್ನೆಲೆಯಲ್ಲಿ ಐತೀರ್ಪನ್ನು ಕಾರ್ಯಗತಗೊಳಿಸುವುದು ಸಾಧ್ಯವಾಗದು. ಅದಕ್ಕಾಗಿ ಕೇಂದ್ರ ಸರಕಾರ ರಾಷ್ಟ್ರೀಯ ಜಲ ನೀತಿಯನ್ನು ಸೂಕ್ತವಾಗಿ ಬದಲಾಯಿಸಿ ಅಂತರರಾಜ್ಯ ಜಲವಿವಾದಗಳನ್ನು ಈ ನೀತಿಗೆ ಅನುಸಾರವಾಗಿ ಬಗೆಹರಿಸುವವರೆಗೆ ಈ ತೀರ್ಪು ಜಾರಿಯಾಗಬಾರದು. ಅದಕ್ಕಾಗಿ ಕಾನೂನು ಸಮರ ನಡೆಯಬೇಕಾಗಿದೆ.

ರಾಜ್ಯ ಎದುರಿಸುತ್ತಿರುವ ಇನ್ನೊಂದು ಜಲವಿವಾದ ಮಹದಾಯಿಗೆ ಸಂಬಂಧಿಸಿದ್ದಾಗಿದೆ. ರಾಜ್ಯದ ಪಶ್ಚಿಮ ಘಟ್ಟಗಳಲ್ಲಿ ಹುಟ್ಟಿ ಗೋವಾದ ಮೂಲಕ ಹರಿದು ಅರಬ್ಬಿ ಸಮುದ್ರ ಸೇರುವ ಮಹದಾಯಿಯಲ್ಲಿ ೨೦೦ ಟಿಎಂಸಿ ನೀರು ಲಭ್ಯವಿದೆ.

೪೪ ಟಿಎಂಸಿ ನೀರು ಬಳಸಿ ಐದು ಲಕ್ಷ ಎಕರೆಗಿಂತ ಅಧಿಕ ಭೂಮಿಗೆ ನೀರಾವರಿ ಸೌಲಭ್ಯ ಒದಗಿಸುವ ಮಲಪ್ರಭಾ ಯೋಜನೆ ನೀರಿನ ಕೊರತೆಯಿಂದ ಘೋಷಿತ ಗುರಿ ಸಾಧಿಸಲು ಸಾಧ್ಯವಾಗಿಲ್ಲ. ನವಿಲುತೀರ್ಥ ಅಣೆಕಟ್ಟೆಯಲ್ಲಿ ಗರಿಷ್ಠ ಮಳೆಯಾದಾಗ ಸಹ ಜಲಾಶಯ ತುಂಬುವುದಿಲ್ಲ. ಅದಕ್ಕಾಗಿಯೇ ೧೯೭೮ರಲ್ಲಿ ಮಹದಾಯಿಯಿಂದ ಜಲವಿದ್ಯುತ್ ಉತ್ಪಾದಿಸಿ ೯ ಟಿಎಂಸಿ ನೀರನ್ನು ಮಲಪ್ರಭಾ ನದಿ ಕಣಿವೆಗೆ ಹರಿಯುವಂತೆ ಮಾಡುವ ಯೋಜನೆ ಗೋವಾ ಸರಕಾರದ ವಿರೋಧದಿಂದ ಸ್ಥಗಿತಗೊಂಡಿತು.

೧೯೯೯ರಲ್ಲಿ ರಾಜ್ಯ ಸರಕಾರ ನೀರಿನ ಸಮಸ್ಯೆ ಬಗೆಹರಿಸಲು ರಾಜ್ಯದಲ್ಲಿಯೇ ಹರಿಯುವ ಮಹದಾಯಿಯ ಜಲಾನಯನಕ್ಕೆ ಸೇರಿರುವ ಕಳಸಾ ಹಾಗೂ ಬಂಡೂರಿ ನಾಲಾ ಯೋಜನೆ ರೂಪಿಸಿತು. ಈ ಯೋಜನೆಯಂತೆ ಕಳಸಾ ಹಳ್ಳಕ್ಕೆ ಅಣೆಕಟ್ಟೆ ಕಟ್ಟುವುದು, ಹಲ್‌ತಾರಾ ಹಳ್ಳಕ್ಕೆ ಅಣೆಕಟ್ಟೆ ಕಟ್ಟಿ ಕಾಲುವೆ ಮುಖಾಂತರ ಕಳಸಾ ಜಲಾಶಯಕ್ಕೆ ಸಾಗಿಸುವುದು, ಬಂಡೂರ ಹಳ್ಳಕ್ಕೆ ಜಲಾಶಯ ನಿರ್ಮಿಸಿ ಕಾಲುವೆ ಮುಖಾಂತರ ನೀರನ್ನು ಕಳಸಾ ಜಲಾಶಯಕ್ಕೆ ಸಾಗಿಸುವುದು, ಬಂಡೂರ ನಾಲಾದಿಂದ ೪ ಟಿಎಂಸಿ ಹಾಗೂ ಕಳಸಾದಿಂದ ೩.೫೬ ಟಿಎಂಸಿ, ಒಟ್ಟು ೭.೫೬ ಟಿಎಂಸಿ ನೀರನ್ನು ಮಲಪ್ರಭಾ ಕಣಿವೆಗೆ ವರ್ಗಾಯಿಸುವ ಯೋಜನೆ ಸಿದ್ಧಪಡಿಸಲಾಯಿತು. ಗೋವಾ ಸರಕಾರ ಈ ಯೋಜನೆಗೂ ತೀವ್ರ ವಿರೋಧ ವ್ಯಕ್ತ ಮಾಡಿತು. ಹಲವು ಹತ್ತು ಸುತ್ತಿನ ಮಾತುಕತೆ ನಂತರವೂ ಸಮಸ್ಯೆ ಬಗೆಹರಿದಿಲ್ಲ.

ಹುಬ್ಬಳ್ಳಿ-ಧಾರವಾಡ ಮಹಾನಗರದ ೧೦ ಲಕ್ಷ ಜನರ ಕುಡಿಯುವ ನೀರಿನ ಸಮಸ್ಯೆ ಬಗೆಹರಿಸಲು ಮಹದಾಯಿ ನೀರನ್ನು ಮಲಪ್ರಭಾಕ್ಕೆ ವರ್ಗಾಯಿಸುವುದು ಅತ್ಯಂತ ಅನಿವಾರ್ಯವೆಂದು ಕೇಂದ್ರಕ್ಕೆ ಮನಗಾಣಿಸಿದ್ದರಿಂದಾಗಿ ಕೇಂದ್ರ ಜಲಸಂಪನ್ಮೂಲ ಸಚಿವಾಲಯ ೩೦-೦೪-೨೦೦೨ರಂದು ಕಳಸಾ-ಬಂಡೂರಿ ನಾಲಾ ಯೋಜನೆಗೆ ತಾತ್ವಿಕ ಒಪ್ಪಿಗೆ ನೀಡಿತು.

ಕೇಂದ್ರದಲ್ಲಿ ಹಾಗೂ ಗೋವಾದಲ್ಲಿ ಆಗ ಬಿ.ಜೆ.ಪಿ ನೇತೃತ್ವದ ಸರಕಾರಗಳಿದ್ದವು. ಗೋವಾ ಸರಕಾರ ಅನಗತ್ಯವಾಗಿ ಹಾಗೂ ಅನಪೇಕ್ಷಿತವಾಗಿ ಈ ಯೋಜನೆಗೆ ತೀವ್ರ ವಿರೋಧ ವ್ಯಕ್ತಮಾಡಿ, ರಾಜಕೀಯ ಒತ್ತಡ ಉಂಟುಮಾಡಿದ್ದರ ಫಲವಾಗಿ ಹಾಗೂ ಕೇಂದ್ರ ಬಿ.ಜೆ.ಪಿ ಸರಕಾರ ಗೋವಾ ರಾಜ್ಯದ ಬಿ.ಜೆ.ಪಿ ಸರಕಾರದ ಹಿತ ಕಾಪಾಡಲು ತಾತ್ವಿಕ ಒಪ್ಪಿಗೆಗೆ ತಡೆಯಾಜ್ಞೆ ನೀಡಿತು. ಅಂದಿನಿಂದ ಇಂದಿನವರೆಗೆ ಈ ಯೋಜನೆಯಲ್ಲಿ ಹೇಳಿಕೊಳ್ಳುವ ಬದಲಾವಣೆ ಆಗಿಲ್ಲ.

ನಮ್ಮ ರಾಜ್ಯದಲ್ಲಿ ಜಲಸಂಪತ್ತಿನ ಜೊತೆಗೆ ಜಲವಿವಾದಗಳೂ ಇವೆ. ಜಲಸಂಪತ್ತನ್ನು ಬಹು ಎಚ್ಚರಿಕೆಯಿಂದ, ಜಲವಿವಾದಗಳನ್ನು ಜಾಣ್ಮೆಯಿಂದ ಎದುರಿಸಿ ಸಮೃದ್ಧ, ಸುಖಿ, ಸಂಪದ್ಭರಿತ ಕರ್ನಾಟಕ ಕಟ್ಟಬೇಕಾಗಿದೆ.

(೨೭-೦೮-೨೦೦೭ರಂದು ಬೆಂಗಳೂರಿನಲ್ಲಿ ಕಾರ್ಮಿಕ ಲೋಕ ಮತ್ತು ಕನ್ನಡ ಗೆಳೆಯರ ಬಳಗ ಜಂಟಿ ಆಶ್ರಯದಲ್ಲಿ ಆಯೋಜಿಸಿದ್ದ ವಿಚಾರಗೋಷ್ಠಿಯಲ್ಲಿ ಮಂಡಿಸಿದ ಪ್ರಬಂಧ.)



ಪ್ರಸ್ತುತ, ಗಾಂಧೀಜಿಯವರಿಂದ ಶುರುವಾದ ಸತ್ಯಾಗ್ರಹಕ್ಕೆ ಒಂದು ನೂರು ವರ್ಷಗಳಾಗಿವೆ. ಅದು ಅಹಿಂಸಾ ಹೋರಾಟದ ಅತ್ಯಂತ ಬಲಶಾಲಿ ಅಸ್ತ್ರವಾಗಿದ್ದಿತು. ಭಾರತದ ಸ್ವಾತಂತ್ರ್ಯದ ಚಳವಳಿಗೆ ಇದರ ಕೊಡುಗೆಗಳು ಅನನ್ಯ. ಮಾಧ್ಯಮಗಳು ಯಾವುದೇ ಒಂದು ಸಂಘಟನೆ ಅಥವಾ ಆಂದೋಲನದ ಧ್ಯೇಯೋದ್ದೇಶಗಳನ್ನು ಜನರಿಗೆ ತಲುಪಿಸುವ ವಾಹಕಗಳಾಗಿವೆ ನಮ್ಮ ರಾಷ್ಟ್ರದ ಸ್ವಾತಂತ್ರ್ಯದ ಸಮರದಲ್ಲಿ ಪತ್ರಿಕಾರಂಗ ಅಮೋಘ ಪಾತ್ರವನ್ನು ವಹಿಸಿತು. ಈ ಹೋರಾಟದ ಮುಂಚೂಣಿಯಲ್ಲಿದ್ದ ಹಲವು ನಾಯಕರಿಗೆ ಪತ್ರಿಕಾರಂಗದ ಜೊತೆ ನಂಟಿತ್ತು. ಮಹಾತ್ಮಾ ಗಾಂಧೀಜಿಯವರು ಸಕ್ರಿಯ ರಾಜಕೀಯ ನಾಯಕರಾಗಿದ್ದುದರ ಜೊತೆಗೆ ಪತ್ರಕರ್ತರೂ ಆಗಿದ್ದರು. ಪತ್ರಿಕಾರಂಗ ಅವರ ಅಭಿವ್ಯಕ್ತಿಯ ಪ್ರಬಲ ಮಾಧ್ಯಮವಾಯಿತು.

# ಗಾಂಧೀಜಿ ಹಾಗೂ ಪತ್ರಿಕೋದ್ಯಮ

**ಒಂ**ದು ರಾಷ್ಟ್ರದ ಆಗುಹೋಗುಗಳಲ್ಲಿ ಪತ್ರಿಕೋದ್ಯಮಕ್ಕೆ ವಿಶಿಷ್ಟ ಸ್ಥಾನವಿದೆ. ಶಾಸಕಾಂಗ, ಕಾರ್ಯಾಂಗ ಮತ್ತು ನ್ಯಾಯಾಂಗಗಳ ನಂತರದ ಸ್ಥಾನವೇ ಪತ್ರಿಕಾರಂಗದ್ದು. ಆದ್ದರಿಂದ ಅದನ್ನು ನಾಲ್ಕನೆಯ ಅಧಿಕಾರ ಸ್ಥಾನ ಎಂದು ಕರೆಯುತ್ತಾರೆ. ಖಡ್ಗಕ್ಕಿಂತಲೂ ಲೇಖನಿ ಶಕ್ತಿಯುತವಾದದ್ದು ಎಂಬ ಜನಪ್ರಿಯ ಉಕ್ತಿ ಹೆಚ್ಚಾಗಿ ಅನ್ವಯಿಸುವುದು ಈ ರಂಗಕ್ಕೇ. ಇದನ್ನು ಪ್ರಜಾಪ್ರಭುತ್ವ ವ್ಯವಸ್ಥೆಯೊಂದರ ಕಾವಲುಗಾರ ಎಂದೂ ಬಣ್ಣಿಸುತ್ತಾರೆ.

ಇದು ಮಾಧ್ಯಮಗಳ ಯುಗ. ಟಿ.ವಿ., ಇಂಟರ್‌ನೆಟ್, ಇ-ಜರ್ನಲಿಸಂ ಮುಂತಾದುವು ಅನಾವರಣಗೊಳಿಸಿರುವ ವಿಶ್ವ ವಿಸ್ಮಯಕಾರಿಯಾದದ್ದು. ಮಾಹಿತಿ ತಂತ್ರಜ್ಞಾನದ ಕ್ರಾಂತಿ ಉಚ್ಛ್ರಾಯ ಸ್ಥಿತಿಯಲ್ಲಿರುವ ಪ್ರಸ್ತುತ ಕಾಲಘಟ್ಟದಲ್ಲಿ ಪತ್ರಿಕೆಗಳನ್ನು ಓದುವ ಜನ ಕಡಿಮೆಯಾಗುತ್ತಿದ್ದಾರೆ ಎಂಬ ಆತಂಕದ ದನಿ ಆಗಾಗ ಕೇಳಿಬರುತ್ತಿದೆ. ಇದು ವಾಸ್ತವವಾದರೂ, ಮುದ್ರಿತ ಅಕ್ಷರಗಳು ತಮ್ಮ ಪ್ರಾಬಲ್ಯವನ್ನು ಕಳೆದುಕೊಂಡಿಲ್ಲ. ಅವು ಬೀರುವ ಪ್ರಭಾವ-ಪರಿಣಾಮಗಳು ಕ್ಷೀಣಿಸಿಲ್ಲ.

ಪ್ರಸ್ತುತ, ಗಾಂಧೀಜಿಯವರಿಂದ ಶುರುವಾದ ಸತ್ಯಾಗ್ರಹಕ್ಕೆ ಒಂದು ನೂರು ವರ್ಷಗಳಾಗಿವೆ. ಅದು ಅಹಿಂಸಾ ಹೋರಾಟದ ಅತ್ಯಂತ ಬಲಶಾಲಿ ಅಸ್ತ್ರವಾಗಿದ್ದಿತು. ಭಾರತದ ಸ್ವಾತಂತ್ರ್ಯದ ಚಳವಳಿಗೆ ಇದರ ಕೊಡುಗೆಗಳು ಅನನ್ಯ. ಮಾಧ್ಯಮಗಳು ಯಾವುದೇ ಒಂದು ಸಂಘಟನೆ ಅಥವಾ ಆಂದೋಲನದ ಧ್ಯೇಯೋದ್ದೇಶಗಳನ್ನು ಜನರಿಗೆ ತಲುಪಿಸುವ ವಾಹಕಗಳಾಗಿವೆ. ನಮ್ಮ ರಾಷ್ಟ್ರದ ಸ್ವಾತಂತ್ರ್ಯದ ಸಮರದಲ್ಲಿ ಪತ್ರಿಕಾರಂಗ ಅಮೋಘ ಪಾತ್ರವನ್ನು ವಹಿಸಿತು. ಈ ಹೋರಾಟದ ಮುಂಚೂಣಿಯಲ್ಲಿದ್ದ ಹಲವು ನಾಯಕರಿಗೆ ಪತ್ರಿಕಾರಂಗದ ಜೊತೆ ನಂಟಿತ್ತು. ಮಹಾತ್ಮಾ ಗಾಂಧೀಜಿಯವರು ಸಕ್ರಿಯ ರಾಜಕೀಯ ನಾಯಕರಾಗಿದ್ದುದರ ಜೊತೆಗೆ ಪತ್ರಕರ್ತರೂ ಆಗಿದ್ದರು. ಪತ್ರಿಕಾರಂಗ ಅವರ ಅಭಿವ್ಯಕ್ತಿಯ ಪ್ರಬಲ ಮಾಧ್ಯಮವಾಯಿತು.

೧೯ನೇ ಶತಮಾನದಲ್ಲಿ ದಕ್ಷಿಣ ಆಫ್ರಿಕಾದಲ್ಲಿ ಬಿಳಿಯರು ಅತ್ಯಂತ ಅಮಾನವೀಯ ರೀತಿಯಲ್ಲಿ ವರ್ಣಬೇಧ ನೀತಿಯನ್ನು ಅನುಸರಿಸುತ್ತಿದ್ದರು. ಕರಿಯರು, ಏಷಿಯಾ ಮೂಲದ ಜನರು, ಭಾರತೀಯರು ಹಾಗೂ ಇತರರು ಆ ಉಸಿರುಕಟ್ಟಿಸುವಂಥ ವಾತಾವರಣದಲ್ಲಿ ಬಾಳುವುದೇ ದುಸ್ತರವಾಗಿತ್ತು. ಅವರು ನಾಗರಿಕ ಹಕ್ಕುಗಳಿಂದ ವಂಚಿತರಾಗಿದ್ದರು. ೧೮೯೩ರಲ್ಲಿ ಗಾಂಧೀಜಿ ದಕ್ಷಿಣ ಆಫ್ರಿಕಾಗೆ ಉದ್ಯೋಗ ನಿಮಿತ್ತ ಹೋಗಬೇಕಾಯಿತು. ಅಲ್ಲಿ ಅವರು ಕಂಡು, ಕೇಳಿ, ನೇರವಾಗಿ ಅನುಭವಿಸಿದ ದೌರ್ಜನ್ಯ-ದಬ್ಬಾಳಿಕೆಗಳ ವಿರುದ್ಧ ಹೋರಾಡಲು ನಿಶ್ಚಯಿಸಿದರು. ಆ ಹೋರಾಟದ ಅವಧಿಯಲ್ಲೇ ಅವರು ಪತ್ರಿಕಾರಂಗಕ್ಕೆ ಪದಾರ್ಪಣೆ ಮಾಡಿದರು. ಆಗ ಮದನ್‌ಜಿತ್ ಎಂಬುವರು ಒಂದು ಮುದ್ರಣಾಲಯವನ್ನು ನಡೆಸುತ್ತಿದ್ದರು. ಆ ಕಾಲದಲ್ಲಿ ದಕ್ಷಿಣ ಆಫ್ರಿಕಾದಲ್ಲಿ ಗಣನೀಯ ಸಂಖ್ಯೆಯಲ್ಲಿ ಭಾರತೀಯರಿದ್ದರು. ಅವರನ್ನು ತಲುಪಲು ಒಂದು ಪತ್ರಿಕೆಯ ಅವಶ್ಯಕತೆಯಿತ್ತು. ಮದನ್‌ಜಿತ್ ಪತ್ರಿಕೆಯೊಂದನ್ನು ಪ್ರಾರಂಭಿಸುವ ಪ್ರಸ್ತಾಪವನ್ನು ಗಾಂಧೀಜಿಯವರ ಮುಂದಿಟ್ಟರು. ಗಾಂಧೀಜಿಯವರಿಂದ ಹಸಿರು ನಿಶಾನೆ ಸಿಕ್ಕಿತು. ೧೯೦೪ರಲ್ಲಿ ಪತ್ರಿಕೆ ಪ್ರಾರಂಭವಾಯಿತು. ಅದಕ್ಕೆ 'ಇಂಡಿಯನ್ ಒಪಿನಿಯನ್' ಎಂದು ಹೆಸರಿಡಲಾಯಿತು. ಮನ್‌ಸುಖಲಾಲ್ ನಾಜರ್ ಅದರ ಪ್ರಥಮ ಸಂಪಾದಕರಾದರು. ಗಾಂಧೀಜಿ ಸಂಪಾದಕೀಯ ಕೆಲಸದ ಜವಾಬ್ದಾರಿಯನ್ನು ನಿರ್ವಹಿಸಬೇಕಾಯಿತು. ಮೊದಲು, ಇದು ಗುಜರಾತಿ, ಹಿಂದಿ, ತಮಿಳು ಹಾಗೂ ಆಂಗ್ಲ ಭಾಷೆಗಳಲ್ಲಿ ಪ್ರಕಟವಾಗುತ್ತಿತ್ತು. ಗಾಂಧೀಜಿ ಆ ಪತ್ರಿಕೆಯ ತಮಿಳು ಹಾಗೂ ಹಿಂದಿ ಆವೃತ್ತಿಗಳ ಸೀಮಿತ ಉದ್ದೇಶವನ್ನು ಮನಗಂಡು ಅವುಗಳ ಪ್ರಕಟಣೆಯನ್ನು ನಿಲ್ಲಿಸಿದರು. ಗಾಂಧೀಜಿ ತಮ್ಮ ಉಳಿತಾಯದಿಂದ ಪತ್ರಿಕೆಗೆ ಪ್ರತಿ ತಿಂಗಳು ೭೫ ಡಾಲರುಗಳ ಹಣದ ಸಹಾಯ ಮಾಡುತ್ತಿದ್ದರು.

ಮ. ಶ್ರೀ. ಮುರಳಿಕೃಷ್ಣ

ಗಾಂಧೀಜಿಯವರಿಗೆ 'ಇಂಡಿಯನ್ ಒಪಿನಿಯನ್' ನಡೆಸುವುದರಲ್ಲಿ ವಾಣಿಜ್ಯ ಪ್ರತಿಫಲಾಪೇಕ್ಷೆಯಿರಲಿಲ್ಲ. ಸತ್ಯಾಗ್ರಹದ ತತ್ವಗಳು, ಅವುಗಳ ಅನುಷ್ಠಾನ ಹಾಗೂ ಇತರ ಗಹನ ವಿಷಯಗಳ ಬಗ್ಗೆ ಗಾಂಧೀಜಿ ತಮ್ಮ ಅಂಕಣದ ಮೂಲಕ ವಿಚಾರ ಪ್ರಚೋದಕ ಲೇಖನಗಳನ್ನು ಬರೆದರು. ತಮ್ಮ ಮನದಾಳದ, ಮುಕ್ತ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದರು. ದಕ್ಷಿಣ ಆಫ್ರಿಕಾದ ಭಾರತೀಯರ ಹೋರಾಟದಲ್ಲಿ ಈ ಪತ್ರಿಕೆ ಒಂದು ಬಲಿಷ್ಠ ಅಸ್ತ್ರವಾಯಿತು. ೧೯೦೬ರಲ್ಲಿ ಗಾಂಧೀಜಿ ತಮ್ಮ ಅಹಿಂಸಾ ಹೋರಾಟ ವಿಧಾನಕ್ಕೆ ಸೂಕ್ತ ಹೆಸರನ್ನು ಸೂಚಿಸುವಂತೆ ಓದುಗರಿಗೆ ಕರೆ ನೀಡಿದ್ದು 'ಇಂಡಿಯನ್ ಒಪಿನಿಯನ್' ಮೂಲಕವೇ .ಆಗ ಗಾಂಧೀಜಿಯವರ ನೆಂಟರಾಗಿದ್ದ ಮದನ್‌ಲಾಲ್ ಗಾಂಧಿ 'ಸದಾಗ್ರಹ' (ಸದ್ವರ್ತನೆಯನ್ನು ದೃಢತೆಯಿಂದ ಮಾಡುವುದು)ವೆಂಬ ಹೆಸರನ್ನು ಸೂಚಿಸಿದರು. ಅದನ್ನು ಗಾಂಧೀಜಿ 'ಸತ್ಯಾಗ್ರಹ' (ಸತ್ಯ ಸಾಧನೆಯಲ್ಲಿ ಅಚಲತೆಯಿಂದ ಇರುವುದು) ಎಂದು ಬದಲಾಯಿಸಿದರು. ತುರಂಗವಾಸದ ಅವಧಿಯನ್ನು ಹೊರತುಪಡಿಸಿ, ಗಾಂಧೀಜಿ ಪ್ರತಿವಾರ ಈ ಪತ್ರಿಕೆಗೆ ಬರೆಯುತ್ತಿದ್ದರು. ಈ ಪತ್ರಿಕೆಯ ಅನುಪಸ್ಥಿತಿಯಲ್ಲಿ ಸತ್ಯಾಗ್ರಹ ಹೋರಾಟ ಬಹುಶಃ ಜರಗುತ್ತಲೇ ಇರಲಿಲ್ಲ ಎಂದು ಗಾಂಧೀಜಿ ತಮ್ಮ ಆತ್ಮಕಥೆಯಲ್ಲಿ ಅಭಿಪ್ರಾಯಪಟ್ಟಿದ್ದಾರೆ.

ಈ ಪತ್ರಿಕೆಯ ಬೆನ್ನೆಲುಬಾಗಿದ್ದ ಗಾಂಧೀಜಿಯವರಿಗೆ ಪತ್ರಿಕೋದ್ಯಮದ ಉದ್ದೇಶಗಳ ಬಗ್ಗೆ ಸ್ಪಷ್ಟವಾದ ಅಭಿಮತವಿತ್ತು. ಸೇವೆಯೇ ಅದರ ಏಕಮಾತ್ರ ಗುರಿಯಾಗಿರಬೇಕೆಂಬುದು ಅವರ ನಿಲುವಾಗಿತ್ತು.

''ಪತ್ರಿಕಾರಂಗಕ್ಕೆ ಅಗಾಧ ಶಕ್ತಿಯಿದೆ. ನಿಯಂತ್ರಣವಿಲ್ಲದ ಲೇಖನಿ ಅಪಾರ ಪ್ರಮಾಣದ ಬೆಳೆಗಳನ್ನು, ಭೂ ಪ್ರದೇಶಗಳನ್ನು ನಾಶಪಡಿಸುವ ಮಹಾಪೂರದಂತೆ. ಬಾಹ್ಯ ನಿರ್ಬಂಧಕ್ಕಿಂತ ಆಂತರಿಕ ಹಿಡಿತ ಒಳ್ಳೆಯದು. ಆದರೆ ಜಗತ್ತಿನ ಎಷ್ಟು ಪತ್ರಿಕೆಗಳು ಈ ಅಗ್ನಿಪರೀಕ್ಷೆಯನ್ನು ಎದುರಿಸಿ ಸಫಲವಾಗುತ್ತವೆ ? ಉಪಯೋಗಕ್ಕೆ ಬಾರದ ಪತ್ರಿಕೆಗಳನ್ನು ಯಾರು ತಡೆಯುತ್ತಾರೆ ? ಈ ವಿಷಯದಲ್ಲಿ ಶೀರ್ಷನ್ನು

ಯಾರು ಕೊಡುತ್ತಾರೆ? ಒಳಿತು ಕೆಡುಕು ಎರಡೂ ಜೊತೆ ಜೊತೆಯಲ್ಲಿ ಇರುವಂತೆ, ಪ್ರಯೋಜನಕಾರಿ ಮತ್ತು ಅಪ್ರಯೋಜಕ ಪತ್ರಿಕೆಗಳೂ ಇರುತ್ತವೆ. ಸೂಕ್ತ ಆಯ್ಕೆಯನ್ನು ಜನರೇ ಮಾಡಬೇಕು''– ಎಂದು ಗಾಂಧೀಜಿಯವರು ತಮ್ಮ ಅನಿಸಿಕೆಯನ್ನು ದಾಖಲಿಸಿದ್ದಾರೆ.

ನಂತರ, ದಕ್ಷಿಣ ಆಫ್ರಿಕಾದ ಡರ್ಬನ್‌ನ ಹೊರವಲಯದಲ್ಲಿ೧೦೦ ಎಕರೆ ಜಾಗವನ್ನು ಖರೀದಿಸಿ, ಅಲ್ಲಿಗೆ 'ಇಂಡಿಯನ್ ಒಪಿನಿಯನ್' ಪತ್ರಿಕೆಯ ಕಛೇರಿ ಹಾಗೂ ಮುದ್ರಣಾಲಯವನ್ನು ಸ್ಥಳಾಂತರಿಸಲಾಯಿತು. ಇಲ್ಲೂ, ಗಾಂಧೀಜಿ ಹಾಗೂ ಅವರ ಸಂಗಡಿಗರು ಅನೇಕ ಸಂಕಷ್ಟಗಳನ್ನು ಎದುರಿಸಬೇಕಾಯಿತು. ಆದರೆ ಅವರು ಧೃತಿಗೆಡದೆ, ತಮಗಿದ್ದ ಗುರಿಯಿಂದ ವಿಮುಖರಾಗಲಿಲ್ಲ.

ಹೀಗೆ ಶುರುವಾದ ಗಾಂಧೀಜಿಯವರ ಪತ್ರಿಕಾಲೋಕದ ಪಯಣ ಅವರು ಭಾರತಕ್ಕೆ ಹಿಂದಿರುಗಿದನಂತರವೂ ಮುಂದುವರೆಯಿತು. ೧೯೧೫ರಲ್ಲಿ ಭಾರತಕ್ಕೆ ಮರಳಿದ ಗಾಂಧೀಜಿ ಸತ್ಯಾಗ್ರಹಕ್ಕೆ ಚಾಲನೆ ನೀಡಿದರು. ಅಹಿಂಸಾ ಹೋರಾಟದ ರೂಪುರೇಖೆಗಳನ್ನು, ತಾತ್ವಿಕ ಆಯಾಮಗಳನ್ನು, ಕಾರ್ಯತಂತ್ರಗಳನ್ನು ಜನರಿಗೆ ತಲುಪಿಸುವ ಜರೂರು ಗಾಂಧೀಜಿಯವರಿಗೆ ಇತ್ತು. ಅದೇ ಸಮಯದಲ್ಲಿ ಅವರಿಗೆ ಪತ್ರಿಕೆಗಳ ಮುಖಾಂತರ ತಮ್ಮ ವಿಚಾರಗಳನ್ನು ಜನರ ಮುಂದಿಡುವುದು ಸೂಕ್ತವೆನಿಸಿತು. ೧೯೧೯ರಲ್ಲಿ ಬ್ರಿಟಿಷ್ ಸರ್ಕಾರ ರೌಲಟ್ ಕಾಯಿದೆಯನ್ನು ಜಾರಿಗೊಳಿಸಿತು. ರಾಷ್ಟ್ರಾದ್ಯಂತ ಈ ಕಾನೂನಿನ ವಿರುದ್ಧ ಪ್ರತಿಭಟನೆಗಳು ಜರುಗಿದವು. ಗಾಂಧೀಜಿಯವರು ಪುನಃ ಪತ್ರಿಕಾರಂಗಕ್ಕೆ ವಾಪಸ್ಸಾಗಲು ಸಂದರ್ಭ ಒದಗಿತು. ಅದೇ ವರ್ಷದ ಏಪ್ರಿಲ್ ೭ರಂದು ಗಾಂಧೀಜಿ 'ಸತ್ಯಾಗ್ರಹ' ಎಂಬ ಒಂದು ಪುಟದ ಪತ್ರಿಕೆಯನ್ನು ಮುಂಬೈನಿಂದ ಪ್ರಕಟಿಸಲು ಆರಂಭಿಸಿದರು. ಅದು ಪ್ರತಿ ಸೋಮವಾರದಂದು ಆಂಗ್ಲ ಹಾಗೂ ಹಿಂದಿ ಭಾಷೆಗಳಲ್ಲಿ ಪ್ರಕಟವಾಗುತ್ತಿತ್ತು. ಆದರೆ ಗಾಂಧೀಜಿ ಈ ಪತ್ರಿಕೆಯನ್ನು ನೋಂದಾಯಿಸಲಿಲ್ಲ.

ಈ ಅವಧಿಯಲ್ಲಿ ಮುಂಬೈನ 'ಕ್ರಾನಿಕಲ್' ಪತ್ರಿಕೆಯ ಪ್ರಕಟಣೆಯನ್ನು ಬ್ರಿಟಿಷ್ ಸರ್ಕಾರ ಪ್ರತಿಬಂಧಿಸಿತು. ಆ ಪತ್ರಿಕೆಯ ಒಡೆಯರು 'ಯಂಗ್ ಇಂಡಿಯಾ' ಎಂಬ ಆಂಗ್ಲ ಪತ್ರಿಕೆಯನ್ನು ನಡೆಸುತ್ತಿದ್ದರು. ಅವರು, ಗಾಂಧೀಜಿಯವರು ಈ ಪತ್ರಿಕೆಯ ಸಂಪಾದಕರಾಗುವಂತೆ ಮನವೊಲಿಸುವುದರಲ್ಲಿ ಸಫಲರಾದರು. ಗಾಂಧೀಜಿಯವರಿಗೆ ಗುಜರಾತಿ ಪತ್ರಿಕೆಯೊಂದರ ಅವಶ್ಯಕತೆಯಿತ್ತು. ಏಕೆಂದರೆ, ಅವರ ಮುಖ್ಯ ಕಾರ್ಯಕ್ಷೇತ್ರ ಗುಜರಾತಿನಲ್ಲಿತ್ತು. ೧೯೧೯ರ ಜುಲೈ ತಿಂಗಳಿನಲ್ಲಿ 'ಯಂಗ್ ಇಂಡಿಯಾ'ದ ಗುಜರಾತಿ ಆವೃತ್ತಿ 'ನವಜೀವನ್' ಪತ್ರಿಕೆ ಶುರುವಾಯಿತು. ಅದರ ಸಂಪಾದಕತ್ವದ ಜವಾಬ್ದಾರಿಯನ್ನು ಗಾಂಧೀಜಿಯವರು ವಹಿಸಿದರು. ನಂತರ, ಅವರು ಹೆಚ್ಚು ಜನರು ಬಳಸುವ ಹಿಂದಿ ಭಾಷೆಯಲ್ಲಿ ಪತ್ರಿಕೆಯೊಂದನ್ನು ಪ್ರಾರಂಭ ಮಾಡುವ ಆಶಯವನ್ನು ವ್ಯಕ್ತಪಡಿಸಿದರು. ಆ ಆರಂಭ ಆಗಸ್ಟ್ ೧೯, ೧೯೨೧ರಂದು ಸಾಕಾರಗೊಂಡು ಹಿಂದಿ 'ನವಜೀವನ್' ಪತ್ರಿಕೆ ಅಸ್ತಿತ್ವಕ್ಕೆ ಬಂದಿತು. ಆದರೆ ಮೂರು ವರ್ಷಗಳಲ್ಲೇ ಅದರ ಪ್ರಕಟಣೆ ಕೊನೆಗೊಂಡಿತು.

ಗಾಂಧೀಜಿ ಹಿಂದೂ ಧರ್ಮದಲ್ಲಿದ್ದ ಅನೇಕ ಅನಿಷ್ಟಗಳನ್ನು ವಿರೋಧಿಸುತ್ತಿದ್ದರು. ಅಸ್ಪೃಶ್ಯತೆಯ ವಿರುದ್ಧ ಗಟ್ಟಿಯಾದ ದನಿ ಎತ್ತಿದರು. ''ಅಸ್ಪೃಶ್ಯತೆಗೆ ಶಾಸ್ತ್ರದ ಆಧಾರವಿಲ್ಲ, ಧರ್ಮದ ಬೆಂಬಲವಿಲ್ಲ, ಇದೊಂದು ಅಮಾನುಷ ಪದ್ಧತಿ. ಇದು ತೊಲಗಬೇಕು. ಅಸ್ಪೃಶ್ಯತೆ ಉಳಿದರೆ ಹಿಂದೂ ಧರ್ಮ ಅಳಿಯುತ್ತದೆ. ಇದನ್ನು ತೊಡೆದುಹಾಕಿ, ಹಿಂದೂ ಧರ್ಮವನ್ನು ಉಳಿಸಿ'' ಎಂಬುದಾಗಿ ಸಾರಿದರು. ದೇವರ ಮಕ್ಕಳು ಎಂಬರ್ಥದಲ್ಲಿ ಅಂತ್ಯಜರನ್ನು 'ಹರಿಜನ'ರೆಂದು ಕರೆದರು. ಅವರ ಮಾರ್ಗದರ್ಶನದಲ್ಲಿ 'ಹರಿಜನ' ವಾರ ಪತ್ರಿಕೆಯ ಆಂಗ್ಲ ಆವೃತ್ತಿ ೧೯೩೩ ಫೆಬ್ರವರಿ ೧೨ರಂದು ಶುರುವಾಯಿತು. ನಂತರ ಅದರ ಹಿಂದಿ ಹಾಗೂ ಗುಜರಾತಿ ಆವೃತ್ತಿಗಳು ಹೊರಬಂದವು. ಗಾಂಧೀಜಿಯವರು ಸಮಾಜದ ಅಂಚಿನಲ್ಲಿರುವವರ ಏಳಿಗೆ, ಗ್ರಾಮೀಣಾಭಿವೃದ್ಧಿ ಮುಂತಾದ ವಿಷಯಗಳ ಬಗೆಗೆ ಅನೇಕ ಲೇಖನಗಳನ್ನು 'ಹರಿಜನ' ಪತ್ರಿಕೆಯಲ್ಲಿ ಬರೆದರು.

ಈ ಎಲ್ಲ ಪತ್ರಿಕೆಗಳ ಮೂಲಕ ಗಾಂಧೀಜಿ ತಮ್ಮ ವಿಚಾರಗಳನ್ನು ಜನರ ನಡುವೆ ಹರಿಬಿಟ್ಟರು. ರಾಜಕೀಯ, ಸಾಮಾಜಿಕ, ಆರ್ಥಿಕ ಹಾಗೂ ಸಾಂಸ್ಕೃತಿಕ ರಂಗಗಳ ಹಲವು ಗಂಭೀರ ವಿಷಯಗಳ ಬಗ್ಗೆ ಪುಂಖಾನುಪುಂಖವಾಗಿ ಬರೆದರು. ಜನರು ಎಚ್ಚೆತ್ತುಕೊಳ್ಳುವಂತೆ ಮಾಡಿದರು. ಅವರ ಭಾಷೆ ಸರಳವಾಗಿತ್ತು, ಶೈಲಿಯೂ ಸುಲಲಿತವಾಗಿತ್ತು. ನಿರ್ಭಯವಾಗಿ ಬರೆಯುತ್ತಿದ್ದರು. ಅವರ ಲೇಖನಿ ಜಾಗೃತಿಯ ಪಂಜಾಯಿತು.

ಗಾಂಧೀಜಿಯವರ ಸಂಪಾದಕತ್ವದಲ್ಲಿ ಪ್ರಕಟವಾಗುತ್ತಿದ್ದ ಪತ್ರಿಕೆಗಳಲ್ಲಿ ಜಾಹೀರಾತುಗಳಿಗೆ ಸ್ಥಳವಿರಲಿಲ್ಲ. ಲಾಭ ಗಳಿಕೆಯೂ ಅವರ ಉದ್ದೇಶವಾಗಿರಲಿಲ್ಲ. ಆದರೆ ಅವು ಸ್ವಾವಲಂಬಿಗಳಾಗಿರುವಂತೆ ಮಾಡುವುದರಲ್ಲಿ ಎಲ್ಲ ಪ್ರಯತ್ನಗಳನ್ನು ಮಾಡುತ್ತಿದ್ದರು. ಪತ್ರಿಕೆಗಳು ಸಾರ್ವಜನಿಕ ಸೇವೆಯಲ್ಲಿ ಸದಾ ಬದ್ಧವಾಗಿರಬೇಕು ಎಂದು ಪ್ರತಿಪಾದಿಸುತ್ತಿದ್ದರು. ಪತ್ರಿಕೆಗಳು ಓದುಗರಲ್ಲಿ ಅರಿವನ್ನು ಮೂಡಿಸುವ ಸಾಧನಗಳಾಗಿರಬೇಕೆಂಬುದರ ಬಗೆಗೆ ಒತ್ತು ನೀಡುತ್ತಿದ್ದರು. ಭಾರತದ ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿದ್ದ ಭಾಷಣಗಳ ವರದಿಗಳ ವಿಚಾರದಲ್ಲಿ ಅವರಿಗೆ ತಕರಾರುಗಳಿದ್ದವು. ಈ ಬಗೆಯ ವರದಿಗಳಲ್ಲಿ ಹೆಚ್ಚಿನ ದೋಷಗಳು ನುಸುಳುತ್ತವೆ ಎಂಬುದು ಅವರ ಅಭಿಪ್ರಾಯವಾಗಿತ್ತು. ಒಟ್ಟಿನಲ್ಲಿ, ತಾವು ನಂಬಿದ್ದ ಮೌಲ್ಯಗಳನ್ನು ಪತ್ರಿಕೆಗಳ ಸಂಪಾದಕರಾಗಿಯೂ ಎತ್ತಿ ಹಿಡಿದರು.

ಪ್ರಸ್ತುತ ಪತ್ರಿಕಾರಂಗದಲ್ಲಿ ಹಲವು ಬದಲಾವಣೆಗಳು ತಲೆದೋರಿವೆ. ತಂತ್ರಜ್ಞಾನದ ಕ್ರಾಂತಿಯಿಂದಾಗಿ ವಿಷಯ ಸಂಗ್ರಹಣೆಗೆ ನಾನಾ ಸಾಧನಗಳಿವೆ. ಮುದ್ರಣದ ಅಂದ ಚೆಂದಗಳು ಓದುಗರಿಗೆ ಮೋಡಿ ಹಾಕುತ್ತಿವೆ. ಸುದ್ದಿಗಳು ತ್ವರಿತವಾಗಿ ಓದುಗರನ್ನು ತಲುಪುತ್ತಿವೆ. ಇಷ್ಟೆಲ್ಲ ಬೆಳವಣಿಗೆಗಳಾಗಿದ್ದರೂ, ಪತ್ರಿಕೆಗಳ ಋಣಾತ್ಮಕ ಅಂಶಗಳ ಬಗ್ಗೆ ಮಾಧ್ಯಮದ ವಿಶೇಷಜ್ಞರು ಗಮನಸೆಳೆಯುತ್ತಾರೆ. ಪತ್ರಿಕೆಗಳಲ್ಲಿ, ಅದರಲ್ಲೂ ಮುಖ್ಯವಾಹಿನಿಯಲ್ಲಿರುವ ಅನೇಕ ವಾರಪತ್ರಿಕೆ, ಪಾಕ್ಷಿಕ ಹಾಗೂ ಮಾಸಿಕ ಪತ್ರಿಕೆಗಳಲ್ಲಿ ಫ್ಯಾಷನ್, ಗ್ಲಾಮರ್‌ಗೇ ಪ್ರಮುಖ ಸ್ಥಾನ. ದೈನಿಕ ಪತ್ರಿಕೆಗಳದ್ದು ಅದೇ ಪರಿಸ್ಥಿತಿ. ಮೂರನೇ ಪುಟದಲ್ಲಿ ಇರಬೇಕಾದ ಸುದ್ದಿಗಳು ಮೊದಲನೆಯ ಪುಟದಲ್ಲಿ ರಾರಾಜಿಸುತ್ತವೆ. ಸುದ್ದಿ ಮೌಲ್ಯದ ಅರ್ಥವೇ ಬದಲಾಗುತ್ತಿದೆ. ಕೆಲವು ತಿಂಗಳುಗಳ ಹಿಂದೆ ಬಾಲಿವುಡ್‌ನ ಚಲನಚಿತ್ರ ತಾರೆಯರಾದ ಅಭಿಷೇಕ್ ಬಚ್ಚನ್ ಹಾಗೂ ಐಶ್ವರ್ಯ ರೈ ಕರ್ನಾಟಕದ ಬಾಗಲಕೋಟೆಗೆ ಶೂಟಿಂಗ್ ನಿಮಿತ್ತ ಬಂದಿದ್ದರು. ಅವರನ್ನು ಹತ್ತಿರದಿಂದ ಕಾಣಲು ಜನರು ಜಾತ್ರೆಯೋಪಾದಿಯಲ್ಲಿ ಜಮಾಯಿಸಿದ್ದರು. ಐಶ್ವರ್ಯ ರೈಯ ಬೆರಳಿಗೆ ಸಣ್ಣ ಗಾಯವಾಗಿ, ಒಂದು ದಿನದ ಶೂಟಿಂಗ್ ಕಾರ್ಯಕ್ರಮ ರದ್ದಾಯಿತು. ಕರ್ನಾಟಕದ ಅನೇಕ ಕನ್ನಡ ಹಾಗೂ ಆಂಗ್ಲ ದೈನಿಕಗಳಲ್ಲಿ ಈ ವಿಷಯ ಮೊದಲನೆಯ ಪುಟದಲ್ಲಿ ಪ್ರಕಟವಾಯಿತು. ಒಂದು ಖಾಸಗಿ ಟಿ.ವಿ. ಚ್ಯಾನಲ್ ಅಂತೂ ವಿಶೇಷ ಬಾತ್ಮೀದಾರರನ್ನು ಫೋನ್ ಮೂಲಕ ಸಂಪರ್ಕಿಸಿ ಆ ನಟಿಯ ದೇಹಸ್ಥಿತಿಯ ಬಗ್ಗೆ ವಿಚಾರಿಸಿ, ವೀಕ್ಷಕರಿಗೆ ತಕ್ಷಣ ಸುದ್ದಿ ಮುಟ್ಟಿಸಿತು! ಹೀಗೆ, ಮಾಹಿತಿ-ಮನರಂಜನೆಗೇ ಪ್ರಾಶಸ್ತ್ಯ ಸಿಗುತ್ತಿದೆ. ಅಭಿವೃದ್ಧಿ ಪತ್ರಿಕೋದ್ಯಮ ಹಿನ್ನಡೆದಿದೆ. ಪತ್ರಿಕೆಯ ಹೂರಣವನ್ನು ನಿರ್ಧರಿಸುವುದು ಜಾಹೀರಾತು ವಿಭಾಗದ ಮ್ಯಾನೇಜರು. ಪೀತ ಪತ್ರಿಕೋದ್ಯಮದ್ದಂತೂ ಆತಂಕಕಾರಿ ಬೆಳವಣಿಗೆ. ಹೆಚ್ಚಿನ ಟ್ಯಾಬ್ಲಾಯಿಡುಗಳಲ್ಲಿ ಸೆಕ್ಸ್, ಕ್ರೈಮ್‌ಗಳಿಗೆ ಸ್ಥಳಾವಕಾಶದಲ್ಲಿ ಸಿಂಹಪಾಲು.

ಪತ್ರಿಕೆಗಳು ತಮ್ಮ ವೃತ್ತಿಧರ್ಮವನ್ನು ಸಂಪೂರ್ಣ ಕಡೆಗಣಿಸಿ, ರಂಜಕ ಸ್ಫೋಟಕ ಸುದ್ದಿಗಳನ್ನು ಪ್ರಕಟಿಸಿ, ಸತ್ಯವನ್ನು ತಿರುಚಿ, ಅರ್ಧ ಸತ್ಯಗಳನ್ನಾಗಿ ಪರಿವರ್ತಿಸುವುದು ಹಲವಾರು ಸಂದರ್ಭಗಳಲ್ಲಿ ಕಂಡುಬಂದಿದೆ. ಗುಜರಾತಿನಲ್ಲಿ ಜರುಗಿದ ಹತ್ಯಾಕಾಂಡದಲ್ಲಿ ಆಂಗ್ಲ ದೈನಿಕಗಳು ವಸ್ತುಸ್ಥಿತಿಯನ್ನು ಪ್ರಕಟಿಸಿದವು. ಆದರೆ ಹೆಚ್ಚಿನ ಗುಜರಾತಿ ಪತ್ರಿಕೆಗಳು ವಾಸ್ತವತೆಗೆ ಮಸಿ ಬಳಿದು ಸುಳ್ಳು ಮಾಹಿತಿಗಳನ್ನು ನೀಡಿದವು. ಈ ಬೆಳವಣಿಗೆ ವ್ಯಾಪಕ ಖಂಡನೆಗೆ ಗುರಿಯಾದ್ದನ್ನು ನೆನಪಿಸಿಕೊಳ್ಳಬಹುದು.

ಈಗ, ಇನ್ನೊಂದು ಪ್ರಕರಣದ ಬಗೆಗೆ ಗಮನಹರಿಸೋಣ. ಜೆಸ್ಸಿಕ ಲಾಲ್ ಹತ್ಯೆ ಖಂಡನಾರ್ಹವಾದದ್ದು. ಕಾನೂನುರೀತ್ಯ ಕೊಲೆಗಡುಕನಿಗೆ ಸೂಕ್ತ ಶಿಕ್ಷೆಯಾಗಲೇಬೇಕು. ಈ ವಿಷಯದಲ್ಲಿ ನ್ಯಾಯ ದೊರಕದಿದ್ದಾಗ ಸುದ್ದಿ ಮಾಧ್ಯಮಗಳು ದೊಡ್ಡ ರೀತಿಯಲ್ಲಿ ಮಧ್ಯ ಪ್ರವೇಶಿಸಿದವು. ಇದೊಂದು ಸ್ವಾಗತಾರ್ಹ ಸಂಗತಿ. ಗುಜರಾತಿನ ಬೆಸ್ಟ್ ಬೇಕರಿ ಪ್ರಕರಣದಲ್ಲಿ ಜಹೀರ ತನ್ನ ಹೇಳಿಕೆಯನ್ನು ಬದಲಾಯಿಸಿದಾಗ, ನ್ಯಾಯಾಲಯ ಆಕೆಗೆ ಶಿಕ್ಷೆಯನ್ನು ವಿಧಿಸಿತು. ಕೆಲವು ಪುರೋಗಾಮಿ ಪತ್ರಿಕೆಗಳೂ ಜಹೀರಳನ್ನು ತರಾಟೆಗೆ ತೆಗೆದುಕೊಂಡವು. ಆದರೆ ಜಹೀರ ಏಕೆ ತನ್ನ ಹೇಳಿಕೆಯನ್ನು ಬದಲಾಯಿಸಿದಳು? ಅದರ ಹಿಂದಿನ ಕಾರಣಗಳೇನು? ಎಂಬುದರ ಕುರಿತು ಮಾಧ್ಯಮಗಳು ಚಕಾರವೆತ್ತಲಿಲ್ಲ. ಈ ಪ್ರಕರಣದಲ್ಲಿ ಆಪಾದಿತನಾದ ವ್ಯಕ್ತಿ ಬಿ.ಜೆ.ಪಿ.ಯ ಪ್ರಭಾವಶಾಲಿ ನಾಯಕ. ಅವನು ಇಂದಿಗೂ ರಾಜಾರೋಷವಾಗಿ ಅಡ್ಡಾಡುತಿದ್ದಾನೆ. ನಮ್ಮ ಮಾಧ್ಯಮಗಳು ಜೆಸ್ಸಿಕ ಲಾಲ್ ಪ್ರಕರಣದಲ್ಲಿ ತೋರಿಸಿದಂತೆ ಏಕೆ ಕ್ರಿಯಾಶೀಲತೆಯನ್ನು ಈ ಪ್ರಕರಣದಲ್ಲಿ ತೋರಿಸಲಿಲ್ಲ? ಸೆಲಿಬ್ರಿಟಿಗಳಿಗೆ ಅನ್ಯಾಯವಾದಾಗ ಮಾತ್ರ ಪ್ರತಿಭಟನೆ ಮಾಡಬೇಕೆ? ಭಾರತದ ಉದ್ದಗಲ ಇಂಥ ಹಲವು ಜೆಸ್ಸಿಕ ಲಾಲ್ ಪ್ರಕರಣಗಳು ಜರಗುತ್ತವೆ. ಆದರೆ ಮಾಧ್ಯಮಗಳು ಅವುಗಳ ಬಗೆಗೆ ಆಸ್ಥೆ ವಹಿಸುತ್ತಿವೆಯೆ? ಇಂತಹ ಪ್ರಶ್ನೆಗಳು ದಿನಗಳು ಕಳೆದಂತೆ ಹೆಚ್ಚುತ್ತಿರುವುದು ಮಾಧ್ಯಮಗಳ ಮುನ್ನಡೆಗೆ ಶುಭಸೂಚಕವಲ್ಲ.

ಇಷ್ಟೆಲ್ಲ ನ್ಯೂನತೆಗಳಿದ್ದರೂ, ಭಾರತದ ಪತ್ರಿಕೆಗಳು ಪ್ರಜಾಪ್ರಭುತ್ವದ ಎಚ್ಚರಿಕೆಯ ಗಂಟೆಗಳಾಗಿವೆ ಎಂಬುದನ್ನು ಮರೆಯಬಾರದು. ಗಾಂಧೀಜಿಯವರು ಎತ್ತಿಹಿಡಿದ ಪತ್ರಿಕಾರಂಗದ ಮೌಲ್ಯಗಳು ಇಂದಿಗೂ ಪ್ರಸ್ತುತವಾಗಿವೆ.

ಮ. ಶ್ರೀ. ಮುರಳಿಕೃಷ್ಣ
ನಂ.೮೮೩/೧೦೧೬ (ಔಟ್ ಹೌಸ್), ೧ನೇ 'ಇ' ಮುಖ್ಯರಸ್ತೆ, ಗಿರಿನಗರ ೨ನೇ ಹಂತ, ಬೆಂಗಳೂರು - ೫೬೦ ೦೮೫

# ಸಿಮೆಂಟು ಸಂತತಿ

ಮೂಲ ತೆಲುಗು ಕಥೆ

ನಗ್ನಮುನಿ

**ಲೋ**ಕದಲ್ಲಿ ಹದಿಹರೆಯದ ಎಲ್ಲ ಹುಡುಗಿಯರಂತೆ ಅವಳೂ ಮೊದಲು ಮಂಜಿನಿಂದ ನೇಯ್ದ ಜರತಾರಿ ಮುಸುಗನ್ನು ಹೊದ್ದು, ಅರಳಲೂ ನಾಚುವ ಮಲ್ಲಿಗೆಯ ಮೊಗ್ಗಿನಂತಿದ್ದಳು. ಕಾಲುಗಳಲ್ಲಿ ಜಿಂಕೆಗಳು ನೆಗೆಯುತ್ತಿದ್ದವು. ಕಣ್ಣ ರೆಪ್ಪೆಗಳನ್ನು ಕನಸುಗಳು ಮುಚ್ಚಿದ್ದವು. ಕಾರ್ಮೋಡದಂಥ ಮದಗಜಗಳು ಗುಂಪು ಗುಂಪಾಗಿ ಅವಳ ಕೇಶ ರಾಶಿಯಲ್ಲಿ ನುಗ್ಗಾಡುತ್ತಿದ್ದವು. ಕಾಲುಗಳೂ, ಕೈಗಳೂ ಸಮಸ್ತ ಅಂಗಾಂಗಗಳು ಹರಯದ ಸುಗಂಧದಿಂದ ಹಳ್ಳಕೊಳ್ಳಗಳಾಗಿ ಧುಮುಕುತ್ತಿದ್ದವು. ತುಟಿಗಳ ಮೇಲೆ ಬೆಳದಿಂಗಳು ತುಳುಕಿ, ಮುತ್ತಿನಂಥ ಹಲ್ಲಿನೊಂದಿಗೆ ಸರಸವಾಡಿ, ಅವಳಲ್ಲಿ ಲೀನವಾಗುತ್ತಿತ್ತು.

ನಡೆದರೆ ನಡೆಯುವ ಆರತಿಯಂತೆ ಕಾಣುತ್ತಿತ್ತು.

ಅವಳ ತಂದೆಯ ಕಾಲು, ಕೈ ಮತ್ತು ಮೆದುಳು ಯಾವಾಗಲೂ ಎಲ್ಲೋ ಕೆಲಸ ಮಾಡುತ್ತಿದ್ದವು. ಅವನು ಅರ್ಧ ರಾತ್ರಿಯಲ್ಲಿ ಎಣ್ಣೆ ಮುಗಿಯುತ್ತಾ ಬಂದಾಗ ಭಗ್ಗೆಂದು, ಕಡೆಯ ಸಾರಿ ಪ್ರಜ್ವಲಿಸುವ ಕಂದೀಲಿನಂತಹ ಕಣ್ಣುಗಳಿಂದ ಮನೆ ಸೇರುವವನು. ಕುಷ್ಠ ರೋಗಿಯಂತೆ ದಾರಿದ್ರ್ಯದಲ್ಲಿ ಹೊರಳಾಡುವವನು. ದಾರಿದ್ರ್ಯವು ಕ್ರಮಶಃ ಅವನ ಅಂಗಾಂಗಗಳನ್ನೆಲ್ಲಾ ತಿಂದುಹಾಕಬಹುದು. ನಿಧಾನವಾಗಿ ಈ ವ್ಯಾಧಿಯು ಮನೆಯ ಗೋಡೆಗಳಿಗೆ, ಇತರ ವಸ್ತುಗಳಿಗೆ, ಮನೆಯ ಇತರರಿಗೆ ವ್ಯಾಪಿಸಬಹುದು.

ತಾಯಿ ಅಡಿಗೆ ಮನೆಯ ಸಾರಿಸುವ ಬಟ್ಟೆ, ತೆರಪಿಲ್ಲದ ಕೆಮ್ಮಿನಿಂದ ಹರಿದ ಚಾಪೆಯ ಮೇಲೆ ಮುಲುಗುವ ಜೀವ. ಅರ್ಧರಾತ್ರಿ ಮಸಿ ಮುತ್ತಿದ ಲಾಟೀನು ಕಣ್ಣುಗಳಿಂದ, ಅರ್ಧಮರ್ಧ ಅವಯವಗಳಿಂದ ಜೀವಹಿಡಿದವಳು. ಬೀದಿಯ ಕಸದ ಗುಡ್ಡೆಗೂ, ಈ ಮನೆಗೂ ಭೇದವೇ ಇಲ್ಲ. ತಿಪ್ಪೆಯ ಮೇಲಿನ ಗುಲಾಬಿ ಸಸಿಯಂತೆ ಆ ಹುಡುಗಿ ತನ್ನನ್ನು ತಾನು ಕಂಡುಕೊಳ್ಳುವ ಮೊದಲೇ ಬೆಳೆದು ನಿಂತಳು.

ಅವಯವಗಳೆಲ್ಲಾ ಸುಂದರ ಪುಷ್ಪಗಳಂತಾದವು. ಕುಂಪಟಿಯಲ್ಲಿ ಇಡುತ್ತೇನೆಂದೂ ಮೇಕೆಗಳ ಪಾಲಾಗದಂತೆ ಕಾಪಾಡುವೆನೆಂದೂ, ಕಸಿಮಾಡಿ ಮತ್ತಿಷ್ಟು ತರತರದ ಸುಂದರ, ರಂಗುರಂಗಿನ ಹೂವು ಬಿಡುವಂತೆ ಮಾಡುವೆನೆಂದೂ ಪುಸ್ತಕಗಳಿಂದಲೂ ಪಕ್ಕದ ಬೀದಿಗಳಿಂದಲೂ ಹುಡುಗನೊಬ್ಬ ಓಡೋಡಿ ಬಂದ.

ಅವನ ಮಾತುಗಳಲ್ಲಿ ಮೈಮರೆಸುವ
ಪಾನೀಯಗಳಿವೆ
ಅವನ ಕಣ್ಣುಗಳಲ್ಲಿ ಗುರಿತಪ್ಪದ ಬಾಣಗಳಿವೆ.
ಅವನ ಬಿಸಿಯುಸಿರಿನಲ್ಲಿ ಮಧುರವಾಗಿ
ಬಂಧಿಸುವ ಬಳ್ಳಿಗಳಿವೆ
ಅವನ ಅಂಗಿಗೆ ಗಲಗಲಿಸುವ ಜೇಬೊಂದಿದೆ.
ಅವನ ಮೈಯಲ್ಲಿ ಸುಳಿಸುಳಿದಾಡಿ ಧಾವಿಸುವ ರಕ್ತ
ಸರಸ್ಸಿದೆ.
ಅವನ ಕೈಯಲ್ಲಿ ಹೃದಯ ಕವಾಟವನ್ನು
ಮೆದುವಾಗಿ ತೆರೆಯಬಲ್ಲ ಬೀಗವಿದೆ.

ಅನುಮತಿಸಬೇಕೋ, ಬೇಡವೋ ಎಂದು ತೀರ್ಮಾನಿಸುವ ಮೊದಲೇ ಅವನು ಆಕೆಯ ಹೃದಯದ ಬಾಗಿಲು ತೆರೆದು ಮೈಯೆಲ್ಲಾ ಆಕ್ರಮಿಸಿಬಿಟ್ಟನು. ದಿನಗಳು ಊದುಬತ್ತಿಯಂತೆ ಉರಿದವು. ವಾಗ್ದಾನದ, ಮಣಿಗಳು ದವನದಂತೆ ಘಮಘಮಿಸಿದವು.

ರಜೆಗಳು ಮುಗಿದವು. ಅವನು ಬಂದಷ್ಟೇ ವೇಗವಾಗಿ ಮರಳಿ ದೂರದ ಕಾಲೇಜಿನ ಪುಸ್ತಕಗಳಿಗೆ ಓಡಿಹೋದನು. ಹೋಗುವಾಗ ಕಿಟಕಿ ಮುಚ್ಚಲಿಲ್ಲ. ಬಾಗಿಲು ಮುಂದೆ ಮಾಡಲಿಲ್ಲ, ಕನಸುಗಳು ಕಣ್ಣು ಮುಚ್ಚಿರಲು, ಹೃದಯವನು ಹಾರುಹೊಡೆದು ಗಾಯ ಮಾಡಿಹೋದನು.

ಬಾಗಿಲ ಹತ್ತಿರ ಸಸಿಯಾಗಿರುವಾಗಲೇ ಮರವಾದ ಅವಳು ಅವನಿಗಾಗಿ ರೆಪ್ಪೆ ಮುರಿದ ಕಂಗಳಿಂದ ಹುಡುಕಿದಳು.

ಅನಂತರ ಆ ಬಾಗಿಲಿಗೆ ನಾನಾ ತರಹದ ಬೀಗದ ವ್ಯಾಪಾರಿಗಳು ಬಂದರು. ಅವರೆಲ್ಲಾ ಬೀಗದ ಕಳ್ಳರೇ ಹೊರತು, ಹೃದಯದ ಬಡಿತವನ್ನು ಹೇಳಬಲ್ಲವರಲ್ಲ. ಕೆಲವರು ಹಳೆಯ ಬೀಗಗಳಿಗೆ ಹೊಸ ಕೀಲಿಕೈ ಕೊಡುವವರು. ಮತ್ತೆ ಕೆಲವರು ಹೊಸ ಬೀಗಗಳನ್ನು ಅತಿ ಬೇಗ ತುಕ್ಕು ಹಿಡಿದ ಬೀಗವನ್ನಾಗಿ ಮಾಡಬಲ್ಲವರು. ಈ ಕಬ್ಬಿಣದ ವ್ಯಾಪಾರಿಗಳಿಗೆ ಕಬ್ಬಿಣದ ಬೀರುವಾ ತೆರೆಯಬಲ್ಲ ಬೀಗಗಳೇ ಬೇಕು, ಅಷ್ಟೆ.

ಅವರು ಅನೇಕ ಪಶುಗಳನ್ನು ಜೊತೆಗೆ ಕರೆತರುತ್ತಿದ್ದರು. ಆ ಪಶುಗಳು ಮಾನವ ಭಾಷೆಯಲ್ಲಿ ಕೂಗಾಡುತ್ತಿದ್ದವು, ಕಚ್ಚುತ್ತಿದ್ದವು. ತಂದೆ-ಮಕ್ಕಳೂ, ಅಣ್ಣ ತಮ್ಮಂದಿರೂ, ಅಳಿಯ-ಮಾವಂದಿರೂ, ಭಾವ ಮತ್ತು ಭಾವಮೈದುನರೂ ನಾನಾ ರೀತಿಯ ಪಶುಗಳು ಬರುತ್ತಿದ್ದವು.

ಒಬ್ಬನು ಬೊಜ್ಜಿನವನು ಖಾದಿವಾಸನೆ ಹೊಡೆಯುತ್ತಾನೆ. ಮತ್ತೊಬ್ಬನದು ಕಾಂಟ್ರಾಕ್ಟ್ ವಾಸನೆ. ಒಬ್ಬನಂತೂ ಕೆಲಕಾಲ ದೇಹದಲ್ಲಿ ಈಜಾಡಿ ಬಸ್ಸೋ, ರಿಕ್ಷಾನೋ ಹತ್ತಿ ಪಾಪ ಮಾಡಿದವನಂತೆ ಪಲಾಯನ ಮಾಡುತ್ತಾನೆ. ಮತ್ತೊಬ್ಬನು ರಾತ್ರಿಯೆಲ್ಲಾ ಗರ್ಜಿಸಿ ಬೆಳಗಾಗುತ್ತಿರಲು ಮಾಮೂಲು ಮುಖಧರಿಸಿ ಮಾಯವಾಗುತ್ತಾನೆ. ಎಲ್ಲರ ಚರ್ಮದ ಭಾಷೆ ಒಂದೇ. ಯಾರಿಗೂ ಹೃದಯದ ದನಿ ಕೇಳದು.



ಈ ದಾರಿಯಲ್ಲಿ ಚರ್ಮವು ಬಿರುಕು ಬಿಡುತ್ತದೆ. ಶರೀರ ವೃಕ್ಷವು ಬರಡಾಗಿ ಚಕ್ಕೆಗಳಾಗಿ ಬೀಳುತ್ತದೆ. ಆದರೂ ಆಕೆಗೆ ಸಾವಿಲ್ಲ, ಅವನು ಈ ದಾರಿಯಲ್ಲಿ ಬಂದೇ ಬರುತ್ತಾನೆ, ಪರಿತಪಿಸುತ್ತಾನೆ, ಮನಸ್ಸನ್ನು ಮರುಳು ಮಾಡುತ್ತಾನೆ. ಮನೆ ಮಕ್ಕಳು ತುಂಬಿದಂತಹ ಸುಖ ಸಂಸಾರದಲ್ಲಿ ಮಲ್ಲಿಗೆಯ ಮಂಟಪ ಕಟ್ಟುತ್ತಾನೆ. ಅವನಿಗಾಗಿ ಹೋಗಿಬರುವ ವರನ್ನೆಲ್ಲಾ ನೋಡೋದು, ಬೀದಿ ಬೀದಿ ಅಲೆಯೋದು, ಪಾರ್ಕಿನಲ್ಲಿ ಕಾದು ಕಾದೂ ಮನೆ ಸೇರೋದು ಬಿಡಲಿಲ್ಲ.

ಒಂದು ದಿನ ಪಾರ್ಕಿನಲ್ಲಿ ತುಂಬಾ ಹೊತ್ತಾಯಿತು. ಎರಡು ದಿನಗಳಿಂದ ಉಪವಾಸ. ನಿಶ್ಶಕ್ತಿಯಾಗಿದೆ. ಮನೆಗೆ ಹೊರಡಲು ಎದ್ದಾಗ ಸಣ್ಣ ಮಳೆ ಶುರುವಾಯಿತು. ಓಡಿ ಹೋಗಿ, ಪಾರ್ಕಿನ ಮೂಲೆಯಲ್ಲಿದ್ದ ಷೆಡ್ ಸೇರಿ ಅಡಗಿ ಕೂತಳು. ಮೈಮೇಲಿನ ಬಟ್ಟೆ ತೊಯ್ದು ತೊಪ್ಪೆಯಾಗಿದೆ. ಗುಡುಗು ಮಿಂಚುಗಳಿಂದ ಮಳೆ ಜೋರಾಗುತ್ತಿದೆ. ಕೆಳಗೆ ಬಂಡೆಗಲ್ಲು, ಮೇಲೆ ತಗಡಿನ ಹೊದಿಕೆ, ನೀರು ಸಿಡಿಯುವುದಿಲ್ಲ. ಎಷ್ಟೋ ವಾಸಿಯೆಂದು ಮೂಲೆಯಲ್ಲಿ ಮುದುರಿ ಕೂತಳು. ಹತ್ತಿರದಲ್ಲಿ ಯಾರೂ ಇಲ್ಲ. ದೂರದಲ್ಲೊಂದು ಮಿಣುಕು ದೀಪ. ಸಣ್ಣಗೆ ಸುರಿವ ಮಳೆ. ಅಲ್ಲೇ ಸನಿಹದಲ್ಲಿ ಮಿಂಚು ಫಳಕ್ಕನೇ ಹೊಳೆದಾಗ ಯಾರೋ ಮಲಗಿರುವುದು ಕಂಡಿತು. ತಟಕ್ಕನೆ ಎದ್ದು ಪರೀಕ್ಷಿಸಿ ನೋಡಿದಾಗ, ಅಂತಹ ವಿಷಾದ ಪರಿಸ್ಥಿತಿಯಲ್ಲೂ ನಗೆ ಉಕ್ಕಿತು.

ಅದು ಆ ಊರನ್ನು ಚಕ್ರವರ್ತಿಯಂತೆ ಪರಿಪಾಲಿಸಿದ ದೊಡ್ಡ ರಾಜಕೀಯ ನಾಯಕನ ವಿಗ್ರಹ. ಬದುಕಿದ್ದಾಗ ಆತನು ಅನೇಕ ಪದವಿಗಳನ್ನು ಅಲಂಕರಿಸಿದ್ದನು. ಅವನ ಕೈಗಳಲ್ಲಿ ಎಲುಬಿಲ್ಲವೆಂದರು. ಸಾಕ್ಷಾತ್ ಶ್ರೀ ವಿಷ್ಣುವೇ ಆತನ ರೂಪದಲ್ಲಿ ಜನಸೇವೆಗಾಗಿ ಅವತರಿಸಿದ್ದಾನೆಂದರು. ಸಮಾಜ ಸುಧಾರಕ, ಬಡವರ ಮತ್ತು ದೀನರ ಉದ್ಧಾರಕ ಎಂದೆಲ್ಲಾ ಹೊಗಳಿದರು.

ಒಂದು ಕಾಲಕ್ಕೆ ಪಾರ್ಕಿನ ನಡುವೆ ದಿನ್ನೆಯ ಮೇಲೆ ರಾಜಠೀವಿಯಲ್ಲಿ ನಿಂತು ಆರಾಧಿಸಲ್ಪಟ್ಟ ವಿಗ್ರಹ. ಈಗ ವಿರೋಧ ಪಕ್ಷದವರು ಅಧಿಕಾರಕ್ಕೆ ಬಂದ ಮೇಲೆ ಅದಕ್ಕೆ ಷೆಡ್ಡೇ ಗತಿಯಾಗಿದೆ.

ಆ ಸಿಮೆಂಟ್ ವಿಗ್ರಹಕ್ಕೆ ಆತುಕೊಂಡು ಆಕೆ ಗೋಡೆಗೊರಗಿದಳು. ಯಾವಾಗಲೋ ನಿದ್ದೆ ಆವರಿಸಿತು. ಮಳೆ ಸುರಿಯುತ್ತಲೇ ಇದೆ. ಅವಳು ಮೂಲೆಗೆ ಸರಿದು ಮುದುರಿಕೊಂಡು ಬಿರುಗಾಳಿಗೆ ಸಿಕ್ಕ ಮರದಂತೆ ವಾಲಿಕೊಂಡಳು. ಗಾಢ ನಿದ್ದೆ ಆವರಿಸಿತು.

ಹಳೆ ಕನಸು.

ನಿದ್ದೆಯಲ್ಲಿ ಅವನೊಂದಿಗೆ ಕಳೆದ ಅಂದಿನ ಕನಸು ಹೊದಿಕೆಯಾಯಿತು.

ಮುಗ್ಧ ಪ್ರಾಣಿಯಂತೆ ಅವನು ಬಂದ. ಬಾಗಿಲು ತಟ್ಟಿದ

ಪರಿತಪಿಸಿದ, ಕ್ಷಮಿಸೆಂದ ಬೇಡಿಕೊಂಡ.

ಮತ್ತೆ ಹೃದಯದ ಬಾಗಿಲು ತೆರೆದ. ಬಲವಾಗಿ, ಭಾರವಾಗಿ, ಮಾತಿನ ಗಮ್ಮತ್ತಿನ ವಾಸನೆಯಿಂದ ಮನೆಯನ್ನು ವಸಂತ ಸಂಭ್ರಮದಿಂದ ತುಂಬಿದ. ಅವನ ಗಾಢಾಲಿಂಗನದಲ್ಲಿ ಮೈಮರೆತಳು. ಆವೇಶದಲ್ಲಿ ಎಲ್ಲವೂ ಕೊಚ್ಚಿಹೋಯಿತು. ಆಯಾಸವಾಗಿ ತನುವು ದಡ ಸೇರಿಕೊಂಡಿತು.

ಮಳೆ ಬಿರುಸಾಯಿತು. ಆಲಿಕಲ್ಲುಗಳು ಬೀಳತೊಡಗಿದವು. ಗಗನದಲ್ಲಿ ಗುಂಡುಗಳು ಉರುಳಿದಂತೆ ಭಾಸವಾಯಿತು. ಜಲ ಖಡ್ಗವು ಗಾಳಿಯನ್ನು ತೀವ್ರವಾಗಿ ಕತ್ತರಿಸುತ್ತಿದೆ, ಭೂಮಿಯನ್ನು ಜಾಲಾಡುತ್ತಿದೆ, ಸಿಡಿಲು ಬೀಳುತ್ತಿದೆ. ಆ ಸಿಡಿಲು ಅವಳ ಮುಚ್ಚಿದ ಕಂಗಳ ಮೇಲೆ ಬಿದ್ದಿತು. ಅವಳ ಎದೆಯ ಮೇಲೆ ಬಿದ್ದಿತು. ಆಕೆಯ ಕನಸಿನ ಮೇಲೆ ಬಿದ್ದಿತು.



ಆಕೆಗೆ ಥಟ್ಟನೆ ಎಚ್ಚರವಾಯಿತು. ಅಂಗಾತ ಮಲಗಿದವಳು ತಕ್ಷಣ ಏಳಲು ಪ್ರಯತ್ನಿಸುತ್ತಾಳೆ. ಏಳಲಾರಳು. ದೇಹದ ಶಕ್ತಿಯನ್ನೆಲ್ಲಾ ಹಾಕಿ ಕೂಡವಿಕೊಂಡು ಏಳಲು ಪ್ರಯತ್ನಿಸುತ್ತಾಳೆ. ಆದರೆ, ಏಳಲಾಗುವುದಿಲ್ಲ. ತನ್ನ ಮೇಲೆ ಏನೋ ಭಾರವಾದ ವಸ್ತು ಮಲಗಿದಂತೆ ಕಾಣುತ್ತಿದೆ. ಕೊರಡಿನಂತೆ ಮಲಗಿದೆ. ಕಲ್ಲು ಬಂಡೆಯಂತೆ ಕದಲದಂತೆ, ಅಲುಗದಂತೆ ಬಿಗಿ ಮಲಗಿದೆ. ಭೂಮಿಗೆ ಹಾಕಿ ಅದುಮಿದಂತೆನಿಸುತ್ತಿದೆ. ಮತ್ತೊಮ್ಮೆ ಕೋಲ್ಮಿಂಚು ಫಳಕ್ಕೆಂದಾಗ ತಾನಿರುವುದೆಲ್ಲಿ, ತನ್ನ ಮೇಲಿರುವುದೇನೋ ಎಂಬುದು ಕಂಡಿತು. ಆಗ ತನ್ನ ಅಣು ಅಣುವಿನ ಶಕ್ತಿಯನ್ನು ಝಾಡಿಸಿ ತನ್ನ ಮೇಲಿದ್ದ ಆ ಸಿಮೆಂಟು ವಿಗ್ರಹವನ್ನು ದೂಡಿ ಕೊಸರಿ ಎದ್ದುನಿಂತಳು. ಮತ್ತೊಮ್ಮೆ ಮಿಂಚಿದಾಗ ಪರೀಕ್ಷಿಸಿ ನೋಡಿದಳು.

ಸಿಮೆಂಟು ವಿಗ್ರಹ ತನ್ನ ಕಡೆ ನೋಡಿ ನಗುತ್ತಿರುವ ರಾಜಕೀಯ ನಾಯಕನ ವಿಗ್ರಹ. ಮತ್ತೆ ಸಿಮೆಂಟು ಕೈಗಳಿಂದ ತನ್ನತ್ತ ಎಳೆಯಲು ಪ್ರಯತ್ನಿಸುತ್ತಿದೆ. ಅವಳು ತನ್ನ ಬಿಚ್ಚಿದ ಸೀರೆಯನ್ನು ಕಟ್ಟಿಕೊಳ್ಳಲು ಪ್ರಯತ್ನಿಸುತ್ತಿದ್ದಾಳೆ.

ತನ್ನ ಕನಸಿನಲ್ಲಿ ತಾನು ಸೇರಿದ್ದು ಈ ವಿಗ್ರಹದ ಬಾಹು ಬಂಧನದಲ್ಲೇನಾ ? ಆ ವಿಗ್ರಹದ ಕೈಗಳು ಮತ್ತೆ ಮತ್ತೆ ಅವಳನ್ನು ಬಾಚಿಕೊಳ್ಳಲು ಪ್ರಯತ್ನಿಸುತ್ತಿವೆ. ಅವಳಿಗೆ ಹುಚ್ಚು ಹಿಡಿದಂತಾಗಿ, ಮಳೆಯಲ್ಲೇ ಹೊರಬಂದಳು. ದಾರಿ ತಪ್ಪಿತು. ಅಂತೂ ಇಂತು ಮನೆ ಸೇರಿದಳು.

ಮುಟ್ಟು ನಿಂತಿತು.

ಬಸಿರಲ್ಲಿ ಸಿಮೆಂಟು ಬಲದಿಂದ ಮತ್ತೊಂದು ಜೀವವು ಗುಂಡುಗಳ ನಡುವೆ ಓಲಾಡಿತು. ಆ ಮೊಳಕೆಯನ್ನು ಕಿತ್ತೆಸೆಯಲಾಗಲಿಲ್ಲ. ಆಕಾಶದ ಬಸಿರು ಸೀಳಿ ಕರುಳೆಲ್ಲಾ ಹೊರಚೆಲ್ಲಿದಂತೆ ಮಿಂಚುಗಳು. ದೇಹದ ಮೇಲೆ ನಿರಂತರ ಸುರಿವ ಕೊಳೆ ನೀರು ಮಳೆ. ಲೋಕವೆಂಬ ಮಸಣದಲ್ಲಿ ಅಸ್ಥಿಪಂಜರಗಳಂತೆ ಬೆಳೆಯುತ್ತಿರುವ ಬೀಗದ ಕೈಗಳು. ಮುಖದಲ್ಲಿ ವನ್ಯ ಪ್ರಾಣಿಗಳ ಕೇಕೆಗಳು. ಆದರೂ ಅವಳಲ್ಲಿ ಆಶೆ ಕಮರಲಿಲ್ಲ. ಮತ್ತೊಮ್ಮೆ ಬರುತ್ತಾನೆ. ಗಾಯಗಳನ್ನು ತೊಳೆಯುತ್ತಾನೆ. ಎದೆಯ ಸನಿಹದಲ್ಲಿ ಪ್ರೇಮ ಮುರಳಿ ಮುರಳಿಗಾನ ಮಾಡುತ್ತಾನೆ.

ಮತ್ತೊಂದು ಗುಲಾಬಿ ಸಸಿಯು ತಿಪ್ಪೆಯ ಮೇಲೆ ಕುಡಿಯೊಡೆಯುತ್ತಿದೆ. ಸಾವಿರ ದಳಗಳಿಂದ ಅರಳುತ್ತದೆ. ಸಿಮೆಂಟು ಕೈಗಳಲ್ಲಿ, ಕಾಲ ಕೆಳಗೆ, ಹೊಲಸು ಅವಯವಗಳ ಕೆಳಗೆ ಸೇರಿ ತೊತ್ತುಳಿಯಾಗುತ್ತದೆ.

ರಾಜಕೀಯ ನಾಯಕ ಪ್ರಾಣಿಗಳು ಬದುಕಿರುವಾಗಲೇ ಅಲ್ಲದೆ ಸತ್ತು ಸಿಮೆಂಟಿನ ವಿಗ್ರಹಗಳಾದರೂ ಜನರ ಭವಿಷ್ಯತ್ತನ್ನು ಅಂಧಕಾರಮಯ ಮಾಡಿ ತಮ್ಮ ಸಂತತಿಯನ್ನು ಬೆಳೆಸುತ್ತಾರೆ.

ಸೃಷ್ಟಿಗೆ ಕೂಡ ತನ್ನ ಸೃಷ್ಟಿಯನ್ನು ಕಾಪಾಡಬೇಕೆಂದಿಲ್ಲವೇ ?

ಕನ್ನಡಾನುವಾದ : ಗುರುಮೂರ್ತಿ ಪೆಂಡಕೂರು

ಹಗರಿಬೊಮ್ಮನಹಳ್ಳಿ



ಗಾಯತ್ರಿ ಹತಾಶಳಾಗಿದ್ದಳು. ನಿಂತ ನೆಲ ಕುಸಿದಂತ ಅನುಭವ. ಕೈಗಳು ಯಾಂತ್ರಿಕವಾಗಿ ಜಿಂಕೆಯ ಗೊಂಬೆಗೆ ಕಣ್ಣುಗಳನ್ನು ಅಂಟಿಸುತ್ತಿದ್ದವು.

ಈ ಗೊಂಬೆ ಮಾಡುವ ಕಲೆ ನನ್ನ ಹೊಟ್ಟೆಗೆ ಅನ್ನ ನೀಡಿತ್ತು. ಇಷ್ಟು ವರ್ಷ ತನ್ನ ಗೊಂಬೆ ಪಡೆದು ಮಾರುತ್ತಿದ್ದ ವೆಂಕಟಾಚಲ ಶೆಟ್ಟರು ತಮ್ಮ ಅಂಗಡಿ ಮುಚ್ಚಿ ಮಗ ನೆಲಸಿದ್ದ ಪುಣೆಗೆ ಹೋದಾಗ ಅಧೀರಳಾದ ಗಾಯತ್ರಿಗೆ, ಉಳಿದ ಅಂಗಡಿಯವರು ಕೊಂಡಾರು ಎಂಬ ಆಶಾಭಾವನೆ ಇತ್ತು.

ವಾರದಿಂದ ಗೊಂಬೆಗಳನ್ನು ಹೊತ್ತು ಹಲವಾರು ಅಂಗಡಿ ಸುತ್ತಿದ್ದಾಳೆ. ''ಈಗ ಯಾರೂ ಕೊಳ್ತಾ ಇಲ್ಲ. ಹಳೇ ಸ್ಟಾಕೇ ಸಾಕಷ್ಟಿದೆ. ನಮಗೆ ಬೇಡ'' ಎಂದೇ ಎಲ್ಲರ ಉತ್ತರ. ಗಫೂರಜ್ಜ ತಿಂಗಳಿಂದ ಊರಲ್ಲಿರಲಿಲ್ಲ. ಹಿಂದೆ ಗಳಿಸಿಟ್ಟ ಹಣ ಹೊಟ್ಟೆಗಾಗಿ ಕರಗ್ತಾ ಇದೆ.

ಜೈನಾಬಿ ''ಗೊಂಬೆಗೊಳ್ನ ಬಾಕ್ಸಿನಾಗೆ ಹಾಕಿಕೊಡು. ನಮ್ಮ ಸಲ್ಮಾ ಮನೀಗೆ ಹೋಗ್ತಾ ಅದೀನಿ. ಆ ಊರ್ನಾಗೆ ವ್ಯಾಪಾರಾಗ್ತದೇನೋ ನೋಡಾಣ. ನಿನ್ನ ನಸೀಬು ಹೆಂಗದೋ'' ಅಂದಾಳೆ. ದುರ್ಗದಂತ ದೊಡ್ಡೂರ್ನಾಗೇ ಮಾರಾಟ ಆಗ್ದೆ ಇರೋವಾಗ ಆ ಸಣ್ಣ ಊರ್ನಾಗೆ ಆದೀತಾ ? ಗಾಯತ್ರಿಯ ತಲೆ ಪಟ ಪಟ ಸಿಡಿಯುತ್ತಿತ್ತು.

ಮೊನ್ನೆ ಅಸರ್‌ನ ನಮಾಜು ಮುಗಿಸಿ ಮಸೀದಿಯಿಂದ ಬಂದ ಗಫೂರಜ್ಜ ಜಗುಲಿ ಮೇಲೆ ಕೂಡುತ್ತಾ,

''ಹೆಂಗಿದ್ದೀ ಮಗಳೇ, ತಿಂಗಳಿಂದ ನಾನು ಊರ್ನಾಗಿರಲಿಲ್ಲ. ಯಾಕೆ ಸಪ್ಪಗಿದೀ ?'' ಅಂದಾಗ ಗಾಯತ್ರಿಯ ಅಳು ಕಟ್ಟೆ ಒಡೆದಿತ್ತು.

# ನಡೆವುದೊಂದೇ ಭೂಮಿ...

ಜಿ. ಎಸ್. ಸುಶೀಲಾದೇವಿ ಆರ್. ರಾವ್

ಅವಳು ಹೇಳಿದ್ದೆಲ್ಲ ಕೇಳಿ ಗಫೂರಜ್ಜ ತಲೆ ಸವರಿದರು.

''ಸುಮ್ಮನಿರು ಮಗಳೇ. ಅಲ್ಲಾ ಕಾಪಾಡ್ತಾನೆ. ನೋಡು ಕಾಲ ಬದಲಾದಂಗೆಲ್ಲ ನಾವೂ ಬದಲಾಗ್ಬೇಕು. ಹಿಂದೆ ನಾವು ಜಟಕಾ ಗಾಡಿ ಓಡಿಸ್ತಿದ್ವಿ. ರಿಕ್ಷಾ ಬಂದ್ವು. ಜಟಕಾ ಕೇಳೋರೇ ಇರ್‍ದೆ ಮೂಲೆಗೆ ಬಿತ್ತು. ಟಾಕೀಸ್ನಾಗೆ ಸಿನಿಮಾ ನಡೀತಿದ್ವು. ಟೀವಿ ಬಂದ್ವು. ಜನ ಟೀವಿ ಮುಂದೆ ಕುಂತ್ರು. ಜನ ಬರ್‍ದೆ ಎಷ್ಟೋ ಟಾಕೀಸೆಲ್ಲ ಶಾದಿ ಮಹಲ್ಲಾದ್ವು. ಹಂಗೇ ಗೊಂಬೆ ವ್ಯಾಪಾರ ನಿಂತ್ರೆ ಬೇರೆ ದಾರಿ ಹುಡುಕೋಣ. ನಮ್ಮ ಹಮೀದಂದು ಕಪಡಾ ಅಂಗ್ಡಿ ಅದೆ. ಹೊಲಿದ ಬಟ್ಟೆ ಮಾರ್ತಾನಾ ಕೇಳಾಣ.''

ಗಫೂರಜ್ಜ ಗಟ್ಟಿ ಆಸಾಮಿ. ತಲೆ ಕೆಡಿಸಿಕೊಳ್ಳೋ ಜನ ಅಲ್ಲ.

ಎದುರಿನ ಗೋಡೆಯ ಬದಿಯಲ್ಲಿ ಪರೀಕ್ಷೆ ಮುಗಿಸಿದ ನಿರಾಳತೆಯಲ್ಲಿ ಧನ್ಯ ನಿದ್ರಿಸುತ್ತಿದ್ದಳು. ನಾನು ಬದುಕು ಹೇಗೆ, ಹೊಟ್ಟೆ ಗತಿ ಏನು ಅಂತ ಚಿಂತಿಸ್ತಾ ಇದ್ದರೆ ಧನ್ಯಳ ಪ್ರಪಂಚವೇ ಬೇರೆ.

ಸೆಕೆಂಡ್ ಪಿ.ಯು.ಸಿ.ಲಿ ಶೇ. ೯೦ರ ಮೇಲೇ ಬರ್ತದೆ ಮಮ್ಮೀ... ಸಿ.ಇ.ಟಿ.ಲಿ ಪಾಸಾಗಿ ಮೆರಿಟ್ ಸೀಟು ಸಿಕ್ರೆ ಮೆಡಿಕಲ್ ಕಲೀಬೇಕು ಅಂತ ಆಸೆ ಮಮ್ಮೀ... ಗಫೂರಜ್ಜ ನೀನು ಡಾಕ್ಟರಾಗಬೇಕು. ನನ್ನ ಖತೀಜಾನಂತ ತಾಯಂದ್ರನ್ನು ಉಳಿಸಬೇಕು. ಅಂತಿದ್ರಲ್ವ ಮಮ್ಮೀ...''

ಧನ್ಯ ಪ್ರಪಂಚ ತಿಳೀದ ಅಮಾಯಕಳೇನಲ್ಲ. ಅವಳಲ್ಲಿ ಆ ಆಸೆ ತುಂಬಿದ್ದು ಗಫೂರಜ್ಜ ''ಸರ್ಕಾರಿ ಸೀಟು ತಗಾ. ನೋಡೋಣಂತೆ'' ಅಂತ ಅವಳಲ್ಲಿ ಆಸೆ ಹುಟ್ಟಿಸಿದ್ದಾರೆ.

ನನಗೀಗ ಬದುಕಿನ ಆಧಾರವೇ ಕುಸೀತಾ ಇದೆ. ಗಫೂರಜ್ಜನ ಆಸರೆ ಇದ್ರೂ ದುಡಿದು ಅನ್ನ ಉಂಡೋಳು ನಾನು. ನನಗೆ ಆಸರೆ ಕೊಟ್ಟಿದ್ದು, ಧನ್ಯಳನ್ನು ಕಾನ್ವೆಂಟಿನಲ್ಲಿ ಓದಿಸಿದ್ದು ಗಫೂರಜ್ಜನ ತಮ್ಮನ ಮಕ್ಕಳು ಉಸ್ಮಾನ್, ಕರೀಂ ಇಬ್ಬರ ಕಣ್ಣನ್ನೂ ಕೆಂಪಾಗಿಸಿದೆ.

''ಎಲ್ಲಿಂದ ಬಂದವೋ ಈ ಸೈತಾನ್‌ಗಳು. ಆಸ್ತೀ ಮೇಲೆ ಕಣ್ಣಿಟ್ಟವೆ'' ಎಂದು ಗೊಣಗುತ್ತಾರೆ. ಎದುರಿಗೆ ಕಂಡರೆ ನುಂಗುವಂತೆ ದುರುಗುಟ್ಟುತ್ತಾರೆ. ಗಫೂರಜ್ಜನ ಎದುರು ಹೇಳುವ ತಾಕತ್ತಿಲ್ಲ. ಹಾಗಾಗಿ ನಾನು ಬಚಾವ್.

ಗಫೂರಜ್ಜ ಎಷ್ಟು ಕಾಲ ಇದ್ದಾರು ? ಎಂಬತ್ತೈದರ ಮೇಲಾಗಿದೆ. ''ಒಂದು ಕಾಲು ಭೂಮಿಯ ಮೇಲೆ, ಒಂದು ಕಾಲು ಗೋರಿಯೊಳಗೆ ಮಗಳೇ. ನನ್ನ ಕಾಲ ಮುಗೀತು'' ಎಂದಿದ್ದರಲ್ಲ. ಗಾಯತ್ರಿ ಕೆಲಸ ಮುಗಿಸಿ ಮೇಲೆದ್ದಳು. ಹೊಟ್ಟೆ ಹಸಿಯುತ್ತಿತ್ತು. ಉಣ್ಣಲು ಮನಸ್ಸಾಗದೆ ತಂಬಿಗೆ ಎತ್ತಿ ಗಟಗಟ ನೀರು ಕುಡಿದಳು.

ಗಫೂರಜ್ಜ ನನ್ನಜ್ಜನ ಗೆಳೆಯ. ಸ್ವಾತಂತ್ರ್ಯ ಹೋರಾಟಗಾರ. ''ನಿಮ್ಮಜ್ಜ ಭೀಮಣ್ಣ, ನಾನು, ನಿನ್ನ ಲಗ್ನಾಗಿದ್ನಲ್ಲ ತಿಪ್ಪೇಸ್ವಾಮಿ ಅವನ ದೊಡ್ಡಜ್ಜ ಪಾಲನಾಯ್ಕ, ರುದ್ರೇಗೌಡ, ತುಕ್ಕೋಜಿ, ಮಾದರ ದುರ್ಗ ಇಷ್ಟು ಜನಾನೂ ಒಂದು ಗುಂಪಾಗಿ ಸ್ವಾತಂತ್ರ್ಯಕ್ಕಾಗಿ ಹೋರಾಡ್ತಿದ್ವಿ.''

ಆ ಬಗ್ಗೆ ಎಷ್ಟು ಹೇಳಿದರೂ ಗಫೂರಜ್ಜನಿಗೆ ತೃಪ್ತಿ ಇಲ್ಲ.

''ನಿನ್ನಜ್ಜ ಭೀಮಣ್ಣ ನರಪೇತಲ. ಎಷ್ಟು ಚಂದಾಗಿ ಕ್ರಾಂತಿಗೀತೆ ಹಾಡ್ತಾ ಇದ್ದ ಗೊತ್ತಾ? ಕೇಳೋರ ರಕ್ತ ಕತಕತ ಕುದೀಬೇಕು. ತಾಲ್ಲೂಕು ಕಛೇರಿ ಸುಡ್ತಿದ್ವಿ. ಖಜಾನೆ ಲೂಟಿ ಮಾಡ್ತಿದ್ವಿ. ಪೋಲೀಸ್ ಠಾಣೆಗೇ ಬೆಂಕಿ ಇಡ್ತಿದ್ವಿ.''

''ಅಲ್ಲಜ್ಜಾ, ಗಾಂಧೀಜಿ ಅಹಿಂಸೆ ಅಂತ ಬಡಕಂಡ್ರೆ ನೀವು ಹಿಂಸೆ ಮಾಡ್ತಾ ಇದ್ರಾ?'' ಗಾಯತ್ರಿ ನಗುತ್ತಿದ್ದಳು.

''ನಮ್ದು ಗಾಂಧಿ ಮಾರ್ಗ ಅಲ್ಲ ಮಗಳೇ. ಹಿಂಸಾ ಮಾರ್ಗ. ನಾನು ಪಠಾಣ, ಹೇಡಿಯಾಗಿ ಅಹಿಂಸೆ ಅಂತ ಕೂಡೋ ಜೀವ ಅಲ್ಲ. ಒಂದ್ಸಾರಿ ಏನಾತು ಗೊತ್ತಾ?''

''ಜನ ಗಾಂಧೀಜಿ ಮಾತಿನಂಗೆ ಅಹಿಂಸಾತ್ಮಕ ಚಳುವಳಿ ಮಾಡ್ತಾ ಅದಾರೆ. ಪೋಲೀಸರು ಸತ್ಯಾಗ್ರಹಿಗಳನ್ನು ಲಾಠಿ ತಗಂಡು ಬಡೀತಾ ಇದ್ರಂತೆ. ಒಬ್ಬ ಪಠಾಣನಿಗೆ ರಕ್ತ ಕುದೀತು. ತಲೇ ಮ್ಯಾಲಿನ ಟೋಪ್ಪಿ ತೆಗೆದು 'ಗಾಂಧಿ ಇಲ್ಲಿರಲಿ' ಅಂತ ಕಲ್ಲಿನ ಮೇಲಿಟ್ಟ. ಪೋಲೀಸನ ಲಾಠಿ ಕಸಿದು ಅವನಿಗೇ ಬಾರಿಸಾಕ ಹತ್ತಿದನಂತೆ.'' ಗಫೂರಜ್ಜ ನಗುತ್ತಿದ್ದರು.

''ನಿನ್ನಜ್ಜ ಭೀಮಣ್ಣ ಧನ್ಯ ಅಂತ ಹೆಸರಿಟ್ಟುಕೊಂಡು ಕ್ರಾಂತಿಗೀತೆಗೆ ಬರೀತಾ ಇದ್ದ. ಅದಕ್ಕೇ ನಿನ್ಮಗಳಿಗೆ ಧನ್ಯ ಅಂತ ಹೆಸರಿಟ್ಟಿದ್ದು.''

''............''

''ನಿನ್ನಜ್ಜ, ನಾನು ಚಡ್ಡೀ ದೋಸ್ತರು ಮಗಳೇ.

ಹೋರಾಟದಾಗೆ ಭೂಗತರಾಗಿದ್ದು ಜೀವ ಉಳಿಸಿಕೊಳ್ಳಲು ನೀರಿಗೆ ಬಿದ್ದ ಭೀಮಣ್ಣ ಸುಳಿಗೆ ಸಿಕಿ ಸಾಯ್ತಿದ್ದ. ನಾನು ಜೀವದ ಹಂಗು ಬಿಟ್ಟು ನುಗ್ಗಿ ಅವನ ಕಾಪಾಡಿದ್ದೆ. ನನಗೆ ಪೊದೆಯ ಸಂದೀಲಿ ಅಡಗಿದ್ದಾಗ ಹಾವು ಕಡಿದು ಕೂಗಿಕೊಂಡಾಗ ಭೀಮಣ್ಣ ಓಡಿಬಂದು ವಿಷ ಏರದಂಗೆ ತನ್ನ ಪಂಚೆ ಹರಿದು ಕಟ್ಟಿ ಗಾಯ ಕಚ್ಚಿ ರಕ್ತ ತೆಗೆದು ಉಗುಳಿ ಅದೆಂತದೋ ಸೊಪ್ಪು ಹಚ್ಚಿ ಕಾಪಾಡಿದ್ದ''

ಗಾಯತ್ರಿಯ ಕಣ್ಣಲ್ಲಿ ನೀರಾಡಿತು.

ಎಲ್ಲಿಯ ಭೀಮಸೇನಾಚಾರ್ಯ? ಎಲ್ಲಿಯ ಮಹಮದ್ ಗಫೂರ್ ಖಾನ್? ಅವರಿಬ್ಬರ ಸ್ನೇಹ ನನಗೆ, ಮಗಳಿಗೆ ಆಸರೆ ನೀಡಿತು. ಇಲ್ಲದೇ ಇದ್ದರೆ ನಾನು ಬೀದಿಯ ಹೆಣವಾಗುತ್ತಿದ್ದೆ.

''ನೀವು ನನ್ನ ಜೀವ ಉಳಿಸಿದ್ರಿ...'' ದನಿ ಗದ್ಗದಿಸಿತ್ತು.

''ಜೀವ ಉಳಿಸೋನು ಅಲ್ಲಾಹ್ ಮಗಳೇ. ಮುಂದೇನಾತು ಗೊತ್ತಾ? ನಿನ್ನಜ್ಜ, ನಾವು ಎಲ್ಲರೂ ಗುಂಪಾಗಿ ಕಾಡಿನಾಗೆ ಪೋಲೀಸರ ಕೈಗೆ ಸಿಕ್ಕಿಬಿದ್ದಿದ್ವಿ. ಮರ ಹತ್ತಿ ನೋಡಿದ್ದ ಭೀಮಣ್ಣ ಕೆಳಗಿಳಿದು ನಮ್ಮನ್ನೆಲ್ಲ ಕೊರಕಲಿಗೆ ಇಳಿಸಿ ಓಡಿರಿ ಎಂದ. ಅವನು ಕೆಳಗಿಳಿಯುವ ಮೊದಲೇ ಪೊಲೀಸರಿಗೆ ಸಿಕ್ಕಿಬಿದ್ದ. ಅವರ ಗುಂಡಿಗೆ ಎದೆ ಒಡ್ಡಿ 'ವಂದೇ ಮಾತರಂ' ಅಂತ ಕೂಗಿ ಜೀವ ಬಿಟ್ಟ. ಪೊಲೀಸರು ಹೆಣಾನ ಎಡಗಾಲಿಂದ ಒದ್ದು 'ಸೈತಾನ್ ಕೇ ಬಚ್ಚೇ' ಅಂತ ಉಗುಳಿಹೋದರು. ಕತ್ತಲಾದ ಮೇಲೆ ಭೀಮಣ್ಣನ ಹೆಣ ಹೊತ್ತು ಅವನ ಮನೇ ಜಗುಲೀ ಮೇಲೆ ಇಟ್ವಿ. ನಿಮ್ಮಜ್ಜಿಗೆ ಆಗ ನಿಮ್ಮಪ್ಪ ಮೊಲೀ ಕುಡಿಯಾ ಕೂಸು. ಹೆಣಾ ನೋಡಿ ಬ್ರಾಂಬ್ರೆಲ್ಲ ಸೇರಿದ್ರು.

''ಜಾತಿ ಕೆಟ್ಟವನ ಹೆಣ. ಮಾದರ ದುರ್ಗ ಬೇಯಿಸಿದ್ದು ತಿಂದೋನು. ಶೂದ್ರರ ಜೊತೆಗೆ ಇದ್ದೋನು. ನಮ್ಮ ಜಾತಿ ಕೆಡ್ತದೆ'' ಅಂತ ದೂರ ಸರಿದರಂತೆ. ಅಜ್ಜಿ ಅಳ್ತಾ ಮೈದ ಶೇಷಪ್ಪನ್ನ ಅಂಗಲಾಚ್ತಂತೆ.

''ಸಾವಿರ ರೂಪಾಯಿ ದಂಡ ಕಟ್ಟಿ ಶುದ್ಧಿ ಆಗ್ಬೇಕಂತೆ. ಆಮೇಲೆ ಶ್ರಾದ್ಧದ ಖರ್ಚು ಬೇರೆ. ರೊಕ್ಕ ಯಾವನ್ತಾವ ಅದೆ?'' ಅಂದ್ನಂತೆ.

''ಆಕೆ ಅಳ್ತಾ ಕುಂತಳು. ಹಗಲು ಕಳೆದು ರಾತ್ರಿ ಬಂದರೂ ಭೀಮಣ್ಣನ ಹೆಣ ಅಲ್ಲೇ ಇತ್ತು. ರಾತ್ರಿ ನಾವು ಐವರೂ ಬಂದು ಹೆಣ ಹೊತ್ತು ಊರ ಹೊರಗೆ ಸುಟ್ವಿ.'' ಗಫೂರಜ್ಜನ ಕಣ್ಣು ಒದ್ದೆಯಾಗಿದ್ದವು.

''ಜಾತಿ... ಜಾತಿ... ಈ ಹಾಳು ಜಾತಿಗಳನ್ನ ಯಾರು ಮಾಡಿದ್ರೋ. ಎಲ್ಲಾ ಜನರೂ ಒಂದೇ ಅಲ್ವೇ? ಈ ಜಾತಿ ಧರ್ಮ ಎಲ್ಲ ಹೇಸಿಗೆ. ನಾನಂತೂ ಯಾವ ಜಾತಿಗೂ ಸೇರಿದೋಳಲ್ಲ'' ಗಾಯತ್ರಿ ಅಂದಿದ್ದಳು.

''ಈ ದೇಶ ಹಾಳಾಗಿದ್ದೇ ಜಾತಿ ಧರ್ಮಗಳಿಂದ ಮಗಳೇ. ಈ ಜಾತಿ, ಧರ್ಮಗಳಿಂದ ಪ್ರಪಂಚದಾಗೆ ಎಷ್ಟು ಯುದ್ಧ ಆಗಿವೆ? ಎಷ್ಟು ಜನ ಸತ್ತಾರೆ...'' ಗಫೂರಜ್ಜ ವಿಷಾದದಿಂದ ಅಂದಿದ್ದರು.

ಗಫೂರಜ್ಜನ ಹೆಂಡ್ತಿ ಖತೀಜಮ್ಮ ನಿಕಾ ಆದ ಐದು ವರ್ಷಕ್ಕೆ ಬಸಿರಾದರಂತೆ. ಹೆರಿಗೆ ಕಷ್ಟ. ನನ್ನ ಕೈಲಾಗಲ್ಲ ಆಸ್ಪತ್ರೆಗೆ ಒಯ್ಯಿರಿ ಅಂತ ಸೂಲಗಿತ್ತಿ ಸಕೀನಾಬೀ ಹೇಳಿದಾಗ ಗಾಡಿ ಕಟ್ಟಿಸಿ ದೊಡ್ಡಾಸ್ಪತ್ರೆಗೆ ಒಯ್ದರಂತೆ. ಡಾಕ್ಟರರೇ ಇರಲಿಲ್ವಂತೆ. ಕೈ ಬೆಚ್ಚಗೆ ಮಾಡಿದ ಮೇಲೆ ನರ್ಸುಗಳು ಎದ್ದುಬಂದರಂತೆ. ಅಷ್ಟರಲ್ಲಿ ಕಾಲ ಮೀರಿತ್ತು. ರಕ್ತ ಕೋಡಿ ಹರಿದು ಖತೀಜಮ್ಮ ಸತ್ತರಂತೆ. ಹೊಟ್ಟೆಯಲ್ಲಿ ಅವಳಿ, ಜವಳಿ ಇದ್ದವಂತೆ. ಖತೀಜಮ್ಮ ಕೂಸುಗಳು ಸತ್ತ ಮೇಲೆ ಗಫೂರಜ್ಜ ಕಲ್ಲಾದರು. ಯಾರು ಎಷ್ಟೇ ಹೇಳಿದರೂ ಮತ್ತೆ ನಿಕಾ ಆಗಲಿಲ್ಲ. ''ಧನ್ಯ ಡಾಕ್ಟರಾಗ್ಲಿ. ನನ್ನ ಖತೀಜಾನಂತೋರ್ನ ಉಳಿಸ್ಲಿ'' ಅಂತಲೇ ಅವಳಲ್ಲಿ ಆಸೆ ತುಂಬಿ ಓದಿಸಿದ್ದಾರೆ. ಬಡವರ ಕೈಗೆಟುಕುವ ವಿದ್ಯೆಯೇ ಅದು? ಗಾಯತ್ರಿ ವಿಷಣ್ಣಳಾದಳು. ಧನ್ಯಳ ತಲೆ ಸವರಿ ಅವಳ ಪಕ್ಕ ಉರುಳಿದಳು. ನಿದ್ದೆ ದೂರಾಗಿತ್ತು.

ಅಪ್ಪ ಜೋಯಿಸರಾಗಿದ್ದರು. ಪಾಂಡಿತ್ಯ ಇರಲಿಲ್ಲ. ಎಲ್ಲ ಢೋಂಗಿ. ಹೊಟ್ಟೆಪಾಡಿಗೆ ನಾಟಕ.

''ನಿನಗೆ ಏಳರ ಶನಿಕಾಟ ಅದೆ. ತಿಂಗಳಿಗೇ ಜೀವಗಂಡ ಅದೆ. ಶಾಂತಿ ಮಾಡಿಸಿದರೆ ಜೀವಗಂಡ ಕಳೆದು ಎಂಭತ್ತು ವರ್ಷ ಬದುಕ್ತೀ'' ಅಂತ ಅಮಾಯಕರನ್ನು ಹೆದರಿಸಿ ಶಾಂತಿ, ಹೋಮ ಅಂತ ಸುಲೀತಿದ್ದ. ಎಲ್ಲರ ಭವಿಷ್ಯ ಕುರಿ ತೇಟಿನಂತೆ ಹೇಳಿ ಮುಂದೆ ಹಿಂಗಿಂಗೇ ಆಗ್ತದೆ ಅಂತ ಹೇಳಿ ಸುಲಿಯುತ್ತಿದ್ದ ಅಪ್ಪನಿಗೆ ಸಂಗೆ ನಾಕೂ ಹೆಣ್ಣಾಗ್ತವೆ. ಗಂಡಾಗಲ್ಲ ಅಂತ ತಿಳೀಲೇ ಇಲ್ಲ. ಪ್ರತೀ ಸಾರಿ ಗಂಡಾಗ್ತದೆ ಅಂತ ನಂಬಲಿ, ಹೆಣ್ಣಾದಾಗ ನಿರಾಶೆಯಿಂದ ಕುಸೀತಿದ್ದ. 'ಅಪುತ್ರಸ್ಯ ಗತಿರ್ನಾಸ್ತಿ' ಅಂತ ಹಲಬುತ್ತಿದ್ದ. ಹೆತ್ತ ಹೆಣ್ಣುಮಕ್ಕಳನ್ನು ಸಾಕೋ ಯೋಗ್ಯತೆ ಇಲ್ಲದಿದ್ರೂ ಹುಟ್ಟಿಸಿದ. ಪ್ರಾಯ ಮೀರಿದರೂ ಲಗ್ನ ಆಗದೆ ಅಕ್ಕಂದಿರು ಅಷ್ಟಿಷ್ಟು ಓದಿ ಬತ್ತಿ ಹೊಸೆದು ಮಾರಿ ಬದುಕುತ್ತ ಲಗ್ನ ಆಗಲಿ ಅಂತ ವ್ರತ, ನೇಮ ಮಾಡುತ್ತಿದ್ದರು. ಚಂದದ ಹುಡುಗಿಯರು. ಬ್ರಾಹ್ಮಣರ್ಯಾರೂ ಅವರತ್ರ ದುಡ್ಡಿಲ್ಲ ಅಂತ ಲಗ್ನಾಗಲು ಮುಂದೆ ಬರಲಿಲ್ಲ. ಪ್ರಾಯದ ಹೆಣ್ಮಕ್ಕಳು ಲಗ್ನ ಇಲ್ಲದೆ ಕಣ್ಣೀರಿಡ್ತಿದ್ರೂ ಕೇರ್ ಮಾಡದೆ ಅಪ್ಪ ಗಂಡಾಗಲಿಲ್ಲ ಅಂತ ಹೇಸಿಗೆ ಬರಾ ಹಂಗೆ ಹಲಬುತ್ತಿದ್ದ. ಒಂದಿನ ಹೃದಯ ನಿಂತು ಸತ್ತ. ಹಂಗೂ ಹಿಂಗೂ ಓದಿದ್ದು ಗಾಯತ್ರಿ ಒಬ್ಬಳೇ. ಅವರಿವರನ್ನು ಅಂಗಲಾಚಿ ಫೀಜು ಕಟ್ಟಿ ಪಿಯೂಸಿ ಮುಗಿಸಿ ಕಾಲೇಜು ಸೇರಿದಾಗ ಅಪ್ಪ ಸತ್ತ.

ಅಮ್ಮ ''ಓದು ಸಾಕು. ಹೊಟ್ಟೆಗೆ ಕೂಳಿಲ್ಲ. ನಾನೀಗ ಮುತ್ತೈದೆ ಅಲ್ಲ. ಅಡಿಗೆ ಕೆಲ್ಸಕ್ಕೆ ಹೋಗಾಹಂಗಿಲ್ಲ. ಎಂತದಾರ ಕೆಲ್ಸಕ್ಕೆ ಸೇರ್ಕ'' ಅಂದಳು. ಆಗಲೇ ದುರ್ಗದ ಶ್ರೀಮಂತರ ಮಗ ತಿಪ್ಪೇಸ್ವಾಮಿ ಪ್ರೀತಿಸಿ ಹತ್ತಿರ ಆದದ್ದು. ಧೈರ್ಯ ಮಾಡಿ ಬೆಂಗ್ಳೂರಿಗೆ ಓಡಿ ಲಗ್ನ ಆಗಿದ್ದು. ಸ್ವರ್ಗದಂತಹ ಬದುಕು ನಡೆಸಿದ್ದು. ನಾನು ಐದು ತಿಂಗಳ ಬಸಿರಿ ಆದೆ. ತಿಪ್ಪೇಸ್ವಾಮಿ 'ಮುಂದೆ ಹೆರಿಗೆ, ಬಾಣಂತನ, ಕೂಸು ಸಾಕೋದು ಈ ಸಣ್ಣ ಸಂಬಳದಾಗೆ ಆಗಲ್ಲ. ನಮ್ಮಪ್ಪಗೆ ನನ್ನ ಕಂಡ್ರೆ ಜೀವ. ಕ್ಷಮಿಸ್ತಾನೆ. ಊರಿಗೆ ಹೋಗಾಣ' ಅಂತ ಊರಿಗೆ ಕರೆತಂದಿದ್ದ. ಅವರಪ್ಪ ಮಗನನ್ನು ಒಳಗೆಳೆದುಕೊಂಡು ತನ್ನನ್ನು ಹೊರಗೆ ದಬ್ಬಿದ್ದ. ಬ್ರಾಂಬ್ರು ಜಾತಿ ಕೆಟ್ಟೋಳು ಅಂತ ದೂರ ಸರಿದರು. ತಾನು ಕಂಗಾಲಾದಾಗ ತಿಪ್ಪೇಸ್ವಾಮಿ ಹೆಂಗೋ ತಪ್ಪಿಸಿಕೊಂಡು ಬಂದು ತಾವಿಬ್ಬರೂ ವಾಪಸ್ ಹೋಗಲು ಬಸ್ಸು ಹತ್ತಲಿದ್ದಾಗ ಜನ ನುಗ್ಗಿ ಬಂದಿದ್ದರು. ತಿಪ್ಪೇಸ್ವಾಮಿಯ ಮೇಲೆ ಹಲ್ಲೆ ಆಗಿ ತಲೆಗೆ ಏಟು ಬಿದ್ದು ಆತ ಅಲ್ಲೇ ಹೆಣವಾಗಿ ಬಿದ್ದಿದ್ದ. ತನ್ನನ್ನು ಎಚ್ಚರ ತಪ್ಪಿಸಿ ಒಯ್ದಿದ್ದರು. ಅರೆಬೆತ್ತಲೆಯಾಗಿ ಊರಾಚೆ ಬಿದ್ದಿದ್ದ ತನ್ನ ಮೈಮೇಲೆ ಬಟ್ಟೆ ಹೊಚ್ಚಿ ಎತ್ತಿನ ಗಾಡಿಯಲ್ಲಿ ಗಫೂರಜ್ಜ ಕರೆತಂದು ಅವರ ಜಗಲೀ ಮನೆಗೆ ಸೇರಿಸಿದರು. ಅಮೀನಮ್ಮ, ಸಾರಮ್ಮ ಹೊಟ್ಟೆ ಮಗಳಂಗೆ ಕಾಪಾಡಿ ಹೆರಿಗೆ ಮಾಡಿಸಿದ್ದರು. ಎಲ್ಲ ನೆನಪಾಗಿ ಗಾಯತ್ರಿಗೆ ಅಳು ಉಕ್ಕಿ ಬಂತು. ಬೀದಿಗೆ ಬಿದ್ದ ನನಗೆ ಆಶ್ರಯ ಕೊಟ್ಟೋರು ಗಫೂರಜ್ಜ.

''ಬ್ರಾಂಬ್ರು ರೊಕ್ಕ ಕೊಟ್ಟು ರೌಡಿಗಳನ್ನು ಕರೆಸಿದ್ರಂತೆ ಮಗಳೇ. ತಿಪ್ಪೇಸ್ವಾಮೀನ ಕೊಂದೋರು ಅವರೇ. ರೊಚ್ಚಿಗೆದ್ದ ನಾಯ್ಕರು ನಿನ್ನಮ್ಮನ್ನ, ಅಕ್ಕಂದಿರನ್ನ ಹೊರಗೆಳೆದು ಮನೆಗೆ ಬೆಂಕಿ ಇಕ್ಕಿದ್ರಂತೆ. ಅವ್ರು ಊರು ಬಿಟ್ಟಾರೆ. ನಿನ್ನ ಬದುಕು ಹಾಳು ಮಾಡಿದ್ರಲ್ಲ ಸೈತಾನ್‌ಗಳು. ಗಫೂರಜ್ಜ ಅತ್ತಿದ್ದರು.

ಪೇಪರ್ನಾಗೆ ಸುದ್ದಿ ಆತು. ಯಾರ್ಯಾರನ್ನೋ ಹಿಡಿಕಂಡು ಹೋದರು. ಕೋರ್ಟಿನಲ್ಲಿ ಅಪರಾಧ ಸಾಬೀತಾಗದೆ, ಸಾಕ್ಷಿ ಸಾಲದೆ ಹೊರಗೆ ಬಿಟ್ಟರು. ಅಲ್ಲಿಗೆ ಎಲ್ಲ ತಣ್ಣಗಾಯಿತು.

ಗಾಯತ್ರಿಯ ಹೊಟ್ಟೆ ಧಗಧಗ ಉರೀತಿತ್ತು.

ಧನ್ಯ ಹುಟ್ಟಿ ವರ್ಷವಾಗಿರಬಹುದು. ಗಫೂರಜ್ಜ ಕರೆಸಿ ಕೇಳಿದ್ದರು. ''ನಿನಗಿನ್ನೂ ಇಪ್ಪತ್ತರ ಪ್ರಾಯ ಮಗಳೇ. ನೀನು ನಮ್ಮ ಧರ್ಮಕ್ಕೆ ಸೇರಿಬಿಡು. ನಿನಗೊಂದು ನಿಕಾ ಮಾಡಿಸ್ತೀನಿ.''

''ನನಗಿನ್ನೆಂತ ನಿಕಾ? ಖತೀಜಮ್ಮ ಸತ್ತಾಗ ನೀವು ಹೆಂಗೆ ಕಲ್ಲಾದಿರೋ ಹಂಗೆ ಧನ್ಯಳ ಅಪ್ಪ ಸತ್ತಾಗ ನಾನು ಕಲ್ಲಾಗಿದೀನಿ. ಈ ಕೂಸಿಗಾಗಿ ಬದುಕಬೇಕು, ಅಷ್ಟೇ.''

''ಬ್ರಾಂಬ್ರು ನಿನ್ನ ಸೇರಲ್ಲ. ನಾಯ್ಕರು ನಿನ್ನ ಸೇರಿಸಲ್ಲ. ನೀನೀಗ ಯಾವ ಜಾತಿ ಮಗಳೇ? ನಮ್ಮ ಜಾತಿ ಸೇರಿದ್ರೆ ನಮ್ಮ ಗುಂಪಿನಾಗಾದ್ರೂ ಬದುಕಬೋದಲ್ಲ?''

''ಬದುಕಕ್ಕೊಂದು ಜಾತಿ ಬೇಕೇ ಬೇಕೇನಜ್ಜಾ? ಯಾವ ಜಾತೀನೂ ಇಲ್ದೆ ಮನುಷ್ಯರಾಗಿ ಬದುಕಕ್ಕಾಗಲ್ವಾ?''

''ಹಂಗೆ ಬದುಕೋದು ಕಷ್ಟ ಮಗಳೇ. ಹುಟ್ಟಿಗೆ, ಶಾದಿಗೆ, ಸಂಸ್ಕಾರಕ್ಕೆ ಜಾತಿ ಬೇಕೇಬೇಕು. ಎಲ್ಲ ಮನುಷ್ಯರನ್ನೂ ಇವ್ನು ಇಂತ ಜಾತಿಯೋನು ಅಂತಲೇ ಗುರ್ತಿಸೋದು.''

''ನಾವು ಇಂತಾ ಜಾತಿ, ಇಂತಾ ಧರ್ಮ ಹೆಚ್ಚು ಅಂತ ಆರಿಸಿಕೊಳ್ಳಿಲ್ಲಜ್ಜಾ. ನಾವು ಹುಟ್ಟಿದಾಗ ಹೆತ್ತೋರು ಯಾವ ಜಾತಿನೋ ಅದೇ ಜಾತಿ ಆದ್ವಿ...''

''ನಿಜ ಮಗಳೇ. ಆದ್ರೆ ಎಲ್ಲಾ ಜಾತೀನೂ ಒಂದೇ. ಬುದ್ಧ, ಬಸವ, ಪೈಗಂಬರರು, ರಾಮ, ಮಹಾವೀರ, ಏಸು ಎಲ್ಲರೂ ದೇವ್ರನ್ನ ನಂಬಿರಿ. ಶಾಂತಿಯಿಂದ ಬಾಳಿರಿ ಅಂತಲೇ ಹೇಳಿದ್ದು.

''......................''

ಈ ಮನುಷ್ಯ ನಂದೇ ಮೇಲಿನ ಜಾತಿ. ಉಳಿದೋರು ಕೀಳು ಅಂತಲೇ ಹೇಳ್ತಾನೆ.

ಈ ಧರ್ಮಕ್ಕಾಗಿ, ಜಾತಿಗಾಗಿ ಎಷ್ಟು ಯುದ್ಧ ನಡೆದವು ? ಎಷ್ಟು ಜನ ಪಾಪದೋರು ಸತ್ತರು ? ಎಲ್ಲಾ ಜಾತಿ ಧರ್ಮಾನೂ ಒಂದೇ ಮಗಳೇ. ನಾವು ಅಲ್ಲಾಹ್‌ನನ್ನು ನಂಬ್ತೀವಿ. ಅವ್ರು ರಾಮನನ್ನ, ಶಿವನನ್ನ, ಬುದ್ಧನನ್ನ, ಜೀನನನ್ನ, ಏಸುವನ್ನ ನಂಬ್ತಾರೆ. ಭೀಮಣ್ಣ ಹೇಳ್ತಿದ್ದ, 'ಆಕಾಶದಾಗೆ ಬಿದ್ದ ಮಳೆನೀರು ಹೆಂಗೆ ಸಮುದ್ರ ಸೇರ್ತದೋ ಹಂಗೆ ಎಲ್ಲರ ನಮಸ್ಕಾರಾನೂ ಒಬ್ನೇ ದೇವರಿಗೆ ಸೇರ್ತದೆ' ಅಂತ.

''ಹಂಗಿದ್ರೂ ಈ ಜಾತಿ, ಧರ್ಮ ಆಚರಿಸ್ತಿದ್ರೂ ಎಲ್ಲರೂ ಅಣ್ತಮ್ಮರಂಗೆ ಬದುಕಬಹುದಲ್ಲಜ್ಜಾ ?''

''ನಂದೇ ಮೇಲಿನ ಜಾತಿ ಅಂತ ಇನ್ನೊಬ್ರನ್ನು ಕೊಲ್ಲೋ ಈ ಮನುಷ್ಯ ಬುದ್ಧಿ ಕಲಿಯಲ್ಲ ಮಗಳೇ. ಪ್ರಪಂಚದಾಗೆ ಯಾವ್ದೇ ಜಾತಿ ಧರ್ಮದ ಗಂಡ್ಸು ಯಾವುದೇ ಜಾತಿ ಧರ್ಮದ ಹೆಂಗ್ಸನ್ನ ಶಾದಿ ಆದ್ರೂ ಮಕ್ಕಳಾಗ್ತವೆ. ಮನುಷ್ಯರೆಲ್ಲ ಒಂದೇ ಅನ್ನಕ್ಕೆ ಇನ್ನೇನು ಸಾಕ್ಷಿ ಬೇಕು ?'' ಅಂದ ಗಫೂರಜ್ಜ ಎರಡೂ ಕೈ ಮೇಲೆತ್ತಿ.

''ರಬ್ಬುಲ್ ಆಲಮೀನಾಯೇ ತಂಪುರಾನೆ. ಮನುಷ್ಯನಿಗೆ ಮನುಷ್ಯನಂಗೆ ಬದುಕೋ ಬುದ್ಧಿ ಕೊಡು'' ಅಂತ ಪ್ರಾರ್ಥಿಸಿದರು.

ಗಾಯತ್ರಿ ಯಾವ ದೇವರಿಗೂ ಕೈ ಮುಗಿಯಲಿಲ್ಲ. ಅವಳ ಹಣೆಯ ತಿಲಕ ಆ ಗುಂಪಿನಿಂದ ಆಕೆ ಬೇರೆ ಅನ್ನಿಸುತ್ತಿತ್ತಷ್ಟೇ. ಆಕೆ ಜೈನಾಬೀ, ಅಮೀನಮ್ಮ, ಸಾರಮ್ಮ, ಜಮೀಲಾ, ಸಕೀನಾಬೀ ಎಲ್ಲರ ಜೊತೆ ಬೆರೆತಳು, ಉಂಡಳು. ಬಟ್ಟೆ ಹೊಲಿಯೋದು ಕಲಿಸಿದಳು. ಹುಡುಗಿಯರಿಗೆ ಗೊಂಬೆ ಮಾಡೋದು ಹೇಳಿಕೊಟ್ಟಳು.

ಗಫೂರಜ್ಜ ರಮ್ಜಾನ್ ತಿಂಗಳಲ್ಲಿ ನಿಯ್ಯತ್ ಹೇಳುತ್ತಾ, ''ನವೈತು ಸೌಮಖದಿನ್ ಅನ್ ಅದಾಯಿ ಫರಲ್ ರಮ್ಜಾನಿಹಾದಿ ಹಿಸ್ಸನತಿ ಲಿಲ್ಲಾಹಿತಿ ಅಲ...'' ಅಂತ ಪ್ರಾರ್ಥಿಸಿ ಮಸೀದಿಯ ಸುಭಹ್‌ಭಾಂಗ್ ಕೇಳಿ ನಮಾಜಿಗೆ ಹೋದಾಗ ರಮ್ಜಾನ್ ಬಂತು ಅಂತ ಗಾಯತ್ರಿಗೆ ತಿಳಿಯುತ್ತಿತ್ತು. ಎಲ್ಲರೂ ರಮ್ಜಾನ್ ನೋಂಬು ಆಚರಿಸುವಾಗ ಗಾಯತ್ರಿ ತಾನೂ ಹಗಲ ಊಟ ಬಿಡುತ್ತಿದ್ದಳು.

ಗೊಂಬೆ ಮಾಡಿ ಶೆಟ್ಟರಂಗಡಿಗೆ ಮಾರುತ್ತಿದ್ದಳು. ಶೆಟ್ಟರು ಲಗ್ನದ ಸೀಜನ್‌ನಲ್ಲಿ ಕೊಬ್ಬರಿ ಕೆತ್ತನೆಗೆ ಆರ್ಡರ್ ಕೊಡುತ್ತಿದ್ದರು. ಗಾಯತ್ರಿ ತನ್ನ ಅನ್ನ ತಾನು ದುಡಿದೇ ಉಂಡಳು. ಗಫೂರಜ್ಜ ಬೆನ್ನಿಗಿದ್ದರು. ಹಾಗಾಗಿ ಯಾರೂ ಆಕೆಯ ತಂಟೆಗೆ ಬರಲಿಲ್ಲ.

ಗಫೂರಜ್ಜ ದಿನಕ್ಕೈದು ಬಾರಿ ನಮಾಜು ಮಾಡುವ ನಿಷ್ಠಾವಂತ ಮುಸ್ಲಿಮರು. ತೋಟದಲ್ಲಿ ಮೈಮುರಿದು ದುಡಿಯುವವರು. ಬಡವರ ಕಷ್ಟಕ್ಕಾಗುವ ಹಿರೀಜೀವ.

ಸುಭಹ್‌ಭಾಂಗ್ ಕೇಳಿ ವಜೂ ಮಾಡಿ ನಮಾಜಿಗೆ ಹೊರಟ ಗಫೂರಜ್ಜ ಬಾಗಿಲ ಬಳಿ ಕಲ್ಲಿನಂತೆ ಕುಳಿತಿದ್ದ ಗಾಯತ್ರಿಯನ್ನು ಕಂಡು ''ಹೀಗ್ಯಾಕೆ ಕುಳಿತೆ ಮಗಳೇ ? ಕಣ್ಣು ಕೆಂಪಗಿವೆ ?'' ಎಂದು ಕೇಳಿದರು. ಗಾಯತ್ರಿ ಮಾತಾಡಲಿಲ್ಲ.

''ಆಮೇಲೆ ಮಾತಾಡೋಣ ಮಗಳೇ'' ಎಂದವರು ಹೊರಟುಹೋದರು. ಸಂಜೆ ಬಂದವರು,

''ಹಮೀದನನ್ನು ಕೇಳಿದೆ ಮಗಳೇ. ಫ್ಯಾಷನ್ನಾಗಿ ಹೊಲಿದ ಬಟ್ಟೆ ದಂಡಿಯಾಗಿ ಸಿಗ್ತವೆ. ಕೂಲಿಕೊಟ್ಟು ಹೊಲಿಸೋರ್‍ಯಾರು ಅಂದ. ರೆಡಿಮೇಡ್ ಬಟ್ಟೇನೇ ಜನ ಕೊಳ್ತಾರೆ. ಹೊಲಿಸೋರು ಕಮ್ಮಿ. ಹೊಲಿಗೆ ಮಿಷನ್ನಿಂದ ಬದುಕಕ್ಕಾಗಲ್ಲ. ಪೇಟೆ ಬೀದೀಲಿ ಅಂಗ್ಡಿ ತೆಗೆದು ಮಿಷನ್ನಿಟ್ಟು ಕೂತರೆ ಮಾತ್ರ ಗಿರಾಕಿ ಸಿಗ್ತವೆ ಅಂದ.''

ಗಾಯತ್ರಿ ಚಿಂತೆಯಲ್ಲಿ ಮುಳುಗಿದ್ದಳು.

''ಯಾ ಅಲ್ಲಾಹ್, ಬರುವಂತ ಕಷ್ಟಗಳೆಲ್ಲ ನಮಗೆ ಇಲ್ಲೇ ಬರಲಿ. ನಾಳೆ ಸತ್ತ ನಂತರ ಆಖಿರತ್‌ನಲ್ಲಾದರೂ ಅಲ್ಲಾಹ್ ನಮಗೆ ನೆಮ್ಮದಿ ಕೊಡಲಿ.'' ಅಂತ ಪ್ರಾರ್ಥಿಸಿ ಗಾಯತ್ರಿಯ ತಲೆ ಸವರಿದರು.

''ನಾನು ಇಂದೋ ನಾಳೆಯೋ ಗೋರಿಗೆ ಹೋಗೋನು ಮಗಳೇ. ನಿನಗೊಂದು ಬದುಕು ಕೊಡದೆ ಅಲ್ಲಾಹ್ ನನ್ನ ಕರೆಸಿಕೊಳ್ಳಲ್ಲ. ಅಬ್ದುಲ್ ರೆಹಮಾನ್‌ಗೆ ಫೋನ್ ಮಾಡಿದ್ದೇನೆ. ೩-೪ ದಿನದಾಗೆ ಬರ್ತಾನಂತೆ. ಮತ್ತೆ ಫೋನ್ ಮಾಡ್ತೀನಿ ಅಂದಾನೆ'' ಎನ್ನುತ್ತಿದ್ದಂತೆ ಧನ್ಯ ಓಡಿಬಂದಾಗ ದನಿ ಬದಲಿಸಿ ಉಲ್ಲಸಿತರಾದರು.

''ಪರೀಕ್ಷೆ ಹೆಂಗಾತು ಧನ್ಯ?''

''ಬಾಳಾ ಸುಲಭ ಇತ್ತು. ೯೦ರ ಮೇಲೇ ಬರ್ತದೆ.''

''ಮತ್ತೆ ನಮ್ಮ ಭೀಮಣ್ಣನ ಕುಡಿ ಅಲ್ಲವೇ ನೀನು ? ಅವಂದೂ ಭಾರೀ ಚುರುಕು ಬುದ್ಧಿ'' ಅಂತ ಅವಳ ತಲೆ ನೇವರಿಸಿದರು.

''ಯಾ ಅಲ್ಲಾಹ್ ಈ ಮಗುವಿಗೆ ಒಳ್ಳೇ ಬದುಕು ಕೊಡು'' ಅಂತ ಪ್ರಾರ್ಥಿಸಿದರು.



## ಸುಮ್ಮನಿರಬೇಕಂತೆ...?

ಅಮ್ಮ ಹೇಳುತ್ತಿದ್ದಳು :
'ಕೂಗಬೇಡ, ಗಲಾಟೆ ಮಾಡಬೇಡ
ಅವನು ಗಂಡು ಹುಡುಗ, ನಿನ್ನ ತಮ್ಮ
ಅವನಿಗೆ ತಂಗಳನ್ನ ಬೇಡ
ನೀನು ಹುಡುಗಿ
ನೀನು ತಿನ್ನಬಹುದು.'

ಅಮ್ಮ ಗದರಿಸುತ್ತಿದ್ದಳು :
'ಸುಮ್ಮನಿರು.
ಅವನು ಒಂದೇಟು ಹಾಕಿದರೆ ಏನೀಗಾ ?
ಪ್ರಾಣ ಹೋಯಿತಾ !
ನೀನೆ ಸ್ವಲ್ಪ ಸಹಿಸಿಕೋ ಸಮಾಧಾನದಿಂದಿರು.'

ಕೆಲ ವರುಷದ ನಂತರ
ಅಮ್ಮ, ಕಣ್ಣಿನಲ್ಲಿ ನೀರು ತುಂಬಿಕೊಂಡು
ಅಳುತ್ತಾ... ಕನವರಿಸಿದಳು;
'ಸುಮ್ಮನಿರಮ್ಮಾ...
ಅವನಿಗೆ ತಿಳುವಳಿಕೆ ಕಡಿಮೆ
ನಿನ್ನಷ್ಟು ಜಾಣನಲ್ಲ,
ನೀನು ನ್ಯಾಯ ಕೇಳಿದರೆ,
ಅವನು ಟಿ. ವಿ. ಹೊಡೆದು ಹಾಕುವ !
ಕೈ ಸಿಕ್ಕಿದ್ದು ಬಿಸಾಡುವ !
ನಿನ್ನ ದಮ್ಮಯ್ಯಾ...
ಸುಮ್ಮನಿರಮ್ಮಾ
ಸರಿ-ತಪ್ಪು ಕೇಳಬೇಡ.

ಸುಜಾತ ಲಕ್ಷ್ಮೀಪುರ
೧೬೧, ೭ನೇ ಅಡ್ಡರಸ್ತೆ,
ಲಕ್ಷ್ಮೀಪುರ, ಬೆಂಗಳೂರು - ೧೯

ಅದ್ದು ಕಾಕಾ ಇದೇ ಊರಿನೋರು. ಬೆಂಗ್ಳೂರಿನಲ್ಲಿ ನೆಲಸಿದ್ದಾರೆ. ಆಗಾಗ ಲಾರಿಯೊಂದಿಗೆ ಬರ್ತಾರೆ. ಗಫೂರಜ್ಜನ ಮನೇಲೇ ಅವ್ರು ಉಳಿಯೋದು. ಎಷ್ಟೋ ಬಾರಿ ಗಾಯತ್ರಿ ಅಡಿಗೆ ಮಾಡಿ ಬಡಿಸಿದ್ದಾಳೆ. ಗಾಯತ್ರಿಯನ್ನು ಕಂಡರೆ ಪ್ರೀತಿಯಿಂದ ಮಾತಾಡಿಸ್ತಾರೆ. ಅವರಾದರೂ ನನಗೊಂದು ಬದುಕೋ ದಾರಿ ತೋರಿಸಿಯಾರೇ ಎಂದು ಗಾಯತ್ರಿ ಅವರಿಗಾಗಿ ಕಾಯತೊಡಗಿದಳು.

ಎರಡು ದಿನಗಳು ಕಳೆದಿತ್ತು.

ಮಗ್ರಿಬ್ ನಮಾಜು ಮುಗಿಸಿ ಮಸೀದಿ ಬಾಗಿಲ ಬಳಿ ಬಂದ ಗಫೂರಜ್ಜ ಅಲ್ಲೇ ಕುಸಿದರಂತೆ. ಅಮೀನಮ್ಮನ ಮಗ ಮುನೀರ್ ಓಡಿಬಂದು ಹೇಳಿದ್ದ.

''ಗಫೂರಜ್ಜನಿಗೆ ಲಕ್ವಾ ಹೊಡೆದಿದೆಯಂತೆ. ಬಲಗೈ, ಬಲಗಾಲು ಸ್ವಾಧೀನ ಇಲ್ಲ. ಮಾತೂ ಇಲ್ಲ. ಅವ್ರನ್ನ ಆಸ್ಪತ್ರೆಗೆ ಒಯ್ದರಂತೆ.''

ಅಮೀನಮ್ಮ, ಸಕೀನಾಬೀ, ಮುನೀರರ ಜೊತೆ ಗಾಯತ್ರಿ ಆಸ್ಪತ್ರೆಗೆ ಓಡಿದ್ದಳು. ಅಸಹಾಯಕವಾಗಿ ಮಲಗಿದ್ದ ಗಫೂರಜ್ಜನನ್ನು ಕಂಡು ಅತ್ತಿದ್ದಳು.

ಇನ್ನು ನನ್ನ ಗತಿ ಏನು ? ಇದುವರೆಗೆ ನಿಲ್ಲಲು ಗಟ್ಟಿ ನೆಲವಾದರೂ ಇತ್ತು. ಅದೂ ಅಲುಗಾಡುತ್ತಿದೆ. ಅಜ್ಜನ ತಮ್ಮನ ಮಕ್ಕಳು ಉಸ್ಮಾನ್, ಕರೀಮ್ ಇಲ್ಲೇ ಬಂದು ನೆಲಸುತ್ತಾರಂತೆ. ಜಗುಲಿಯ ಕೋಣೆ ಸಾಮಾನಿಟ್ಟು ಮಲಗಲಿಕ್ಕೆ ಅಷ್ಟೇ. ಅಡಿಗೆಗೆ, ಸ್ನಾನಕ್ಕೆ ಎಲ್ಲದಕ್ಕೂ ಮನೆಯ ಒಳಗೇ ಹೋಗಬೇಕು. ಗಫೂರಜ್ಜ ತಮ್ಮನ ಮನೆಯಲ್ಲೇ ಉಣ್ಣುತ್ತಿದ್ದಳು. ಗೆಳೆಯರು ಬಂದಾಗ ಗಾಯತ್ರಿಯಿಂದ ಮಾಡಿಸಿ ಉಣ್ಣುತ್ತಿದ್ದರು. ಈಗ ಅಜ್ಜ ಪರಾವಲಂಬಿಯಾಗಿ ಮಲಗಿದರೆ ಉಸ್ಮಾನ್, ಕರೀಂ ನನ್ನ ಇಲ್ಲಿ ಉಳಿಯಗೊಟ್ಟಾರೆಯೇ ?

ಗಾಯತ್ರಿ ನಿದ್ದೆಯಿಲ್ಲದೆ ತಳಮಳಿಸಿದಳು. ಆಕೆಯ ಜೊತೆಗೆ ಅಮೀನಮ್ಮ, ಮುನೀರ್, ಉಮರ್ ಮಲಗತೊಡಗಿದರು.

ವಾರ ಕಳೆಯುತ್ತಿದ್ದಂತೆ ಗಫೂರಜ್ಜನನ್ನು ಮನೆಗೆ ತಂದು ಮಲಗಿಸಿದರು. ಆರಡಿ ಎತ್ತರದ ಜಟ್ಟಿಯಂತ, ದೇಹ ಸೊರಗಿತ್ತು. ಅಜ್ಜ ಪರಾವಲಂಬಿಯಾಗಿ, ಅಸಹಾಯಕರಾಗಿ ಮಲಗಿದ್ದರು. ಉಸ್ಮಾನ್, ಕರೀಂ ಇಬ್ಬರೂ ಗಫೂರಜ್ಜನ ಸೇವೆಗೆ ನಿಂತರು. ಜನ ಬಂದು ನೋಡಿಹೋದರು. ರಾತ್ರಿವೇಳೆಗೆ ಗಫೂರಜ್ಜನನ್ನು ನೋಡಲು ಅಬ್ದುಲ್ ಕಾಕಾ ಬಂದರು. ''ಈ ರಾತ್ರಿ ಅದ್ದು ಇರ್ತಾನೆ. ನೀವು ಹೋಗಿ'' ಅಂತ ತಮ್ಮನ ಮಕ್ಕಳಿಗೆ ಸನ್ನೆ ಮಾಡಿ ಕಳಿಸಿದರು ಗಫೂರಜ್ಜ. ರಾತ್ರಿ ಉಂಡು ಮಲಗುವ ಮುನ್ನ ಗಾಯತ್ರಿಯನ್ನು ಕರೆದರು.

ಎಡಗೈಯಿಂದ ಗಾಯತ್ರಿಯ ತಲೆ ಸವರಿದರು. ದನಿ ಬರಲೇ ಇಲ್ಲ. ಕಣ್ಣಿಂದ ದಳ ದಳ ನೀರಿಳಿಯುತ್ತಿದ್ದವು, ಗಾಯತ್ರಿ ಬಿಗಿಯಾಗಿ ಅಜ್ಜನ ನಿಶ್ಶಕ್ತ ಬಲಗೈ ಹಿಡಿದಳು. ಅಜ್ಜ ಏನೋ ಹೇಳಲೆತ್ನಿಸಿ ಸೋತು ಅಬ್ದುಲ್ ಕಾಕಾನಿಗೆ ಸನ್ನೆ ಮಾಡಿ ಹತ್ತಿರದ ನೆಲ ಅಗೆಸಿದರು. ಸಣ್ಣ ಮರದ ಪೆಟ್ಟಿಗೆ ಎತ್ತಿ ಗಾಯತ್ರಿಯ ಕೈಗಿರಿಸಿ ತಲೆ ಸವರಿದರು. ಖತೀಜಮ್ಮನ ಒಡವೆಗಳನ್ನು ಕಂಡು ಗಾಯತ್ರಿಯ ಕಣ್ಣಿನಲ್ಲಿ ನೀರಾಡಿತು. ಅದ್ದುವಿನ ಜೊತೆ ಹೋಗು ಅಂತ ಸನ್ನೆ ಮಾಡಿದರು.

ಅಬ್ದುಲ್‌ಕಾಕಾ ಹೇಳಿದರು.

''ಗಾಯತ್ರಿಗೆ ಮರ್ಯಾದೆಯಾಗಿ ಬದುಕಲು ಒಂದು ದಾರಿ ಮಾಡು ಅಂತ ನಂಗೆ ಫೋನ್ ಮಾಡಿದ್ದರು. ಪರಿಸ್ಥಿತಿ ಎಲ್ಲ ಹೇಳಿದ್ದರು. ನಮ್ಮನೇ ಹತ್ರ ತೆರೇಸಮ್ಮ ಅಂತ ಒಬ್ಬ ನರ್ಸ್ ಮನೆ ಇದೆ. ಸ್ವಂತ ಮನೆ. ತಾಯಿ, ಮಗಳು ಇಬ್ಬರೇ. ಅವ್ರ ಮಗಳು ಮೇರಿಗೆ ಪೋಲಿಯೋದಿಂದ ಕಾಲು ಸರಿ ಇಲ್ಲ. ಇಬ್ಬರನ್ನ ಕೆಲಸಕ್ಕೆ ತಗಂಡು ಬೇಬಿ ಸಿಟ್ಟಿಂಗ್ ನಡೆಸ್ತಿದ್ದಾಳೆ. ಅಲ್ಲಿ ಕೆಲಸ ಮಾಡೋರಿಗೆ ಅಂತ ಮನೇ ಮೇಲೆ ಜಿಂಕ್‌ಶೀಟ್ ಹಾಕ್ಸಿ ಎರಡು ರೂಂ ಕಟ್ಟಿಸಿದ್ದಾರೆ. ಅದರ ಬಾಡಿಗೆ ಮುರಿದುಕೊಂಡೇ ಸಂಬಳ ಕೊಡ್ತಾರೆ. ಒಬ್ಬಾಕೆ ಮಗನಿಗೆ ಕೆಲಸ ಸಿಕ್ಕಿ ಕೆಲಸ ಬಿಟ್ಟಳು. ಗಾಯತ್ರಿಗೆ ರೂಂ, ಕೆಲಸ ಕೊಡಲು ಅವರು ಒಪ್ಪಿದ್ದಾರೆ. ಅಜ್ಜನಿಗೆ ಎಲ್ಲ ತಿಳಿಸಿದ್ದೆ. ನಂಗೆ ಬೇಗ ಬರಕ್ಕಾಗಲಿಲ್ಲ. ಅಷ್ಟರಲ್ಲಿ ಗಫೂರಜ್ಜನಿಗೆ ಹಿಂಗಾತಲ್ಲ ಅಂತ ನಂಗೆ ನೋವಾಗಿದೆ. ನನ್ನೊತೆ ಬಾರಮ್ಮ. ಅಲ್ಲಿ ಸೇರಿಸ್ತೀನಿ.''

ಅಮೀನಮ್ಮ, ಮುನೀರ್ ಸೇರಿ ಗಾಯತ್ರಿಯ ಸಾಮಾನೆಲ್ಲ ಕಟ್ಟಿದರು. ಗಫೂರಜ್ಜನಿಗೆ ನಮಸ್ಕಾರ ಮಾಡಿ ಅತ್ತು ಗಾಯತ್ರಿ, ಧನ್ಯ ಅದ್ದು ಕಾಕನ ಲಾರಿ ಏರಿದರು. ಬೆಳಕು ಹರಿಯಲು ಇನ್ನೂ ೨-೩ ತಾಸಿತ್ತು. ಲಾರಿ ದುರ್ಗ ಬಿಟ್ಟು ಬೆಂಗಳೂರಿನತ್ತ ಓಡುತ್ತಿದ್ದಾಗ ಗಾಯತ್ರಿ ನಂಬದವಳಂತೆ ದಿಗ್ಭ್ರಮೆಯಿಂದ ಕುಳಿತಿದ್ದಳು.

ಗಾಯತ್ರಿ ತೆರೇಸಮ್ಮನ ಮನೆಯ ಮೇಲಿನ ರೂಂನಲ್ಲಿ ನೆಲಸಿ ಬೇಬಿ ಸಿಟ್ಟಿಂಗ್‌ನಲ್ಲಿ ದುಡಿದು ಬದುಕಿಗೊಂದು ದಾರಿ ಆಗಿದ್ದು, ಧನ್ಯಳ ರಿಜಲ್ಟ್ ಬಂದು ಶೇ. ೯೬ ಪಡೆದು ಪಾಸಾಗಿ ಸಿಯೀಟಿಯಲ್ಲಿ ಮೆರಿಟ್ ಬಂದು ಸರ್ಕಾರಿ ಸೀಟು ಸಿಕ್ಕಿದ್ದು ಎಲ್ಲ ಮಿಂಚಿನಂತೆ ನಡೆದವು.

ಗಾಯತ್ರಿಗೀಗ ಹೊಸ ಚಿಂತೆ ಶುರುವಾಯಿತು. ನನಗೆ ಈಗ ನಿಲ್ಲಲೊಂದು ನೆಲೆ, ಅನ್ನಕ್ಕೊಂದು ದಾರಿ ಇದೆ ಅಷ್ಟೇ. ಖತೀಜಮ್ಮನ ಒಡವೆಗಳು ಎಷ್ಟು ಕಾಲ ಬಂದಾವು ? ಧನ್ಯ ಪ್ರತಿಭಾವಂತೆ ನಿಜ. ಆದರೆ ಅವಳನ್ನು ಎಂ.ಬಿ.ಬಿ.ಎಸ್. ಓದಿಸುವ ಶಕ್ತಿ ನನಗಿದೆಯೇ ? ಎಲ್ಲಿಂದ ತರಲಿ ಲಕ್ಷಗಟ್ಟಲೆ ಹಣ ?

ಗಾಯತ್ರಿ, ತೆರೇಸಮ್ಮ ಮತ್ತು ಮೇರಿಯರ ಮುಂದೆ ತನ್ನೆಲ್ಲ ಕಥೆ ಹೇಳಿಕೊಂಡು ಅತ್ತಳು. ''ಮೆಡಿಕಲ್ ಸೀಟು ಸಿಕ್ಕಿದೆ. ಮುಂದೇನು ಮಾಡಲಿ ?''

''ನಮ್ಮ ಚರ್ಚಿನವರು ಬಡವರ ಮಕ್ಕಳನ್ನು ಓದಿಸ್ತಾರೆ. ಫಾದರ್‌ರವರನ್ನು ಕೇಳಿ ಹೇಳ್ತೀನಿ.''

ತೆರೇಸಮ್ಮನ ಮಾತಿಗೆ ಗಾಯತ್ರಿಗೆ ಕ್ಷೀಣ ಆಸೆ ಚಿಗುರಿತು.

''ಫಾದರ್ ನಿನ್ನನ್ನು ಕರೆತರಲು ಹೇಳಿದ್ದಾರೆ. ಈ ಸಂಜೆ ನನ್ನೊತೆ ಬಾ.'' ತೆರೇಸಮ್ಮ ಹೇಳಿದಾಗ ಅವರ ಜೊತೆ ಚರ್ಚಿಗೆ ಹೋದಳು.

ಫಾದರ್ ರಾಬರ್ಟ್ ಡೊಮಿಂಗೊ ನಕ್ಕು ಆಶೀರ್ವದಿಸಿದರು. ಹತ್ತಿರದ ಕುರ್ಚಿಯಲ್ಲಿ ಕೂಡಲು ಹೇಳಿದರು. ತೆರೇಸಮ್ಮ ಗಾಯತ್ರಿಯನ್ನು ಪರಿಚಯಿಸಿ ಅವಳೆಲ್ಲ ಕಥೆಯನ್ನು ಹೇಳಿ ಈಗಿನ ಪರಿಸ್ಥಿತಿಯನ್ನು ವಿವರಿಸಿ ಹೇಳಿದರು.

''ಕ್ರಿಸ್ತುವರ ಮಕ್ಕಳಿಗಾಗಿ ನಮಗೆ ಫಾರಿನ್‌ನಿಂದ ಹಣ ಬರ್ತಾ ಇದೆ. ನಾವು ಬಡ ಮಕ್ಕಳನ್ನು ಓದಿಸ್ತಾ ಇರೋದು ನಿಜ. ಆದರೆ ಈ ಸಹಾಯ ಇರೋದು ಕ್ರಿಶ್ಚಿಯನ್ನರ ಮಕ್ಕಳಿಗಾಗಿ ಮಾತ್ರ.''

ಗಾಯತ್ರಿಯ ಮುಖ ನಿರಾಶೆಯಿಂದ ಸಪ್ಪಗಾಯಿತು.

''ಹುಡುಗಿ ಪ್ರತಿಭಾವಂತಳು ಫಾದರ್. ಆಕೆಗೆ ಸಹಾಯ ಮಾಡಿ'' ತೆರೇಸಮ್ಮ ಬೇಡಿದರು.

''ಆದೀತು. ಆದ್ರೆ ಒಂದು ಶರತ್ತು. ನೀವು ಕ್ರೈಸ್ತ ಧರ್ಮ ಸ್ವೀಕರಿಸಿದರೆ ನಿಮ್ಮ ಮಗಳನ್ನು ನಾವು ಓದಿಸಲು ಸಾಧ್ಯ. ಯೋಚನೆ ಮಾಡಿ ಯಾವುದಕ್ಕೂ ನಂತರ ತಿಳಿಸಿ.

ಫಾದರ್‌ರಿಂದ ಬೀಳ್ಕೊಂಡು ಬಂದ ಗಾಯತ್ರಿ ಚಿಂತಿಸುತ್ತ ಕುಳಿತಳು.

''ಈಗೇನು ಮಾಡುವುದು? ತಾನು ಎಂದೂ ಜಾತಿಯನ್ನು, ದೇವರನ್ನು ನಂಬಿದವಳಲ್ಲ. ಹುಟ್ಟಿನಿಂದ ಬ್ರಾಹ್ಮಣಳಾದರೂ ಅವರ ಮಡಿವಂತಿಕೆ, ಮೇಲ್ಜಾತಿಯ ಹಮ್ಮುಗಳನ್ನು ತಿರಸ್ಕರಿಸಿದವಳು. ತಿಪ್ಪೇಸ್ವಾಮಿಯನ್ನು ಲಗ್ನವಾದಾಗ ಆತನಿಗೆ ಹೇಳಿದ್ದೆ. 'ನಂಗೆ ಜಾತಿ, ದೇವರಲ್ಲಿ ನಂಬಿಕೆ ಇಲ್ಲ' ಆತ 'ನಿಂಗೆ ಹೆಂಗೆ ಬೇಕೋ ಹಂಗಿರು.' ಅಂದಿದ್ದ. ಗಫೂರಜ್ಜ 'ನಿನಗೊಂದು ಶಾದಿ, ಬದುಕು ಬೇಕಿದ್ದರೆ ನಮ್ಮ ಜಾತಿಗೆ ಬಾ ಅಂದಿದ್ದರೇ ವಿನಃ ಎಂದೂ ಒತ್ತಾಯಿಸಿರಲಿಲ್ಲ. ಗಫೂರಜ್ಜ, ಅಮೀನಮ್ಮ, ಸಕೀನಾಬೀ, ಮುನೀರ್ ಎಲ್ಲರೊಡನೆ ಬೆರೆತರೂ ಯಾವ ಜಾತಿಯವಳಾಗಿಯೂ ಉಳಿದಿರಲಿಲ್ಲ. ಈಗ ನನಗೆ, ನನ್ನ ಮಗಳಿಗೆ ಒಂದು ಜಾತಿ, ಧರ್ಮ ಬೇಕೇ ಬೇಕೆ ? ಕ್ರೈಸ್ತಳಾಗಲೇಬೇಕೆ ? ಕಟ್ಟುಪಾಡುಗಳಿಗೆ ಒಳಗಾಗಲೇಬೇಕೆ ?

ಧನ್ಯ ಮಂಕಾಗಿದ್ದಳು. ಎಂತಹ ಚುರುಕು ಬುದ್ಧಿಯ ಮಗು... ಎಂಥ ಹೆತ್ತವರೂ ಹೆಮ್ಮೆಪಡುವಂತ ಮಗು. ಅವಳಿಲ್ಲದಿದ್ದರೆ ನನ್ನ ಬದುಕಿಗೊಂದು ಅರ್ಥವೇ ಇರುತ್ತಿರಲಿಲ್ಲ.

ಯಾವ ಜಾತಿಯ ಹಂಗೂ ಇಲ್ಲದೆ ಬದುಕಿದ ನಾನೀಗ ಒಂದು ಜಾತಿ, ಧರ್ಮವನ್ನು ಸ್ವೀಕರಿಸಲೇಬೇಕಿದೆ. ನನ್ನ ಮಗಳಿಗೆ ಅವಳಿಷ್ಟದ ವಿದ್ಯೆ ಸಿಕ್ಕಿ ಮರ್ಯಾದೆಯಾಗಿ ಬದುಕಲು ದಾರಿ ಮಾಡಿಕೊಡಲು ಸಾಧ್ಯವಾಗುವುದಾದರೆ ಆ ತ್ಯಾಗಕ್ಕೆ ನಾನು ಸಿದ್ಧಳಾಗಲೇಬೇಕು.

ನಾಳೆ ಧನ್ಯಳನ್ನು ಕರದೊಯ್ದು ಫಾದರ್‌ರವರಲ್ಲಿಗೆ ಹೋಗಬೇಕು. ಜಾತಿ, ಧರ್ಮ ಯಾವುದಾದರೇನು ಮಗಳ ಭವಿಷ್ಯ, ಅವಳ ಬದುಕು ಮುಖ್ಯ. ಗಾಯತ್ರಿ ಮಗಳನ್ನು ತಬ್ಬಿ ಮಲಗಿದಳು. ಬಹಳ ದಿನಗಳ ನಂತರ ಗಾಢ ನಿದ್ದೆ ಆವರಿಸಿತು.

**ಜಿ. ಎಸ್. ಸುಶೀಲಾದೇವಿ ಆರ್. ರಾವ್**
೬೮೬/೭ಬಿ, ೧ನೇ ಮುಖ್ಯರಸ್ತೆ, ೪ನೇ ತಿರುವು
ಭಗತ್‌ಸಿಂಗ್ ನಗರ, ದಾವಣಗೆರೆ - ೫೭೭ ೦೦೨

# ಒಂದು, ಎರಡು, ಬಾಳೆಲೆ ಹರಡು

ಹೀಗೇ ಒಂದು ಸಂಜೆ ವಾಕಿಂಗ್ ಹೋಗುತ್ತಿದ್ದಾಗ ಬೀದಿ ಕೊನೆಯ ಆ ಪುಟ್ಟ ಮನೆಗೆ ಹೊಸದಾಗಿ ವಕ್ಕಲು ಬಂದಿದ್ದ ಕುಟುಂಬದ ಪುಟ್ಟ ಪೋರಿಯೊಂದು ರಾಗರಾಗವಾಗಿ, ತೊದಲು ತೊದಲಾಗಿ, ಮುದ್ದು ಮುದ್ದಾಗಿ, ಮನೆಯೊಳಗೆ ಹಾಡಿಕೊಳ್ಳುತ್ತಿದ್ದುದು ಕಿವಿಯ ಮೇಲೆ ಬಿತ್ತು:

''ಒಂದು ಎರಡು
ಬಾಳೆಲೆ ಹರಡು
ಮೂರು, ನಾಲ್ಕು
ಅನ್ನ ಹಾಕು...''

ಇದ್ಯಾವುದೋ ಕನ್ನಡದ ಕಂದ. ಹಳ್ಳಿ ಮೂಲೆಗಳಲ್ಲೂ ಇಂಗ್ಲಿಷ್ ಮಾಧ್ಯಮದ ಪ್ರಭಾವ ದಟ್ಟೈಸಿರುವಾಗ ಕನ್ನಡದ ಶಿಶುಕಾವ್ಯ ಕಿವಿಯ ಮೇಲೆ ಬೀಳುವುದೆಂಬುದು ಬಲು ಅಪರೂಪ. ಹೆಜ್ಜೆಗತಿಯನ್ನು ನಿಧಾನ ಮಾಡಿದೆ.

''ಐದು ಆರು
ಅನ್ನ, ಸಾರು
ಏಳು ಎಂಟು
ಪಲ್ಯಕೆ ದಂಟು...''

ಶ್ಯಾವಿಗೆ ಎಳೆಯಂತೆ ಬಳುಕುವ ಕಂಠದಿಂದ ಪದ್ಯ ತುಂಡುಗಡಿಯದೆ ಹರಿದು ಬರುತ್ತಿತ್ತು. ಆ ಮನೆಯನ್ನು ದಾಟಿ ಮುಂದೆ ಹೋದರೂ, 'ಒಂದು ಎರಡು ಬಾಳೆಲೆ ಹರಡು..' ಮನದೊಳಗೆ ಮತ್ತೆ ಮತ್ತೆ ಗಿರಕಿ ಹೊಡೆಯುತ್ತಾ ಮನೋನೇತ್ರದೆದುರು ವಿಶಾಲವಾಗಿ ಹರಡಿದ ಕುಡಿ ಬಾಳೆ ಎಲೆಯೊಂದು ಕಂಗೊಳಿಸತೊಡಗಿತು. ಎಲೆ ತುಂಬಾ ಕ್ರಮಪ್ರಕಾರ ಸಾಲು ಹಿಡಿದು ಬಡಿಸಿದ ವ್ಯಂಜನಗಳು. ಈಗ ಬಾಳೆಲೆಯ ಊಟ ಏನಿದ್ದರೂ ಮದುವೆ, ಔತಣ ಮುಂತಾದ ಜನ ಸೇರುವ ಸಮಾರಂಭಗಳಲ್ಲಿ ಹಾಗೂ ಸಂಪ್ರದಾಯಸ್ಥರ ಮನೆಯ ಹಬ್ಬ ಹರಿದಿನ ಇತ್ಯಾದಿ ವಿಶೇಷ ದಿನಗಳಲ್ಲಿ, ಹಳ್ಳಿ ಮನೆಗಳಲ್ಲೂ ಸ್ಟೀಲ್ ತಟ್ಟೆ ದಾಳಿ ಮಾಡಿದೆ. ಬಾಳೆ ಎಲೆಗಳಲ್ಲಿನ ಊಟ ಅಪರೂಪವಾಗಿದೆ. ಹೀಗೆ ಆರಂಭವಾದ ಯೋಚನಾಧಾಟಿ ದಶಕಗಳ ಹಿಂದೋಡಿ ಮಲೆನಾಡಿನ ಹಳ್ಳಿಮನೆಯಲ್ಲಿ ಕಳೆದ ಬಾಲ್ಯಕಾಲಕ್ಕೆ ನನ್ನನ್ನು ಕೊಂಡೊಯ್ದು ನಿಲ್ಲಿಸಿತು. ತುಟಿಗಳೆಡೆಯಲ್ಲಿ ಸಣ್ಣಗೆ ಅರಳಿತು ಕಿರುನಗೆ. ಈಗಿನ ಥರ ಪ್ರತಿಯೊಂದಕ್ಕೂ ಕಲ್ಯಾಣ ಮಂದಿರ, ಪಾರ್ಟಿ ಹಾಲ್ ಎನ್ನುವ ಅನುಕೂಲ ಇರಲಿ, ಕಲ್ಪನೆಯೂ ಇರದೆ ಸಣ್ಣ ಪುಟ್ಟ ಸಮಾರಂಭಗಳಿಂದ ತೊಡಗಿ ದೊಡ್ಡವುಗಳವರೆಗೆ ಮನೆ ಬಾಗಿಲಲ್ಲೇ ಏರ್ಪಾಟು. ಮನೆ ಎದುರಿನ ಅಂಗಳದಲ್ಲಿ ಅಡಿಕೆ ಒಣಗಿಸಲು ಹಾಕಿದ ದೊಡ್ಡ ಚಪ್ಪರದ ಸುತ್ತಾ ಬಿದಿರಿನ ತಟ್ಟಿ ಕಟ್ಟಿ ಮರೆಮಾಡಿ, ಅಂಗಳಕ್ಕೆ ಸಗಣಿ ನೀರು ಸಾರಿಸಿ ಹಚ್ಚಗೆ ಕಂಗೊಳಿಸುತ್ತಿದ್ದ ನೆಲ. ಊಟಕ್ಕೆ ಆಗಮಿಸಿದ ಜರತಾರಿ ಸೀರೆಯ ನೀರೆಯರು ಎಲೆಯೆದುರು ಕೂರಲು ಹಿಂದೆ ಮುಂದೆ ನೋಡುವಾಗ ಎಲ್ಲರಿಗೂ ಮಣೆ ಒದಗಿಸಲು ಸಾಧ್ಯವಾಗದ ಪರಿಸ್ಥಿತಿಯಲ್ಲಿ ಅಂಡೂರಿ ನಿಶ್ಚಿಂತೆಯಿಂದ ಕೂರುವುದಕ್ಕೆ ಬಾಳೆಎಲೆಯ ಹಾಸು. ಶುಭ ಕಾರ್ಯಗಳಲ್ಲಿ ಕುಡಿ ಬಾಳೆ ಎಲೆಗಳನ್ನೇ ಊಟಕ್ಕೆ ಬಳಸಬೇಕೆನ್ನುವ ರಿವಾಜು. ಮದುವೆಗೋ, ಮತ್ತೊಂದಕ್ಕೋ, ಮುಹೂರ್ತ ಇಡುತ್ತಿದ್ದಂತೆ ಸಹಾಯದ ಕುರಿತು ವಿಚಾರಿಸುವ ಪರಿಚಿತರಲ್ಲಿ ಮೊದಲು ಕೇಳುವ ಮಾತು,

''ಒಂದಿಷ್ಟು ಬಾಳೆಲೆ ಇದ್ರೆ ಒಟ್ಟು ಮಾಡ್ಕೊಡಿ ಮಾರೆರಾ, ದೊಡ್ಡ ಉಪಕಾರ ಆಗುತ್ತೆ, ಈ ಸಲ ಆಲಿಕಲ್ಲು ಬಿದ್ದು ಬಾಳೆಲೆ ಎಲ್ಲಾ ಛಪ್ಪಂಚೂರು...''

''ನಮ್ಮಲ್ಲೂ ಅದೇ ಫಜೀತಿ. ನೋಡಣ, ಇನ್ನೂರೋ, ಮುನ್ನೂರೋ...''

''ಎಷ್ಟಾಗುತ್ತೋ ಅಷ್ಟು...''

ಮನೆಗೆ ಬಂದು ಬಿದ್ದ ಬಾಳೆಎಲೆಗಳನ್ನು ಹೆಚ್ಚುಕಟ್ಟೆಯ ಊಟಕ್ಕೆ ಹಾಗೇ ಉಪಯೋಗಿಸುವಂತಿಲ್ಲ. ಉದ್ದದ, ಗಿಡ್ಡದ, ನಾನಾ ಆಕಾರದ ಕುಡಿ ಬಾಳೆಗಳಲ್ಲಿ, ಕುಡಿ ಅಂದರೆ ಬಾಳೆಲೆಯ ಮೊದಲ ಭಾಗ, ಅದನ್ನು ಹಾಗೇ ಉಳಿಸಿ, ಮತ್ತೊಂದು ಬದಿಯನ್ನು ಊಟಕ್ಕೆ ಸರಿ ಹೊಂದುವ ಒಂದು ಅಂದಾಜಿಗೆ ಕತ್ತರಿಸಿ, ನಂತರ ಇವುಗಳನ್ನೆಲ್ಲಾ ಒಲೆ ಬೆಂಕಿಗೆ ಹಿಡಿದು ಕಾಸುವವರೆಗೆ ಆಚೀಚಿನವರ ಸಹಾಯ ಹಸ್ತ. ಕ್ರಿಮಿಕೀಟಗಳನ್ನು ಎಲೆಯಿಂದ ಮುಕ್ತಗೊಳಿಸುವ ಉಪಾಯ. ಕಾಸಿದ ಎಲೆಗಳನ್ನು ಹಿಂಡಿದ ಒದ್ದೆಬಟ್ಟೆಯಿಂದ ವರೆಸಿ ಒಂದನ್ನು ಅಂಗಾತ, ಅದರ ಮೇಲಿನದನ್ನು ಕವುಚಿ, ಹೀಗೆ ಬಾಳೆಲೆಯ ಹಿಂಭಾಗದಲ್ಲಿರುವ ಧೂಳು, ಕಸ, ಒಂದರಿಂದ ಮತ್ತೊಂದರ ಉಣ್ಣುವ ಭಾಗಕ್ಕೆ ಅಂಟಿಕೊಳ್ಳದಂತೆ ಪೇರಿಸಿ ಸ್ಟೋರ್ ಕೋಣೆಯ ಮೂಲೆಯಲ್ಲಿ ಇಟ್ಟುಬಿಟ್ಟರೆ ಒಂದು ತಲೆಬಿಸಿ ಕಳೆದ ಹಾಗೆ. ತಿಂಡಿಗೆ ಉಪಯೋಗಿಸುವ ಬಾಳೆಲೆ ಸಿಗುಳಿಗೆ ಇಷ್ಟೆಲ್ಲಾ ಷೋಡಶೋಪಚಾರ ಇಲ್ಲ. ದೊಡ್ಡ ಬಾಳೆಲೆಗಳ ಮಧ್ಯದ ದಂಟು ತೆಗೆದು ನಾಲ್ಕೈದು ತುಂಡುಗಳಾಗಿ ಕತ್ತರಿಸಿ ಒರೆಸಿಟ್ಟರೆ ಮುಗಿಯಿತು. ಜಡಿಮಳೆ ಸುರಿಯುವ ಮಳೆಗಾಲದಲ್ಲಿ ಅಡಿಕೆಗೆ ಕೊಳೆರೋಗ ಬಂದರೆ ತಾಯಿ ಮಗ್ಗುಲಲ್ಲಿ ನಿಂತಿರುವ ಪುಟ್ಟ ಮಕ್ಕಳಂತಿರುವ ಅಡಿಕೆ ಮರಗಳ ನಡುವಿನ ಬಾಳೆಗಿಡಗಳ ಮೇಲೆ ಕೊಳೆರೋಗ ಹಿಮ್ಮೆಟ್ಟಲು ಅಡಿಕೆ ಕೊನೆಗಳಿಗೆ ಹೊಡೆದ ಮೈಲುತುತ್ತ ದ್ರಾವಣದ ತುಂತುರುಗಳ ಸಿಂಚನ. ಊಟಕ್ಕೆಂದು ಕುಯ್ದು ತಂದ ಬಾಳೆಲೆಗಳನ್ನು ತಿಕ್ಕಿ ತಿಕ್ಕಿ ವಿಷ ಹೋಗುವಂತೆ ಒರೆಸುವ ಪಡಿಪಾಟಲು. ನೋಡಿದರೆ ಹೇಸಿಗೆ ಬರಿಸುವ, ತಾವು

■ ವಸುಮತಿ ಉಡುಪ



ನಡೆದ ದಾರಿಯುದ್ದಕ್ಕೂ ಗೆರೆ ಬಿಟ್ಟುಕೊಂಡು ಹೋಗುವ, ಸಿಂಬಳದಲ್ಲಿ ಮುಳುಗಿ ಎದ್ದು ಬಂದಂತಹ ಸಿಂಬಳದ ಹುಳುಗಳು ಮಳೆಗಾಲದಲ್ಲಿ ಒಮ್ಮೊಮ್ಮೆ ಮನೆಗೆ ತಂದ ಬಾಳೆ ಎಲೆಯಲ್ಲಿ ಕಂಡುಬಂದು, 'ಉವ್ವೇ...' ಅನ್ನಿಸುತ್ತಿದ್ದುದಿತ್ತು. ಶುಭ ಸಮಾರಂಭಗಳ ಊಟಣ ಎಂದರೆ ಎಲ್ಲರ ಬಾಳೆಲೆಗಳ ಎದುರು ಎರಡೆಳೆಯ ರಂಗೋಲಿಯ ಶೃಂಗಾರ. ರಂಗೋಲಿಯ ಬಟ್ಟಲು ಕೈಲಿ ಹಿಡಿದು ಅಳುಕುತ್ತಾ, ನಾಚುತ್ತಾ, ಬರುವ ಹದಿವಯದ ಬಾಲೆಯರು ತಮ್ಮ ಚಿಗುರು ಬೆರಳುಗಳ ನಡುವೆ ರಂಗೋಲಿ ಪುಡಿ ಹಿಡಿದು ಒಮ್ಮೆಲೆ ಎರಡೆಳೆ ಬರುವಂತೆ ಸರೂತ ಗೆರೆ ಎಳೆಯುತ್ತಿದ್ದ ಚಾತುರ್ಯ. ಎಲೆಗಳ ಮೇಲೆ ಬಡಿಸುತ್ತಿದ್ದ ಪದಾರ್ಥಗಳಿಗೂ ಇದಾದ ಮೇಲೆ ಇದು ಎನ್ನುವ ಸ್ಥಾನಗೌರವ. ಅಭಿಗಾರ ಎಂದು ಕರೆಸಿಕೊಳ್ಳುವ ತುಪ್ಪ ಉಣ್ಣಲು ಕೂತವರ ಬಲಗೈ ತುದಿಗೆ ಬರುವಂತೆ ಬಡಿಸಿದ ನಂತರ ಪಾಯಸದಿಂದ ಆರಂಭಗೊಂಡು ಒಂದೊಂದಾಗಿ, ಒಂದೊಂದಾಗಿ ಉಳಿದವುಗಳ ರಂಗಪ್ರವೇಶ, ಪ್ರತಿಯೊಂದಕ್ಕೂ ಅದರದೇ ನಿರ್ದಿಷ್ಟ ಜಾಗ. ಬಡಿಸಲು ಆರಂಭಿಸುತ್ತಿದ್ದ ಪಂಕ್ತಿಗಳಲ್ಲೂ ಒಂದು ನಿಯಮ. ಇದು ಬ್ರಾಹ್ಮಣ ಕುಟುಂಬಗಳ ಸಮಾರಂಭದ ಸಮಾರಾಧನೆಯ ಒಂದು ನೋಟ. ಉಂಡು ಮುಗಿಸಿ ಗೊಬ್ಬರ ಗುಂಡಿಗೆ ಬಿಸಾಕಿದ ಬಾಳೆಲೆಗಳಲ್ಲಿ ಮಿಕ್ಕಿದ ಆಹಾರಕ್ಕಾಗಿ ಶುನಕ ಸಮೂಹಗಳ ಘನ ಘೋರ ಕಾದಾಟ. ಸೋಲೊಪ್ಪಿಕೊಂಡು ಬಾಲ ಮುದುರಿಕೊಳ್ಳುವ ದುರ್ಬಲರ 'ಕುಂಯ್ಯೋ ಮರ್ರೋ...' ರಾಗ. ಒಂದು ಹೇಳಿಕೆ ಮಾತು ನೆನಪಾಗುತ್ತಿದೆ. ಮನೆಗೆ ಬೆಕ್ಕು ಬಂದು ಸೇರಿಕೊಂಡರೆ ಶುಭಶಕುನವಂತೆ. ನಾಯಿ ಬಂದು ಸೇರಿಕೊಂಡರೆ ಅಪಶಕುನ. ತದ್ವಿರುದ್ಧವಾಗಿ ಮತ್ತೊಂದು ಹೇಳಿಕೆ. ನಾಯಿ 'ಮನೆಯಲ್ಲಿ ಮಕ್ಕಳು ಹೆಚ್ಚಾಗಲಿ, ನೆಕ್ಕಲು ಇನ್ನಷ್ಟು ಬಾಳೆಎಲೆ ಸಿಗುತ್ತದೆ' ಅನ್ನುತ್ತದಂತೆ. ಬೆಕ್ಕು 'ಮನೆಯಲ್ಲಿ ಮಕ್ಕಳು ಸಾಯಲಿ, ಕುಡಿಯಲು ಮತ್ತಷ್ಟು ಹಾಲು ಸಿಗುತ್ತದೆ' ಅಂದುಕೊಳ್ಳುತ್ತದೆ. ಬಾಳೆಲೆಯ ವಿಷಯಕ್ಕೆ ಬರೋಣ. ಮಲೆನಾಡಿನ ಆಡುಭಾಷೆಯಲ್ಲಿ ಬಾಳೆಲೆಗೆ 'ಬಳ್ಳೆ' ಎನ್ನುವ ನಾಮಕರಣ.

'ಘಂಟೆ ಎರಡಾಗ್ತಾ ಬಂತು, ಇನ್ನೂ ಬಳ್ಳೆ ಹಾಕಿಲ್ವಾ ?' ಎಂದು ಯಜಮಾನ ದರ್ಪ ತೋರಿಸುತ್ತಾನೆ.

'ಬಳ್ಳೆ ಹಾಕಾಯ್ತು, ನಿಮ್ಗೆಲ್ಲಾ ಅಕ್ಷತೆ ಕೊಟ್ಟು ಕರೀಬೇಕಾ ?' ಯಜಮಾಂತಿ ಅಸಹನೆ ತೋರಿಸುವ ಪರಿ. ಕೆಲವು ಸಲ ಬಾಳೆ ಎಲೆ ಮನೆಗೆ ತಂದಿದ್ದು ಮುಗಿದುಹೋಗಿರುತ್ತದೆ.

ಮೂರು ಸಂಜೆ ಹೊತ್ತಿಗೆ ಯಜಮಾನತಿಗೆ ಜ್ಞಾನೋದಯ.

'ರಾತ್ರಿ ಊಟಕ್ಕೆ ನಾಕು ಬಳ್ಳೇ ಕುಯ್ಕಿಂಬರ್ಬೇಕಿತ್ತು' ರಾಗ ಎಳೆಯುತ್ತಾಳೆ. ಯಜಮಾನನಿಗೆ ಗುರ್ರ್ ಎನ್ನಲು ಒಂದು ಅವಕಾಶ.

'ಆಗ಼್ೇ ಹೇಳಿದ್ರಾಗ್ತಿರ್ಲಿಲ್ಲಾ? ಬಾಯಲ್ಲಿ ಕಡುಬು ತುಂಬ್ಕಂಡಿತ್ತಾ?' ಅನ್ನದೇ ಬಿಡುವುದಿಲ್ಲ. ಅಂದರೂ, ಆಡಿದರೂ, ರಾತ್ರಿ ಊಟಕ್ಕೆ ಎಲೆ ಬೇಕೇ ಬೇಕಲ್ಲ? ಕತ್ತಿ ಹಿಡಿದು ತೋಟಕ್ಕೆ ಇಳಿಯುತ್ತಾನೆ. ಮುಸುಕುತ್ತಿರುವ ಕತ್ತಲಲ್ಲಿ ಕಾಲಡಿ ನೋಡಿಕೊಂಡು ಎಚ್ಚರಿಕೆಯಿಂದ ಹೆಜ್ಜೆ ಹಾಕಬೇಕು. ಸರಕ್ಕನೆ ಹಾವೊಂದು ಇತ್ತಿಂದತ್ತ ಸರಿದು ಹೋಗ ಬಹುದು. ನಾನು ಚಿಕ್ಕವಳಿದ್ದಾಗ ನಮ್ಮ ತೋಟದಲ್ಲಿ ಒಂದು ಜುಟ್ಟುಕಾಳಿಂಗ ಸೇರಿ ಕೊಂಡಿದೆ ಎನ್ನುವುದು ದೊಡ್ಡ ಸುದ್ದಿಯಾಗಿತ್ತು. 'ಹಳ್ಳದ ಬದಿಯ ವಾಟೆಯ ಸರಕಲಿನಲ್ಲಿ ನೋಡಿದೆ,' 'ತೋಟದ ಕಪ್ಪಿನಲ್ಲಿ ನೋಡಿದೆ', 'ಈಷ್ಟುದ್ದ, ಈಷ್ಟು ದಪ್ಪ' ಎನ್ನುವ ವರ್ಣನಾವೈಖರಿಗೆ ಮೈಯಲ್ಲಿ ನಡುಕ. ಪೋಕರಿ ತಮ್ಮನೊಬ್ಬ ಎಲ್ಲಾದರೂ ಸಿಳ್ಳೆ ಹೊಡೆದ ಅಂದರೆ ಜೀವ ಬಾಯಿಗೆ ಬರುತ್ತಿತ್ತು. ಸಿಳ್ಳೆಯ ಸದ್ದಿಗೆ ಕಾಳಿಂಗನ ಹಾವು ಸದ್ದಿನ ಜಾಡು ಹಿಡಿದು ಬರುತ್ತದೆಯಂತೆ ಎನ್ನುವ ಹೇಳಿಕೆ ಮಾತಿನ ಕುರಿತಾದ ನಂಬಿಕೆ. ಅಪ್ಪನ ಧೈರ್ಯಕ್ಕೆ ಮೆಚ್ಚುಗೆ. 'ಹಾಂವೇನು ಕೂತಲ್ಲೇ ಕೂತಿರುತ್ತಾ? ಇವತ್ತು ಬರುತ್ತೆ, ನಾಳೆ ಹೋಗುತ್ತೆ' ಅನ್ನುವ ಅಪ್ಪನ ಮಾತು ಇನ್ನೂ ಕಿವಿಯಲ್ಲುಂಟು. ಗಣಪತಿ ಹಬ್ಬ ಬಂತು ಅಂದರೆ ಹಿಂದಿನ ದಿನ ಸೇರುಗಟ್ಟಲೆ ಉದ್ದಿನಬೇಳೆ ನೆನೆಸಿ ಕಡುಬಿಗೆ ಅರೆದಿಡುವ ಗೌಜು. 'ಅರೆದು ಅರೆದು ರಟ್ಟೆ ಬಿದ್ದು ಹೋಯ್ತು' ಅನ್ನುತ್ತಲೇ ನೀರು ಬೆರೆಸಿಕೊಂಡು ಒದಗಿಸಿ ಒದಗಿಸಿ ದೊಡ್ಡ ಅರೆಯುವ ಕಲ್ಲಿನಲ್ಲಿ ಉದ್ದು ಅರೆಯುತ್ತಿದ್ದ ಅಮ್ಮ ಅರ್ಧಾಳು ಎತ್ತರದ ಕಲಾಯಿ ಹಾಕಿದ ಹಿತ್ತಾಳೆ ಕೌಳಿಗೆಯಲ್ಲಿ ಹಿಟ್ಟು ಮಾಡಿಡುತ್ತಿದ್ದಳು. ಅಪ್ಪನಿಗೆ ಹಬ್ಬದ ಹಿಂದಿನ ರಾತ್ರಿ ಕಡುಬಿನ ಕೊಟ್ಟೆ ಮಾಡಿಡುವ ಕೆಲಸ. ಕುಡಿಯ ಭಾಗ ಕತ್ತರಿಸಿ ದಂಟು ತೆಗೆದ ಸೀಳು ಬಾಳೆಲೆಗಳನ್ನು ಒಲೆ ಬೆಂಕಿಯಲ್ಲಿ ಬಾಡಿಸಿ, ಒರೆಸಿ, ಅಚ್ಚುಕಟ್ಟಾಗಿ ಕೊಟ್ಟೆಯ ಹಾಗೆ ಸುರುಳಿ ಸುತ್ತಿ, ಹಿಟ್ಟು ಸುರಿದು ಹೋಗದಂತೆ ತಳಭಾಗಕ್ಕೆ ಬಾಳೆನಾರಿನ ಗಂಟು ಬಿಗಿದು, ಮೇಲ್ಭಾಗದ ಸುತ್ತಿಗೆ ಮುರಿದು ಹಿಡಿಕಡ್ಡಿಯ ಗುಂಡು ಸೂಜಿಯಂತಾ ಚೂರನ್ನು ಕೊಟ್ಟೆ ಬಿಚ್ಚಿಹೋಗದಂತೆ ಚುಚ್ಚಿದರೆ ಕಡುಬು ಬೇಯಿಸಲು ಕೊಟ್ಟೆ ಸಿದ್ಧ. ಪಾಂಡವರು ಅಜ್ಞಾತವಾಸದ ಕಾಲದಲ್ಲಿ ತಮ್ಮ ಆಯುಧಗಳನ್ನು ಗಂಟು ಕಟ್ಟಿ ಶಮೀವೃಕ್ಷಕ್ಕೆ ತೂಗುಹಾಕಿದಂತೆ ಅಪ್ಪ ಕಡುಬಿನ ಕೊಟ್ಟೆಗಳನ್ನು ಒಂದು ಪಂಚೆಯಲ್ಲಿ ಸುತ್ತಿ ಊಟದ ಮನೆಯ ಗೋಡೆಯ ಗೂಟಕ್ಕೆ ನೇತಾಡಿಸುತ್ತಿದ್ದ. ಕೊಟ್ಟೆಯೊಳಗೆ ಹುಳುಹುಪ್ಪಡಿ ಸೇರಿಕೊಳ್ಳದಂತೆ ಮುನ್ನೆಚ್ಚರಿಕಾ ಕ್ರಮ. ಮರುದಿನ ಹುದುಗು ಬಂದು ಘಮಘಮಿಸುತ್ತಿದ್ದ ಕಡುಬಿನ ಹಿಟ್ಟನ್ನು ಕೊಟ್ಟೆಯೊಳಗೆ ತುಂಬಿ, ದೊಡ್ಡ ತಪ್ಪಲೆಯಲ್ಲಿ ಜೋಡಿಸಿ, ಹಬೆ ಹೊರ ಹೋಗದಂತೆ ಡಬರಿ ಮುಚ್ಚಿ ಬೇಯಿಸಿದರೆ ಬಾಳೆಲೆಯ ಪರಿಮಳದ ಬಾಯಲ್ಲಿ ನೀರೂರಿಸುವ, ಉದ್ದುದ್ದದ ಕೊಟ್ಟೆ ಕಡುಬು ಗಣಪನ ನೈವೇದ್ಯಕ್ಕೆ ತಯಾರು. ಮಧ್ಯಾಹ್ನದ ಹಬ್ಬದೂಟದಲ್ಲಿ ಜೀರಿಗೆ ಮೆಣಸಿನಕಾಯಿ ಸೇರಿಸಿ ಅರೆದ ಖಾರಖಾರದ ಕಾಯಿಚಟ್ನಿ, ಕೊಬ್ಬರಿ ಎಣ್ಣೆ, ಕೊಟ್ಟೆ ಕಡುಬಿನ ಜೊತೆ. ಮಿಡಿ ಉಪ್ಪಿನ ಕಾಯಿರಸ, ಕೊಬ್ಬರಿ ಎಣ್ಣೆಯಲ್ಲಿ ಕಡುಬಿನ ಚೂರನ್ನು ಹೊರಳಿಸಿ ತಿನ್ನುವುದು ಕೆಲವರ ಚಪಲ. ದೇವರಿಗೆ ಒಡೆದ ತೆಂಗಿನಕಾಯಿಗಳನ್ನು ತುರಿದು, ಅರೆದು, ಬೆಲ್ಲ, ಏಲಕ್ಕಿ ಪುಡಿ ಸೇರಿಸಿದ ಕಾಯಿ ಹಾಲು ರಾತ್ರಿಯ ಊಟಕ್ಕೆ ಕೊಟ್ಟೆ ಕಡುಬಿನ ಸಂಗಾತಿಯಾಗಿ ರುಚಿ ಹೆಚ್ಚಿಸುತ್ತಿತ್ತು. ಹಬ್ಬದೂಟ ಮುಗಿಸಿ ಬಸ್ಸಿಗೆ ಹೊರಡುವಾಗ ನಾಲ್ಕಾರು ಕೊಟ್ಟೆ ಕಡುಬು, ಬಾಳೆಲೆಯಲ್ಲಿ ಕಟ್ಟಿಕೊಂಡ ಗಟ್ಟಿ ಚಟ್ನಿಗಳನ್ನು ಬ್ಯಾಗಿಗೆ ಸೇರಿಸಿಕೊಂಡು ತೌರೂರು ಬಿಡುವ ಸಿದ್ಧತೆ 'ಇನ್ನೆರಡು ಕೊಟ್ಟೆ ಹಾಕ್ಕೊಳ್ರೇ, ಉಳಿದರೆ ನಾಳೆಗಾಗುತ್ತೆ...' ಅಮ್ಮನ ಕಕ್ಕುಲತೆ. ಹೌದು, ತಂಗಳು ಕೊಟ್ಟೆ ಕಡುಬಿಗೆ ಮತ್ತೊಂದೇ ರುಚಿ, ಪರಿಮಳ.

ಬಾಳೆಲೆ ಕೊಟ್ಟೆಯಲ್ಲಿ ಬೇಯಿಸಿದ ಹಲಸಿನಹಣ್ಣಿನ ಕಡುಬು ಅವತ್ತಿಗಿಂತಾ ಮರುದಿನವೇ ರುಚಿ ಎನ್ನುವ ಕುರಿತು ಭಿನ್ನಾಭಿಪ್ರಾಯವೇ ಇರಲಿಲ್ಲ. ಹಬ್ಬದ ದಿನ ಮನೆಯ ಕೆಲಸದಾಳುಗಳಿಗೆ, ವೇಷ ಕಟ್ಟಿಕೊಂಡು ತಿರಿಯಲು ಬರುತ್ತಿದ್ದವರಿಗೆ, ಒಂದೊಂದು ಕಡುಬಿನ ಕೊಟ್ಟೆಯ ಜೊತೆ ಒಂದು ತೆಂಗಿನಕಾಯಿ ಇಟ್ಟುಕೊಡುತ್ತಿದ್ದ ಸಂಪ್ರದಾಯ. ಕಡುಬು ಬೇಯಿಸಿದ ಎಲೆಗಳನ್ನು ಗೊಬ್ಬರದ ಗುಂಡಿಗೆ ಬಿಸಾಕದೆ ಮನೆಯ ಜಾನುವಾರುಗಳಿಗೆ ತಿನ್ನಲು ಹಾಕುವಾಗ,

'ಕಡ್ಡಿ ತೆಗೆದಿದೀರಾ ನೋಡ್ಕಳಿ, ಮತ್ತೆ ಹುಷಾರು...' ಎನ್ನುವ ಎಚ್ಚರಿಕೆ.

ಬಾಳೆಲೆಯ ಸಿಗುಳಿನ ಮೇಲೆ ಉಪ್ಪು, ಖಾರ, ಹುಳಿ ಮಜ್ಜಿಗೆಯಲ್ಲಿ ಕಲೆಸಿದ ಅಕ್ಕಿಹಿಟ್ಟು ತಟ್ಟಿ, ಮೇಲೆ ಮತ್ತೊಂದು ಸಿಗುಳು ಮುಚ್ಚಿ, ಒಲೆಯ ಕೆಂಡದ ಮೇಲಿಟ್ಟು, ಮೇಲೆ ಮತ್ತೆ ಕೆಂಡ ಮುಚ್ಚಿ ಬೇಯಿಸುತ್ತಿದ್ದ ತನ್ನ ಬಾಲ್ಯಕಾಲದ ರೊಟ್ಟಿಯ ಅದ್ಭುತ ರುಚಿಯ ಕುರಿತು ಅಪ್ಪ ಹೇಳುತ್ತಿದ್ದರೆ ಅಮ್ಮ ಮೂಗು ಮುರಿಯುತ್ತಿದ್ದಳು.

'ಆ ವಯಸ್ಸು ಅದು, ಏನು ತಿಂದ್ರೂ ರುಚಿ ಅನ್ನಿಸ್ತಿತ್ತು' ಅನ್ನುವ ಅವಳ ಮಾತು ನಿಜವೂ ಇರಬಹುದು.

ರೊಟ್ಟಿ ತಟ್ಟುವುದಕ್ಕೆ, ಹೋಳಿಗೆ ಲಟ್ಟಿಸುವುದಕ್ಕೆ, ಬಾಳೆಲೆಯೇ ಬೇಕು ಅನ್ನುವವರು ಈ ಪ್ಲಾಸ್ಟಿಕ್ ಜಮಾನಾದಲ್ಲೂ ಬಹಳಷ್ಟಿದ್ದಾರೆ. ಬಾಳೆಲೆ ಸಿಕ್ಕಿದ ಕಾರಣಕ್ಕೆ ರೊಟ್ಟಿ ಮಾಡುವವರನ್ನೂ ನಾನು ಕಂಡಿದ್ದೇನೆ. ಯಾವುದೇ ತಿನಿಸು ರುಚಿ ಅನ್ನಿಸುವುದಕ್ಕೆ ಬಾಲ್ಯದಿಂದ ಅಭ್ಯಾಸವಾಗಿದ್ದುದು ಕೂಡ ಒಂದು ಪ್ರಮುಖ ಕಾರಣ ಎಂದು ನನ್ನ ನಂಬಿಕೆ.

ಚುರುಗುಟ್ಟುವಂತೆ ಬಿಸಿಲು ಸುಡತೊಡಗಿ, ಬೇಸಿಗೆಯ ಸೂರ್ಯನ ಪ್ರತಾಪ ಹೆಚ್ಚುತ್ತಿದ್ದಂತೆ ಹಳ್ಳಿಮನೆಗಳಲ್ಲಿ ಹಪ್ಪಳ, ಸಂಡಿಗೆಗಳ ಕಾರ್ಖಾನೆ ಶುರುವಾಗುತ್ತಿತ್ತು. ನಮಗೆ ಬೇಸಿಗೆ ರಜ. ಮನೆ ಎದುರು ಅಡಿಕೆ ಒಣಗಿಸಲು ಹಾಕಿದ ವಿಶಾಲ ಚಪ್ಪರ ಖಾಲಿ ಖಾಲಿ. ಅಮ್ಮನಿಗೆ ಕೈ ತುರಿಕೆ. ನಮಗೆ ಬಾಯಿಚಪಲ. ಸಂಡಿಗೆ ಮಾಡಲು ತೋಟದಿಂದ ಉದ್ದುದ್ದನೆಯ ಇಡೀ ಬಾಳೆಹೆಡಲುಗಳು ಮನೆಗೆ ಬರುತ್ತಿದ್ದವು. ಅಂಗಳದವರೆಗೆ ಅವುಗಳ ಪ್ರವೇಶ. ಒಳಬರುವಂತಿಲ್ಲ. ಸಾವಿನ ಸಂದರ್ಭಗಳಲ್ಲಿ ಚಟ್ಟದ ಮೇಲೆ ಹೆಣ ಮಲಗಿಸಲು, ಮುಚ್ಚಲು ಉಪಯೋಗಿಸುವ ಇಡೀ ಬಾಳೆ ಎಲೆಗಳನ್ನು ಮನೆಯೊಳಗೆ ತರುವುದು ವಾಮೆ, ನಿಷಿದ್ಧ. ಅವು ಹಾಗೆಯೇ ಚಪ್ಪರಕ್ಕೇರಿ, ಅಡಿಮೇಲಾಗಿ ಮಲಗಿ ಎಣ್ಣೆ, ನೀರು ಸವರಿಕೊಂಡು, ಸಂಡಿಗೆ ಇಡಲು ಸಿದ್ಧವಾಗುತ್ತಿದ್ದುವು. ಅರೆ ಒಣಗಿದ ಸಂಡಿಗೆಗೆ ಬಿಸಿಲಿನ, ಬಾಳೆಎಲೆಯ, ಒಂದು ವಿಶಿಷ್ಟ ಪರಿಮಳ. ಒಣಗುವ ಮುನ್ನವೇ ಸಾಕಷ್ಟು ಗುಳುಂ ಆಗಿರುತ್ತಿದ್ದುವು.

ಬಾಳೆ ದೊನ್ನೆ ಸಂತರ್ಪಣೆ ಮನೆಯ ಅನಿವಾರ್ಯ ಅಗತ್ಯ. ಮನೆಗೆ ಬಂದ ಅತಿಥಿಗಳ ಭೋಜನಕ್ಕೆ ಕುಡಿ ಬಾಳೆಲೆ ಹಾಕಿದ ಮೇಲೆ ಬಾಳೆಲೆಯ ಬಲಗೈ ಬದಿಯಲ್ಲಿ ಒಂದೊಂದು ದೊನ್ನೆಯ ಸರಬರಾಜು. ಸಾರು, ಮಜ್ಜಿಗೆ ಹುಳಿ, ಪಾಯಸ, ಕೊನೆಗೆ ಲೋಟದ ಕೊರತೆಯಿದ್ದು ಅಗತ್ಯ ಬಿದ್ದಲ್ಲಿ ನೀರು ಕುಡಿಯುವುದಕ್ಕೂ ಬಾಳೆಲೆ ದೊನ್ನೆಯ ಉಪಯೋಗ. ಬಡಿಸಲು ತಂದ ವ್ಯಂಜನಗಳನ್ನು ದೊನ್ನೆಗೆ ಹಾಕಿಸಿಕೊಳ್ಳಬೇಕೆಂಬ ಮನಸ್ಸಿದ್ದರೆ ಬಲಗೈ ಬೆರಳ ತುದಿಗಳಲ್ಲಿ ದೊನ್ನೆ ಮುಟ್ಟಿಕೊಂಡು ಅಲ್ಲಿ ಬಡಿಸಬೇಕೆಂದು ಕೊಡುವ ಸೂಚನೆ. ದೊನ್ನೆಯ ಮಜ್ಜಿಗೆ ಹುಳಿಯಲ್ಲಿ ಬೆರಳದ್ದಿ ಹೋಳುಗಳನ್ನು ಆರಿಸಿ ರುಚಿ ನೋಡುವ ಸಂಭ್ರಮ. ಹಬ್ಬ ಹರಿದಿನಗಳಲ್ಲಿ ಪನಿವಾರ ಹಂಚುವುದಕ್ಕೆ ಉಪಯುಕ್ತವಾಗುತ್ತಿದ್ದ ದೊನ್ನೆಗಳು ತಿಥಿಯ ದಿನ ಎಳ್ಳು, ಅಕ್ಕಿ ಇತ್ಯಾದಿ ಅಗತ್ಯ ಸಾಮಗ್ರಿಗಳನ್ನು ಇಟ್ಟುಕೊಳ್ಳುವುದಕ್ಕೆ ಉಪಯೋಗ. ಇದೀಗ ಪ್ಲಾಸ್ಟಿಕ್ ಜಮಾನಾ. ಬಾಳಲೆಯನ್ನು ಮೂಲೆಗೊತ್ತಿ ಅದರ ವಿಜೃಂಭಣೆ, ಕಾಲ ಪ್ರಭಾವ.

ಪೇಟೆಯ ನಮ್ಮ ನೆಂಟರೊಬ್ಬರಿಗೆ ಬಾಳೆಎಲೆಗಳ ಕುರಿತು ವಿಪರೀತದ ಮೋಹ. ಮೊದಲು ಹಳ್ಳಿಯಲ್ಲಿದ್ದು ಕಾರಣಾಂತರದಿಂದ ಪೇಟೆ ಸೇರಿಕೊಂಡವರು. ಬಾಳೆಎಲೆ, ಲಿಂಬೆಹಣ್ಣು ಮುಂತಾದ ಹಳ್ಳಿಯಲ್ಲಿ ಪುಗಸಟ್ಟೆ ಸಿಗುವ ವಸ್ತುಗಳನ್ನು ಅವರಲ್ಲಿಗೆ ಹೋಗುವಾಗ ತೆಗೆದುಕೊಂಡು ಹೋದರೆ ವಿಶೇಷ ಮನ್ನಣೆ. ಫ್ರಿಜ್ ಇಲ್ಲದ ಕಾಲದಲ್ಲಿ ಒದ್ದೆ ಮರಳಿನಲ್ಲಿ ನಿಂಬೆ ಹಣ್ಣುಗಳನ್ನು ಹುದುಗಿಸಿಟ್ಟು ಬೇಕಾದಾಗ ಬಳಸಿಕೊಳ್ಳುತ್ತಿದ್ದರು. ಬಾಳೆಎಲೆಗಳನ್ನು ಅವರು ಕಾಪಿಡುತ್ತಿದ್ದ ರೀತಿ ನಮ್ಮ ಆತ್ಮೀಯ ಬಳಗದಲ್ಲಿ ನಗೆ ಚಟಾಕಿಯ ವಿಷಯವಾಗಿ ಪ್ರಚಲಿತದಲ್ಲಿತ್ತು. ದುಡ್ಡಿಗಿಂತಾ ಜಿಪುಣತೆಯಿಂದ ಬಾಳೆಎಲೆಗಳನ್ನು ಉಪಯೋಗಿಸುತ್ತಿದ್ದುದರಿಂದ ಅವರ ಮನೆಯಲ್ಲಿ ಅವರಿವರು ತಂದುಕೊಟ್ಟ ಬಾಳೆ ಎಲೆಗಳ ಸ್ಟಾಕ್ ಸದಾ ಇದ್ದೇ ಇರುತ್ತಿತ್ತು. ಒಂದರ ಮೇಲೊಂದು ಬಾಳೆಎಲೆಗಳನ್ನು ಒಂದೇ ಅಳತೆಗೆ ಕತ್ತರಿಸಿ, ಅಚ್ಚುಕಟ್ಟಾಗಿ ಜೋಡಿಸಿ, ಅವು ಇಟ್ಟಲ್ಲೇ ಒಣಗಿ ಹಸಿರುಬಣ್ಣ ಕಳೆದು ಕೊಂಡು ದರಗಿನ ಬಣ್ಣಕ್ಕೆ ತಿರುಗಿದ್ದರೂ ಊಟಕ್ಕೆ ಉಪಯೋಗಿಸಲು ತೊಂದರೆ ಏನಿಲ್ಲದೆ ಹಸಿ ಬಾಳೆ ಎಲೆಗಳ ಹಾಗೆ ಉಪಯೋಗಕ್ಕೆ ಬರುತ್ತಿದ್ದವು. ಹೊಸದಾಗಿ ಮನೆಗೆ ಬರುವ ಹಸಿ ಎಲೆಗಳನ್ನು ಜೋಪಾನವಾಗಿಟ್ಟು ಹಳೆಯ ಒಣ ಬಾಳೆಲೆ ಉಪಯೋಗಿಸುತ್ತಾ, ಅವು ಖರ್ಚಾಯಿತೆನ್ನುವಾಗ ಮನೆಗೆ ಬಂದ ಹಸಿ ಎಲೆಗಳ ಬಣ್ಣ ಮಾಸುತ್ತಾ ಬಂದಿರುತ್ತಿತ್ತು. ಅಂತೂ ಇಂತೂ ಕುಂತಿ ಮಕ್ಕಳಿಗೆ ರಾಜ್ಯವಿಲ್ಲ ಅನ್ನುವ ಹಾಗೆ ಅವರಿಗೆ ಹಸಿ ಬಾಳೆಲೆಯಲ್ಲಿ ಉಣ್ಣುವ ಯೋಗ ಇರಲಿಲ್ಲ.

ಪತಿ ಪರಮೇಶ್ವರ ಉಂಡು ಎದ್ದ ಎಂಜಲು ಬಾಳೆಲೆಯಲ್ಲಿ ಧರ್ಮಪತ್ನಿಯಾದವಳು ಉಣ್ಣುತ್ತಿದ್ದುದು ಮಲೆನಾಡಿನ ಹಳ್ಳಿಮನೆಗಳ ಬ್ರಾಹ್ಮಣ ಕುಟುಂಬಗಳಲ್ಲಿ ಒಂದು ಪದ್ಧತಿಯಾಗಿದ್ದ ಕಾಲ ಇತ್ತು. 'ಪತ್ನಿಶೇಷ' ಎನ್ನುವ ಹೆಸರಿನಲ್ಲಿ ಕೈ ಹಿಡಿದವನು ಸಣ್ಣದೊಂದು ಪಿಡಿಚೆ ಅನ್ನವನ್ನು ಬಾಳೆಲೆಯಲ್ಲಿ ಉಳಿಸಿರುತ್ತಿದ್ದ. ಈ ಕುರಿತು ಬರೆಯುವಾಗ ಪ್ರೀತಿಯ ಪತ್ನಿಗೆ ಅವಳಿಗಿಷ್ಟವಾದ ಯಾವುದೋ ವ್ಯಂಜನವನ್ನು ಎಲೆ ಬದಿಯಲ್ಲಿ ಉಳಿಸಿ ಪರಸ್ಪರರಿಗೆ ಮಾತ್ರ ಅರ್ಥವಾಗುವಂತಹ ಮಾತಿನ ಹಂಗಿಲ್ಲದ ಒಂದು ನವಿರು ಭಾವನೆಯನ್ನು ಹಂಚಿಕೊಳ್ಳುವ ರಸಿಕ ಪ್ರಕ್ರಿಯೆಯನ್ನು ಇಂತಹದೊಂದು ರೂಢಿಯಲ್ಲಿ ಊಹಿಸಿಕೊಂಡು ಮನಸ್ಸು ಮುದಗೊಳ್ಳುತ್ತಿದೆ. ಅಪರೂಪದ ಕಾಯಿಪಲ್ಲೆಗಳ ಮೇಲೋಗರಗಳು ಎರಡನೇ ಪಂಕ್ತಿಯ, ಎರಡನೇ ದರ್ಜೆಯ ಹೆಮ್ಮಕ್ಕಳು ಊಟಕ್ಕೆ ಕೂರುವ ಹೊತ್ತಿಗೆ ಸಾಕೂಸಾಲದ ಸಂದರ್ಭಗಳಲ್ಲಿ ಅವಿಭಕ್ತ ಕುಟುಂಬಗಳಲ್ಲಿ ಇಂತಹ ರಹಸ್ಯ ಪ್ರೇಮ ಸಲ್ಲಾಪ ನಡೆಯುತ್ತಿದ್ದ ಸಾಧ್ಯತೆ ಅಲ್ಲಗಳೆಯುವಂತದ್ದೇನಲ್ಲ. ಇರಲಿ, ಗಂಡ ಊಟ ಮುಗಿಸಿಕೊಂಡು ಎದ್ದೊಡನೆ ಹೆಂಡತಿ ಬಡಿಸಿಕೊಂಡು, ಊಟಕ್ಕೆ ಕೂತಳೋ ಬದುಕಿದಳು. ಇಲ್ಲದಿದ್ದರೆ ಜುಂಯ್ಗುಡುತ್ತಾ ಹಾರಾಡುತ್ತಿರುವ ನೊಣಗಳ ಹಿಂಡು ಎಂಜಲು ಬಾಳೆಲೆಯ ಮೇಲೆ ಮುಕುರಿಕೊಂಡು ತಮ್ಮ ಪಾಲನ್ನು ನಿರ್ದಾಕ್ಷಿಣ್ಯವಾಗಿ ವಸೂಲಿ ಮಾಡಿಕೊಳ್ಳುತ್ತಿದ್ದವು. ಮನೆಯ ಸಮೀಪವೇ ಜಾನುವಾರುಗಳ ಕೊಟ್ಟಿಗೆ. ಕೊಟ್ಟಿಗೆಯ ಹತ್ತಿರ ಗೊಬ್ಬರದ ಗುಂಡಿ. ಅಂದಮೇಲೆ ಸಮೃದ್ಧವಾಗಿರುತ್ತಿದ್ದ ನೊಣಗಳ ಸಂತತಿ. ಒಮ್ಮೆ ಹೀಗಾಯ್ತು. ಮನೆಗೆ ನಾಲ್ಕಾರು ಅತಿಥಿಗಳು ದಯಮಾಡಿಸಿದ್ದರು. ತುಂಬಿದ ಮನೆ. ಊಟಕ್ಕೆ ಬಳ್ಳೆ ವರೆಸಿ ಹಾಕಿದವರು ಕೆಲವರು, ಬಡಿಸಿದವರು ಕೆಲವರು. ತಂತಮ್ಮ ಗಂಡಂದಿರು ಕ್ರಮತಪ್ಪದೆ ಕೂರುತ್ತಿದ್ದ ಜಾಗ ಅವರಿಗೆ ಸುಪರಿಚಿತ. ತಮ್ಮ ತಮ್ಮ ಗಂಡಂದಿರ ಎಂಜಲೆಲೆಗೆ ಬಡಿಸಿಕೊಂಡು ಎರಡನೇ ಪಂಕ್ತಿಯ ಊಟ ಆರಂಭಿಸಿದ್ದೂ ಆಯ್ತು. ಅರ್ಧ ಊಟ ಮುಗಿದಾಗ ಒಬ್ಬಾಕೆಗೆ ಜ್ಞಾನೋದಯ. ವಾರಗಿತ್ತಿ ಉಣ್ಣುತ್ತಿರುವುದು ತನ್ನ ಗಂಡನ ಎಲೆಯಲ್ಲಲ್ಲ, ಅತಿಥಿ ಮಹಾಶಯನೊಬ್ಬ ಉಂಡುಬಿಟ್ಟ ಎಲೆಯಲ್ಲಿ. ಸತ್ಯ ಗೊತ್ತಾದವಳು ಸುಮ್ಮಗಿದ್ದು ಬಿಡಬಹುದಿತ್ತು. ಆದರೆ ಅವಳು ತಡವಾಗಿ ತನಗೆ ಹೊಳೆದ ಸತ್ಯವನ್ನು ಎಲ್ಲರೆದುರು ಬಹಿರಂಗಗೊಳಿಸಿದಳು. ವಾರಗಿತ್ತಿಯ ಮುಖ ಕಪ್ಪಿಟ್ಟಿತ್ತು. ತಕ್ಷಣ ಊಟ ಬಿಟ್ಟೆದ್ದು ಬಚ್ಚಲಿಗೆ ಧಾವಿಸಿ ಗಂಟಲಿಗೆ ಬೆರಳು ಹಾಕಿ ವಾಂತಿ ಮಾಡಿ ಕೊಂಡಿದ್ದಾಯ್ತು. ಬೇಕೆಂದೇ ಅರ್ಧ ಊಟ ಮುಗಿಯುವವರೆಗೆ ಈ ವಿಷಯ ಮುಚ್ಚಿಟ್ಟಳು ಎಂದು ವಾಂತಿ ಮಾಡಿಕೊಂಡವಳ ಗುಮಾನಿ.

'ನನ್ನ ತಲೆಗೆ ಹೊಳೆದಿದ್ದೇ ಈಗ, ಸತ್ಯಕ್ಕಾರೂ...' ಎನ್ನುವುದು ಹರಿಶ್ಚಂದ್ರೆಯ ಖಡಕ್ ಉತ್ತರ. ಸತ್ಯ ಅವಳ ಅಂತರಾತ್ಮಕ್ಕೆ ಗೊತ್ತು.

ಕುಡಿ ಇಲ್ಲದ ಬಾಳೆಲೆ ಖಂಡು ಎಲೆ. ದಿನನಿತ್ಯದ ಊಟಕ್ಕೆ ಅಡ್ಡಿ ಇಲ್ಲದಂತು ತೆಗೆದ ಆಚೀಚಿನ ಬಾಳೆಎಲೆಗಳು ಸೀಳು ಎಲೆಗಳು. ಮಕ್ಕಳ ಊಟಕ್ಕೆ ಬೇಕಾದಷ್ಟಾಯ್ತು. ಬಳ್ಳೆಯ ಮೇಲಿನ ಹೊಗೆ ಹಾಯುವ ಬಿಸಿ ಬಿಸಿ ಗಂಜಿ, ಗಂಜಿಯ ನಡುಮಧ್ಯೆ ನಿಧಾನವಾಗಿ ಕರಗುತ್ತಿರುವ ಘಮಘಮ ಹೆರೆತುಪ್ಪ, ಎಲೆಯ ಮೇಲ್ತುದಿಯಲ್ಲಿ ಉಪ್ಪು, ಮಿಡಿ ಉಪ್ಪಿನಕಾಯಿ, ಅನ್ನಪೂರ್ಣೆಯಂತೆ ಗಂಜಿಯ ದಬರಿ ಎದುರಿಗಿಟ್ಟುಕೊಂಡು ಕೈಲಿ ಸೌಟು ಹಿಡಿದಿರುವ ಅಮ್ಮ, ಮಲೆನಾಡಿನ ಬಾಲ್ಯಕಾಲದ ಸವಿನೆನಪುಗಳು.

ಬಾಳೆಎಲೆಗಳ ಮತ್ತೊಂದು ಉಪಯೋಗ ಮನದಲ್ಲಿ ವಿಷಾದಭಾವವನ್ನು ಮೀಟುತ್ತಿದೆ. ಮೈ ಸುಟ್ಟುಕೊಂಡವರನ್ನು ಔಷಧಿ ಬಳಿದು ಬಾಳೆಎಲೆಯ ಮೇಲೆ ಮಲಗಿಸುತ್ತಿದ್ದ ಪದ್ಧತಿ ಒಂದು ಕಾಲದಲ್ಲಿತ್ತು. ಒಬ್ಬಾಕೆ ಗೆಳತಿ ಇದ್ದಳು. ಬಿರು ಬೇಸಿಗೆಯ ಒಂದು ದಿನ ಅಣ್ಣ ತಮ್ಮಂದಿರ ಜೊತೆ ಹಣ್ಣು ಹಂಪಲು ಹುಡುಕುತ್ತಾ ಕಾನು ಸುತ್ತಲು ಹೋದವಳು ಆಕಸ್ಮಾತ್ತಾಗಿ ಕಾನಿಗೆ ಬಿದ್ದಿದ್ದ ಬೆಂಕಿಯಲ್ಲಿ ಸಿಕ್ಕಿಹಾಕಿಕೊಂಡಳು. ಚಟಪಟ ಸಿಡಿಯುತ್ತಾ ಉರಿಯುತ್ತಿದ್ದ ಬಿದಿರ ಹಿಂಡಿಲುಗಳು ಕೋಟೆ ಕಟ್ಟಿದ ಜ್ವಾಲೆ. ಮನೆಯವರೆಗೆ ಹೋಗಿ ನೋಡಿಕೊಂಡು ಬಂದಿದ್ದ ಪರಿಚಿತರೊಬ್ಬರು, 'ಬಾಳೆಲೆಮೇಲೆ ಹಾಕಿದಾರೆ. ಇನ್ನೇನಿದ್ರೂ ದಿನ ಲೆಕ್ಕ ಮಾಡೋದು...' ಅಂದಿದ್ದರು. ಅಂದಂತೆ ಅವಳು ಬದುಕುಳಿದಿದ್ದು ಮತ್ತೆ ಎರಡೇ ದಿನ. ಬಾಳೆಲೆಯ ಮುದಗೊಳಿಸುವ ನೆನಪುಗಳ ಜೊತೆ ಇಂಥದೊಂದು ವಿಷಾದಗೀತೆಯೂ ತಳುಕು ಹಾಕಿಕೊಂಡು ಹೆಜ್ಜೆ ಭಾರವಾಯ್ತು. ನಿಟ್ಟುಸಿರು ಜಾರಿತು.

ವಸುಮತಿ ಉಡುಪ
೧೨೦, ೩ನೇ ಕ್ರಾಸ್, ವಿಜಯನಗರ ರೈಲ್ವೆ ಬಡಾವಣೆ,
ಮೈಸೂರು - ೫೭೦ ೦೧೬

# ಕಣ್ಣುಮುಚ್ಚಾಲೆ




ವೈದ್ಯನಾಗಿ ನಾನು ಕೆಮ್ಮಿನ ರೋಗ ಹಾಗೂ ರೋಗಿಗಳನ್ನು ನೋಡಿದ್ದೇನೆ. ಆದರೆ ನಾನು ಇಲ್ಲಿ ಹೇಳಬಯಸುವುದು ಕೆಮ್ಮಿನ ರೋಗದ ಬಗ್ಗೆ ಅಥವಾ ರೋಗಿಯ ಬಗ್ಗೆ ಅಲ್ಲ. ಈ ಕೆಮ್ಮು ಒಂದು ರೀತಿಯಲ್ಲಿ ಮನಸ್ಸಿಗೆ ಮುದ ನೀಡುವ, ಭಯ ಹುಟ್ಟಿಸುವ, ವಿಷಯ ಸೂಚಿಸುವ ಅಥವಾ ಉದ್ದೇಶಪೂರ್ವಕವಾಗಿ ಕೆಮ್ಮುವ ಕೆಮ್ಮು. ಈ ಕೆಮ್ಮಿನ ಅರ್ಥ ಪ್ರತಿಯೊಬ್ಬರಿಗೂ ತಿಳಿಯಲಾರದು. ಕೆಮ್ಮಿದವರಿಗೆ-ಕೆಮ್ಮಿಸಿಕೊಂಡವರಿಗೆ ಮಾತ್ರ ತಿಳಿಯುವ ಕೆಮ್ಮು. ಅಂದರೆ, ಏನಿದರ ಅರ್ಥ? ಸುಮ್ಮನೆ ಹಾಗೆ ಹೇಳಿದರೆ ಅದರ ಸ್ವಾರಸ್ಯ ಇರುವುದಿಲ್ಲ. ಇದನ್ನು ಕೆಲವು ಸನ್ನಿವೇಶಗಳೊಂದಿಗೆ ಹೇಳಿದರೆ ಉತ್ತಮ. ನಾನು ಈ ತರಹದ ಕೆಮ್ಮುಗಳನ್ನು ಮೂರು ರೀತಿಯಲ್ಲಿ ವಿಭಜಿಸಿದ್ದೇನೆ : (೧) ಯೌವನದ ಕೆಮ್ಮು (೨) ಮಧ್ಯವಯಸ್ಸಿನ ಕೆಮ್ಮು (೩) ವಯೋವೃದ್ಧ ಕೆಮ್ಮು.

ಮುಂದೆ ಹೇಳುವ ಸನ್ನಿವೇಶಗಳಲ್ಲಿ ನಾ ತಿಳಿದಂತೆ ಜೀವನದ ಈ ಮೂರು ಘಟ್ಟಗಳಲ್ಲಿ ಎಲ್ಲಾದರೊಂದು ಬಾರಿ ನೀವು ಈ ತರಹ ಕೆಮ್ಮಿರುತ್ತೀರ. ಆ ನೆನಪು ಮತ್ತೆ ಮರುಕಳಿಸಿ ಕೆಮ್ಮಿಸುವ ಬಯಕೆ.

ಮೊದಲನೆಯದಾಗಿ, ಯೌವನದ ಕೆಮ್ಮಿನ ಬಗ್ಗೆ ಹೇಳಬೇಕೆಂದರೆ, ಇದು ಸಾಮಾನ್ಯವಾಗಿ ಪ್ರಾಯಕ್ಕೆ ಕಾಲಿಟ್ಟ ಹುಡುಗ-ಹುಡುಗಿಯರಲ್ಲಿ ಕಾಣುವುದು ಹೆಚ್ಚು. ಒಬ್ಬ ಹುಡುಗ ದಾರಿಯಲ್ಲಿ ಹಾದುಹೋಗುವಾಗ ಎದುರಿಗೆ ಸಿಗುವ ಹುಡುಗಿಯನ್ನು ತನ್ನತ್ತ ಆಕರ್ಷಿಸಲು ಗಂಟಲು ಕೆರೆತದ ಬಾಧೆ ಇರುವವನಂತೆ ಕೆಮ್ಮಿ ಅವಳನ್ನು ಸೆಳೆಯುತ್ತಾನೆ. ಪ್ರತ್ಯುತ್ತರದಲ್ಲಿ ಅವಳೂ ಕೆಮ್ಮಬಹುದು, ಇಲ್ಲದಿದ್ದರೆ ಕೆಮ್ಮಿ ನೆಲಕ್ಕುಗಿಯಬಹುದು.

ದಾರಿಯಲ್ಲಿ ಎದುರಾಗುವ ಹುಡುಗಿಯನ್ನು ನೋಡಿ ಕೆಮ್ಮಿ, ಆಕೆ ನೋಡಿದಾಕ್ಷಣವೇ ಕಣ್ಣು ಹೊಡೆಯುವುದು, ಇವೆಲ್ಲ ಸಾಮಾನ್ಯವೆನ್ನಿ.

ಪರೀಕ್ಷಾ ಕೊಠಡಿಯಲ್ಲಿ ಏನೂ ಉತ್ತರ ತೋಚದೆ ಇರುವ ಸಮಯದಲ್ಲಿ ಹುಡುಗನೇ ಆಗಿರಬಹುದು ಅಥವಾ ಹುಡುಗಿಯೇ ಆಗಿರಬಹುದು, ಕೆಮ್ಮಿದಾಗ ಪಕ್ಕದಲ್ಲಿರುವವರ ಜೊತೆ ಕಣ್ಣಲ್ಲೇ ಪರಸ್ಪರ ಪ್ರಶ್ನೋತ್ತರಗಳು ನಡೆಯುತ್ತವೆ.

ಈ ರೀತಿ ಕೆಮ್ಮಾಟ ಮದುವೆ ಮನೆಗಳಲ್ಲಿ, ಅಕ್ಕಪಕ್ಕದ ಮನೆ ಕಿಟಕಿಗಳಿಂದ, ಕಾಲೇಜು, ಹೋಟೆಲು, ಸಿನಿಮಾಗಳಲ್ಲಿ, ರೈಲು, ಬಸ್ಸುಗಳಲ್ಲಿ ಕಾಣಸುವುದು ಸರ್ವೇಸಾಮಾನ್ಯ.

ಎರಡನೆಯದಾಗಿ, ಮಧ್ಯ ವಯಸ್ಸಿನ ಕೆಮ್ಮಿನ ಬಗ್ಗೆ ಹೇಳುವುದಾದರೆ ಇದು ಸಾಮಾನ್ಯವಾಗಿ ಗಂಡ-ಹೆಂಡತಿಯರಲ್ಲಿ ಕಾಣುವುದು ಹೆಚ್ಚು.

ಮನೆಯೆಲ್ಲ ಸಂಬಂಧಿಕರಿಂದ ತುಂಬಿತುಳುಕುತ್ತಿರುವ ಸಮಯದಲ್ಲಿ ಗಂಡ, ಹೆಂಡತಿಗೆ ಅಥವಾ ಹೆಂಡತಿ, ಗಂಡನಿಗೆ ಏನಾದರೂ ಹೇಳಬೇಕೆಂದಿದ್ದರೆ ದೂರದಿಂದ ಅಥವಾ ಬೇರೆ ಕೋಣೆಯಿಂದ ಒಮ್ಮೆ ಕೆಮ್ಮಿದರೆ ಸಾಕು ಕೆಮ್ಮಿಸಿಕೊಂಡವರಿಗೆ ಏನೋ ವಿಷಯವಿದೆ ಎಂದು ತಿಳಿಯುತ್ತದೆ. ಆಗ ಯಾರಿಗೂ ತಿಳಿಯದಂತೆ, ಕ್ಷಣಗಳಲ್ಲೇ ಪಿಸುಮಾತುಗಳಲ್ಲಿ ಅಥವಾ ಕಣ್ಣಲ್ಲೆ ಮಾತು ನಡೆದುಹೋಗುತ್ತವೆ.

ಗಂಡನ ಸಂಬಂಧಿಗಳು ಸಹಾಯ ಕೇಳಿಬಂದಾಗ, ಗಂಡ ಎಲ್ಲಿ ಬೇಕಾಬಿಟ್ಟಿ ಸಹಾಯ ಮಾಡಿಯಾನೋ ಎಂದು ಅಡಿಗೆ ಮನೆಯಿಂದಲೇ ಹೆಂಡತಿ ಕೆಮ್ಮುತ್ತಾಳೆ...!! ಗಂಡನಿಗೆ ನೆತ್ತಿಯ ಮೇಲೆ ಹೊಡೆದು ''ಹುಷಾರ್'' ಎಂಬ ಅರ್ಥ ಕೊಡುತ್ತದೆ ಆ ಕೆಮ್ಮು! ಹಾಗೆಯೇ ಹೆಂಡತಿಯ ಸಂಬಂಧಿಗಳು ಬಂದರೆ ಅದೇ ಕೆಮ್ಮು, ಅದೇ ಅರ್ಥ.

ಆಫೀಸುಗಳಲ್ಲಿ, ಸಮಾರಂಭಗಳಲ್ಲಿ, ಸಂಬಂಧಿಕರ ಮಧ್ಯಸ್ಥಿಕೆಯಲ್ಲಿ, ಚಿಕ್ಕ ಹುಡುಗರೆದುರಲ್ಲಿ, ವಯಸ್ಸಾದವರೆದುರಲ್ಲಿ ಹಾಗೂ ನಾನಾ ಸಂದರ್ಭಗಳಲ್ಲಿ ಮಧ್ಯ ವಯಸ್ಸಿನವರು ಕೆಮ್ಮಾಟವಾಡಿ ಒಬ್ಬರನ್ನೊಬ್ಬರು ಅಳಿಸುತ್ತಾ, ನಗಿಸುತ್ತಾ, ಚುಡಾಯಿಸಲು ಆ ಕೆಮ್ಮನ್ನು ಕೆಮ್ಮಿ ಕಣ್ಣಲ್ಲೆ ಎಲ್ಲಾ ಮಾತು ಮುಗಿಸಿಬಿಡುತ್ತಾರೆ.

ಇನ್ನು ವಯೋವೃದ್ಧ ಕೆಮ್ಮಿನ ಬಗ್ಗೆ ಹೇಳಬೇಕೆಂದರೆ ಸಾಮಾನ್ಯವಾಗಿ ಇದು ಅಜ್ಜ-ಅಜ್ಜಿಯರ ನಡುವೆ ಕಾಣುವುದು ಹೆಚ್ಚು.

ಸುಮಾರು ವರ್ಷಗಳ ಬರದಿಂದ ಬರಡಾಗಿ ಹೋಗಿರುವಂತಹ ಪ್ರದೇಶದಲ್ಲಿ ಮಳೆ ಹೇಗೆ ಹರ್ಷ ತರುತ್ತದೆಯೋ ಹಾಗೆ ಜೀವನದ ಆಗು-ಹೋಗುಗಳನ್ನು, ಕಷ್ಟ-ಸುಖಗಳನ್ನು ಸವಿದು ನಿಂತಿರುವ ವಯಸ್ಸಿನಲ್ಲಿ ಎಂದಾದರೂ ಅಜ್ಜನಿಗೆ-ಅಜ್ಜಿಯ ಮೇಲೆ ಅಥವಾ ಅಜ್ಜಿಗೆ ಅಜ್ಜನ ಮೇಲೆ ಪ್ರೀತಿ ಉಕ್ಕಿಬಂದಾಗ ಅದನ್ನು ಮಕ್ಕಳ ಮುಂದೆ, ಮೊಮ್ಮಕ್ಕಳ ಮುಂದೆ ವ್ಯಕ್ತಪಡಿಸಲು ಆಗದಿದ್ದಾಗ ಅವರು ಈ ಕೆಮ್ಮನ್ನು ಕೆಮ್ಮಿ ಹೊಸ ಪ್ರೇಮಿಗಳಂತೆ ವರ್ತಿಸುತ್ತಾರೆ, ಕೆಲವೊಮ್ಮೆ ಕಣ್ಣು ಹೊಡೆದು ಒಬ್ಬರನ್ನೊಬ್ಬರು ಚುಡಾಯಿಸುತ್ತಾರೂ ಹೌದು.

ಭೂಕಂಪ ಹೇಗೆ ಮನುಷ್ಯನನ್ನು ಹೆದರಿಸುತ್ತದೆಯೋ ಹಾಗೆ ಅಜ್ಜನ ಆ ಕೆಮ್ಮಿನಲ್ಲಿ ದಮ್ಮಿರುತ್ತದೆ, ಅಜ್ಜಿ ತಪ್ಪುಮಾಡಿದಾಗ.

ಏನಾದರೂ ಬೇಕಾದಲ್ಲಿ ಬರೀ ಒಂದು ಕೆಮ್ಮಿನಿಂದ ಅಜ್ಜಿ-ಅಜ್ಜನಿಗೆ, ಅಜ್ಜ-ಅಜ್ಜಿಗೆ ಸಂದೇಶ ನೀಡಿ ಕಣ್ಣಲ್ಲೆ ಮಾತುಗಳನ್ನಾಡುತ್ತಾರೆ.

ಹೌದೂ ಅಲ್ಲವೊ? ನೀವು ಈ ಕೆಮ್ಮು ಕೆಮ್ಮಿದ್ದೀರಿ ತಾನೆ? ಇನ್ನೂ ಹಲವಾರು ಸಂದರ್ಭಗಳಲ್ಲಿ ಕೆಮ್ಮಲು ಅವಕಾಶವಿರುತ್ತದೆ. ಆದರೆ ನಾ ಮುಂಚೆ ತಿಳಿಸಿದ ಹಾಗೆ ಈ ಕೆಮ್ಮು ಕೆಮ್ಮಿದವರಿಗೆ, ಕೆಮ್ಮಿಸಿಕೊಂಡವರಿಗೆ ಮಾತ್ರ ಅರ್ಥವಾಗುತ್ತದೆ. ಕೆಮ್ಮುವವರ ಪಕ್ಕದಲ್ಲಿದ್ದರೂ ಕೆಮ್ಮಿಸಿಕೊಂಡವರ ಸನಿಹದಲ್ಲಿದ್ದರೂ ನಮಗೆ ಆ ಕೆಮ್ಮಿನ ಅರ್ಥ ತಿಳಿಯದು. ಸದ್ಯಕ್ಕೆ ನನಗೆ ಇಷ್ಟು ಕೆಮ್ಮಿ, ಅಲ್ಲ-ಅಲ್ಲ, ಇಷ್ಟು ಹೇಳಿ ಸ್ವಲ್ಪ ಸುಧಾರಿಸಿಕೊಳ್ಳ ಬೇಕೆನ್ನಿಸುತ್ತಿದೆ, ಅದಲ್ಲದೆ, ನನ್ನ ಹೆಂಡತಿ ಕೆಮ್ಮಿ-ಕೆಮ್ಮಿ ಗಡಿಯಾರ ನೋಡುತ್ತಿದ್ದಾಳೆ, ಹೊತ್ತು ಬಹಳ ಆಯ್ತು ಮಲಗಿ ಅಂತ. ಹಾಗಾಗಿ ಇಲ್ಲಿಗೇ ಈ ಕೆಮ್ಮಾಟ ಸಾಕು. ಹಿಂದೆ ಕೆಮ್ಮಿದ್ದು ನೆನಪಾಯ್ತಾ...?


ಡಾ|| ವಿನಯ್ ಸುತ್ರಾವೆ

೧೬೪೬/೧೮, ಮಹಡಿ, ವಿದ್ಯಾನಗರ, ದಾವಣಗೆರೆ - ೫೭೭ ೦೦೫

# ಅಭಿವೃದ್ಧಿಶೀಲ ರಾಷ್ಟ್ರಗಳು ಮತ್ತು ವ್ಯಾಪಾರ ನಿರ್ಬಂಧಗಳು

## ಒಂದು ಜಾಗತಿಕ ನೋಟ

*ಇಪ್ಪತ್ತೊಂದನೆಯ ಶತಮಾನದ ಆದಿಯಲ್ಲಿ ಸಮಾಜವಾದದ ಭದ್ರಬುನಾದಿಯ ಮೇಲೆ ನಿರ್ಮಿಸಲಾಗಿದ್ದ ಸೋವಿಯತ್ ಒಕ್ಕೂಟವು ೧೯೯೦ರಲ್ಲಿ ತನ್ನ ಅಸ್ತಿತ್ವವನ್ನು ಕಳೆದುಕೊಂಡದ್ದು ದುಃಖಕರ ಸಂಗತಿಯಾಗಿದೆ. ಅಂದಿನ ರಷ್ಯಾದ ಅಧ್ಯಕ್ಷ ಮಿಖಾಯಲ್ ಗೋರ್ಬಚೋವ್ ಆ ರಾಷ್ಟ್ರದಲ್ಲಿ ದೊರಕುವ ನೈಸರ್ಗಿಕ ಅನಿಲ ಕ್ಷೇತ್ರವನ್ನು ಅನಿರ್ಬಂಧಿತವಾಗಿ ಖಾಸಗೀ ಒಡೆತನಕ್ಕೆ ಒಪ್ಪಿಸಿದುದು ಒಂದು ದುರಂತ. ಆ ರಾಷ್ಟ್ರದ ಜನರ ಬಾಳನ್ನು ಹಾಳುಗೆಡವಿದ ಈ ಕೃತ್ಯವು ಜಾಗತೀಕರಣದ ಚಿತ್ರಪಟದಲ್ಲಿ ಈಗಲೂ ರಾರಾಜಿಸುತ್ತಿದೆ. ಈಗ ರಷ್ಯಾದ ಮೇಲೆ ಅಭಿವೃದ್ಧಿ ಹೊಂದಿರುವ ಐರೋಪ್ಯ ಹಾಗೂ ಪಾಶ್ಚಿಮಾತ್ಯ ರಾಷ್ಟ್ರಗಳು ಅನೇಕ ರೀತಿಯಲ್ಲಿ ನಿರ್ಬಂಧಗಳನ್ನು ಹೇರಿವೆ. ಈಗ ರಷ್ಯಾದಿಂದ ರಫ್ತಾಗುವ ಸರಕು–ಸೇವೆಗಳಿಗೆ ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ಬೆಲೆ ಇಲ್ಲದಂತಾಗಿದೆ.*

ಬಿ. ಎಸ್. ವೇಣುಗೋಪಾಲ್

ಅಭಿವೃದ್ಧಿಶೀಲ ರಾಷ್ಟ್ರಗಳು ಬಹುತೇಕ ಆರ್ಥಿಕವಾಗಿ ಹಿಂದುಳಿದಿವೆ ಎನ್ನುವುದರಲ್ಲಿ ಯಾವುದೇ ಸಂಶಯವಿಲ್ಲ. ಈ ಹಿನ್ನೆಲೆಗೆ ಇತಿಹಾಸದಲ್ಲಿ ದೊರಕುವ ಅನೇಕ ಘಟನೆಗಳು ನಮ್ಮೆದುರು ಮೂಕಸಾಕ್ಷಿಯಾಗಿವೆ. ಯಾವುದೇ ರಾಷ್ಟ್ರವು ತನ್ನದೇ ಆದ ಆರ್ಥಿಕ, ಸಾಮಾಜಿಕ ಹಾಗೂ ರಾಜಕೀಯ ವ್ಯವಸ್ಥೆಯನ್ನು ಆಂತರಿಕವಾಗಿ ರಚಿಸಿಕೊಂಡು ಕಾರ್ಯನಿರ್ವಹಿಸುತ್ತಿರುತ್ತವೆ. ವ್ಯವಸಾಯ ಅಥವಾ ಕೈಗಾರಿಕೆಯ ಸಮುದಾಯ ಸಮಾಜದಲ್ಲಿ ಆ ಕ್ಷೇತ್ರಕ್ಕೆ ಬೇಕಾಗುವ ಸಂಪನ್ಮೂಲಗಳ ಕ್ರೋಢೀಕರಣ, ಉತ್ಪಾದನೆ ಮತ್ತು ಅನುಭೋಗವು ಆ ವಲಯಕ್ಕೆ ಅನುಗುಣವಾಗಿರುತ್ತವೆ. ಪ್ರಪಂಚದಲ್ಲಿ ಯಾವುದೇ ರಾಷ್ಟ್ರವು ತನ್ನನ್ನು ಆರ್ಥಿಕವಾಗಿ ಬಲಪಡಿಸಿಕೊಳ್ಳಲು ಪೈಪೋಟಿ ನಡೆಸುವುದು ಸ್ವಾಭಾವಿಕ ಮತ್ತು ಅವಶ್ಯಕವೂ ಕೂಡ. ಈ ತೆರನಾದ ಪೈಪೋಟಿಯು ಆರೋಗ್ಯಕರ ವಾಗಿದ್ದರೆ ಅದರಿಂದ ಜನಸಮುದಾಯದ ಹಾಗೂ ಇಡೀ ಸಮಾಜದ ಕಲ್ಯಾಣವಾಗುವುದರಲ್ಲಿ ಯಾವುದೇ ಸಂಶಯವಿಲ್ಲ. ಪ್ರಸ್ತುತ ರಾಷ್ಟ್ರಗಳ ಅಭಿವೃದ್ಧಿಯನ್ನು ಅದರ ರಾಷ್ಟ್ರೀಯ ವರಮಾನ ಅಥವಾ ತಲಾದಾಯ ಮಾನದಂಡ ಆಧಾರದ ಮೇಲೆ ಅಳೆಯಲಾಗುತ್ತದೆ. ಇದರಲ್ಲಿ ಕೆಲವು ನ್ಯೂನತೆಗಳೂ ಇವೆ. ಅದಂತಿರಲಿ, ರಾಷ್ಟ್ರದ ಸಮಗ್ರ ಕಲ್ಯಾಣಕ್ಕಾಗಿ ಆ ರಾಷ್ಟ್ರವು ಅನೇಕ ಯೋಜನೆಗಳನ್ನು ರೂಪಿಸಿ ಹಂತಹಂತವಾಗಿ ಆ ಯೋಜನೆಗಳನ್ನು ಕಾರ್ಯ ರೂಪಕ್ಕೆ ತರುವಲ್ಲಿ ಶ್ರಮಿಸುತ್ತವೆ. [ಉದಾಹರಣೆಗೆ, ಭಾರತದಲ್ಲಿ ರೂಪಿಸಲಾದ (ರಷ್ಯಾ ಮಾದರಿಯ) ಪಂಚವಾರ್ಷಿಕ ಯೋಜನೆಗಳು.] ಈ ನಿಟ್ಟಿನಲ್ಲಿ ಮೊದಲನೆಯದಾಗಿ, ತನ್ನಲ್ಲೇ ದೊರಕುವ ನೈಸರ್ಗಿಕ ಹಾಗೂ ಮಾನವ ಸಂಪನ್ಮೂಲಗಳ ಸಂಗ್ರಹಣೆ ಮತ್ತು ಅದರ ಗುಣಾತ್ಮಕ ಬಳಕೆ, ಉತ್ಪಾದನೆಯ ತಾಂತ್ರಿಕತೆ, ಸರಕು ಸೇವೆಗಳ ವಿತರಣೆಯ ರಚನೆ, ಜೊತೆಗೆ ಮಾರುಕಟ್ಟೆಗಳ ಸ್ಥಾಪನೆ ಮತ್ತು ವಿಸ್ತರಣೆ ಇವೇ ಮೊದಲಾದವು. ಎರಡನೆಯದಾಗಿ, ಉತ್ಪಾದಿತ ಸರಕು-ಸೇವೆಗಳನ್ನು ತನ್ನ ನೆರೆಯ ರಾಷ್ಟ್ರಗಳಿಗೆ ರಫ್ತು ಮಾಡುವುದರ ಮೂಲಕ ಲಾಭ ಅಥವಾ ಆಮದು ಪಡೆದುಕೊಳ್ಳುವುದರಿಂದ. ಈ ವಹಿವಾಟಿನ ಹಿಂದೆ ಅಡಕವಾಗಿರುವ ಒಂದು ಅಂಶವೆಂದರೆ ಭೌಗೋಳಿಕವಾಗಿ ಯಾವುದೇ ರಾಷ್ಟ್ರವು ತನ್ನ ನೈಸರ್ಗಿಕ ಸಂಪನ್ಮೂಲಗಳನ್ನು ಸಮನಾಗಿ ಹೊಂದಿಲ್ಲ. ಮೂರನೆಯದಾಗಿ, ಯಾವ ರಾಷ್ಟ್ರವೂ ತನ್ನ ಸಂಪನ್ಮೂಲಗಳನ್ನು ಯಥೇಚ್ಛವಾಗಿ ಬಳಸಿಕೊಂಡು ಸರಕುಗಳನ್ನು ಉತ್ಪಾದಿಸುತ್ತದೆಯೊ ಅದರಲ್ಲಿಯ ಉತ್ಪಾದನಾ ವೆಚ್ಚವು ಅತಿ ಕಡಿಮೆಯಾಗಿರುವುದು. ಯಾವುದೇ ರಾಷ್ಟ್ರಕ್ಕೆ ಈ ಸರಕಿನ ಉತ್ಪಾದನಾ ವೆಚ್ಚವು ಅಧಿಕವಾಗಿರುತ್ತದೆಯೊ ಅದು ನೆರೆರಾಷ್ಟ್ರಗಳ ಆಮದಿಗೆ ಶರಣು ಹೋಗುವುದು ಸಹಜ. ನಾಲ್ಕನೆಯದಾಗಿ, ಯಥೇಚ್ಛವಾಗಿ ಸಂಪನ್ಮೂಲಗಳಿರುವ ರಾಷ್ಟ್ರಗಳ ಮೇಲೆ ತಮ್ಮ ಪ್ರಭುತ್ವವನ್ನು ಸಾಧಿಸುವುದು ಮತ್ತು ಅಲ್ಲಿರುವ ಇತರೆ ಅನುಕೂಲಗಳನ್ನು ತನ್ನದಾಗಿಸಿಕೊಂಡು ಲಾಭ ಪಡೆಯುವುದು. ಐದನೆಯದಾಗಿ, ನೆರವಿನ ಹೆಸರಿನಲ್ಲಿ ತನ್ನ ಸರಕು-ಸೇವೆಗಳ ಮಾರುಕಟ್ಟೆಯನ್ನು ಸ್ಥಾಪಿಸಿ, ವಿಸ್ತರಿಸಿ, ಅಭಿವೃದ್ಧಿಶೀಲ ರಾಷ್ಟ್ರಗಳ ಮೇಲೆ ತನ್ನ ಆರ್ಥಿಕ ಹಿಡಿತವನ್ನು ಸಾಧಿಸುವುದು. ಉದಾಹರಣೆಗೆ, ಬ್ರಿಟಿಷರ ಈಸ್ಟ್ ಇಂಡಿಯಾ ಕಂಪನಿಯು ವ್ಯಾಪಾರದ ಸೋಗಿನಲ್ಲಿ ಭಾರತವೂ ಸೇರಿದಂತೆ ಪ್ರಪಂಚದ ಅನೇಕ ರಾಷ್ಟ್ರಗಳನ್ನು ತನ್ನ ವಸಾಹತುಗಳನ್ನಾಗಿ ಮಾಡಿಕೊಂಡು ಅಲ್ಲಿರುವ ಸಂಪನ್ಮೂಲಗಳನ್ನು ತನ್ನ ಸ್ವಾರ್ಥಕ್ಕೆ ಬಳಸಿಕೊಳ್ಳುವುದರ ಮೂಲಕ ಪ್ರಸ್ತುತ ಅಭಿವೃದ್ಧಿ ರಾಷ್ಟ್ರಗಳ ಸಾಲಿನಲ್ಲಿ ಗುರುತಿಸಿಕೊಳ್ಳುತ್ತಿರುವುದು.

ಬಂಡವಾಳಶಾಹಿ ರಾಷ್ಟ್ರಗಳು ನೀಡುವ ನೆರವನ್ನು ವಿವರಿಸುತ್ತಾ ಖ್ಯಾತ ಅರ್ಥಶಾಸ್ತ್ರಜ್ಞ, ಗುನ್ನಾರ್ ಮಿರ್ಡಲ್ ಹೀಗೆ ಹೇಳುತ್ತಾರೆ: ''ಪ್ರತಿಯೊಂದು ನೆರವಿನ ಹಿನ್ನೆಲೆಯಲ್ಲಿ ತಮ್ಮ ಲಾಭದ ಪ್ರವೃತ್ತಿಯು ಅಡಗಿರುತ್ತದೆ. ಪಾಶ್ಚಿಮಾತ್ಯ ರಾಷ್ಟ್ರಗಳಾದ ಬ್ರಿಟನ್, ಫ್ರಾನ್ಸ್, ಜರ್ಮನಿ, ಅಮೆರಿಕಾ ಮುಂತಾದವು ನೆರವು ನೀಡುವುದೇ ತಮ್ಮ ಆರ್ಥಿಕ ವ್ಯವಸ್ಥೆಯನ್ನು ಭದ್ರಪಡಿಸಿಕೊಳ್ಳಲು.'' ಬಂಡವಾಳ ಶಾಹಿ ಅಥವಾ ಮುಕ್ತ ಮಾರುಕಟ್ಟೆಯ ಮೂಲಮಂತ್ರವಾಗಿ ಜಾಗತೀಕರಣದ ಹೆಸರಿನಲ್ಲಿ ಈ ತೆರನಾದ ಶೋಷಣೆಯು ಪ್ರಪಂಚದೆಲ್ಲೆಡೆ ಅವಿರತವಾಗಿ ನಡೆಯುತ್ತಿದೆ.

ರಾಷ್ಟ್ರದ ಅಭಿವೃದ್ಧಿಗೆ ಹಾಗೂ ಆರ್ಥಿಕ ಭದ್ರತೆಗೆ ಅಂತರರಾಷ್ಟ್ರೀಯ ವ್ಯಾಪಾರ ವಹಿವಾಟು ಬಹು ಮುಖ್ಯವಾದ ಸಾಧನವಾಗಿದೆಯಲ್ಲದೆ ನೆರೆ ರಾಷ್ಟ್ರಗಳ ಬೇಡಿಕೆಗಳನ್ನು ತಕ್ಕಮಟ್ಟಿಗೆ ಪೂರೈಸುವುದು ಮತ್ತೊಂದು ರಾಷ್ಟ್ರದ ಧರ್ಮ ಮತ್ತು ಆದ್ಯ ಕರ್ತವ್ಯ. ಆದರೆ ಒಂದು ರಾಷ್ಟ್ರದ ಪೂರ್ಣ ಅಭಿವೃದ್ಧಿ ಅಥವಾ ಕಲ್ಯಾಣವು ಬೇರೊಂದು ರಾಷ್ಟ್ರದ ವೆಚ್ಚದಲ್ಲಿ ನಡೆಸಬೇಕೆಂದು ಹುನ್ನಾರ ಮಾಡುವ ನೀತಿಯನ್ನು ಯಾವುದೇ ಕಾರಣಕ್ಕಾಗಿ ಅಂಗೀಕರಿಸಲು ಸಾಧ್ಯವಿಲ್ಲ. ಈ ತೆರನಾದ ನೀತಿಗಳಿಗೆ ಕಟುವಿರೋಧವಿರಬೇಕು.

ಅಂತರರಾಷ್ಟ್ರೀಯ ಕಟ್ಟುಪಾಡುಗಳ ಪ್ರಕಾರ ರಾಷ್ಟ್ರಗಳ ನಡುವೆ ನಡೆಯುವ ವ್ಯಾಪಾರ ವಹಿವಾಟುಗಳಲ್ಲಿ ಮುಖ್ಯವಾಗಿ ಎರಡು ನೀತಿಗಳನ್ನನುಸರಿಸಲಾಗುತ್ತದೆ. **(೧) ಮುಕ್ತ ವ್ಯಾಪಾರ ನೀತಿ :** ಈ ನೀತಿ ಅಥವಾ ವ್ಯವಸ್ಥೆಯಡಿಯಲ್ಲಿ ಎರಡು ಅಥವಾ ಹೆಚ್ಚು ರಾಷ್ಟ್ರಗಳು ತಾವು ವ್ಯಾಪಾರಮಾಡುವ ಸರಕು-ಸೇವೆಗಳ ಮೇಲೆ ಯಾವುದೇ ತೆರನಾದ ಸುಂಕಗಳನ್ನಾಗಲಿ ವಿಧಿಸುವುದಿಲ್ಲ ಹಾಗೂ ಮಾನವ ಸಂಪನ್ಮೂಲಗಳ ವರ್ಗಾವಣೆಯಲ್ಲಿ ಯಾವುದೇ ನಿರ್ಬಂಧಗಳನ್ನು ಹೇರುವಂತಿಲ್ಲ. ಉದಾಹರಣೆಗೆ, ಐರೋಪ್ಯ ಆರ್ಥಿಕ (ವ್ಯಾಪಾರ) ಒಕ್ಕೂಟದಲ್ಲಿ ಒಬ್ಬ ವ್ಯಕ್ತಿಯು ಒಕ್ಕೂಟಕ್ಕೊಳಪಡುವ ರಾಷ್ಟ್ರದಲ್ಲಿ ತನ್ನಿಚ್ಛೆಗನುಸಾರ ಉದ್ಯೋಗ ಪಡೆಯುವ ಮತ್ತು ನಿರ್ವಹಿಸುವ ಹಕ್ಕನ್ನು ಹೊಂದಿರುವುದು, ಇದರ ಸಲುವಾಗಿ ಆ ವ್ಯಕ್ತಿಯು ಯಾವುದೇ ರೀತಿಯ ವಿದೇಶೀ

ಅನುಮತಿ (ವೀಸಾ) ಅಗತ್ಯವಿಲ್ಲ. ಈ ರೀತಿಯಾದ ಮುಕ್ತ ವ್ಯಾಪಾರವು ಅಂತರರಾಷ್ಟ್ರೀಯ ವ್ಯಾಪಾರ ವಲಯದಲ್ಲಿ ಅನೇಕ ಸವಾಲುಗಳನ್ನೆದುರಿಸಬೇಕಾಗುತ್ತದೆ. ಅದರಲ್ಲಿ ಜನರ ಅಥವಾ ಸಮಾಜದ ಕಲ್ಯಾಣಕ್ಕೆ ಘಾತುಕವಾದ ಸರಕು-ಸೇವೆಗಳ ವಹಿವಾಟು, ರಾಷ್ಟ್ರದ ಒಟ್ಟು ಅಭಿವೃದ್ಧಿಯನ್ನು ನಾಶಮಾಡುತ್ತದೆ. ಇಂತಹ ಅಂಶಗಳೇ ವ್ಯಾಪಾರ-ವಿನಿಮಯಗಳಲ್ಲಿ ಪ್ರಮುಖ ಸಮಸ್ಯೆಗೆ ಎಡೆ ಮಾಡಿಕೊಡುತ್ತದೆ ಎಂದರೆ ತಪ್ಪಾಗಲಾರದು. **(೨) ರಕ್ಷಣಾ ವ್ಯಾಪಾರ ನೀತಿ:** ಈ ನೀತಿ ಅಥವಾ ವ್ಯವಸ್ಥೆಯಡಿಯಲ್ಲಿ ಎರಡು ಅಥವಾ ಅದಕ್ಕಿಂತ ಹೆಚ್ಚು ರಾಷ್ಟ್ರಗಳು ವ್ಯಾಪಾರ ಮಾಡುವ ಸರಕು-ಸೇವೆಗಳ ಮೇಲೆ ಶೇಕಡಾವಾರು ಸುಂಕಗಳನ್ನು ವಿಧಿಸುತ್ತವೆ. ಈ ರಕ್ಷಣಾ ವ್ಯಾಪಾರ ನೀತಿಯನ್ನು ಪ್ರತಿಪಾದಿಸಿದ ಪ್ರಮುಖರಲ್ಲಿ ಅಮೆರಿಕಾದ ಪ್ರಥಮ ಅಧ್ಯಕ್ಷನಾಗಿದ್ದ ಜಾರ್ಜ್ ವಾಷಿಂಗ್‌ಟನ್‌ನ ಆಪ್ತ ವಿತ್ತಮಂತ್ರಿ ಅಲೆಗ್ಸಾಂಡರ್ ಹ್ಯಾಮಿಲ್ಟನ್ ಈ ನೀತಿಯನ್ನು ಮೊದಲ ಬಾರಿಗೆ ಅಮೆರಿಕಾ ಸಂಯುಕ್ತ ಸಂಸ್ಥಾನದಲ್ಲಿ ಜಾರಿಗೆ ತಂದದ್ದು ಒಂದು ವಿಶೇಷ. ಹ್ಯಾಮಿಲ್ಟನ್ ತನ್ನದೇ ಆದ ಎರಡು ರಕ್ಷಣಾ ವ್ಯಾಪಾರದ ವಾದಗಳನ್ನು ಮಂಡಿಸುತ್ತಾನೆ: (ಅ) ಬಾಲ್ಯಾವಸ್ಥೆ ಕೈಗಾರಿಕಾವಾದ ಹಾಗೂ (ಆ) ಪ್ರತೀಕಾರ ವಾದ. ಮೊದಲನೆಯ ವಾದವು ''ಶೈಶವಾವಸ್ಥೆಯಲ್ಲಿರುವ ದೇಶೀ ಕೈಗಾರಿಕೆಗಳನ್ನು ಹೆಚ್ಚು ಆಂತರಿಕ ಮಿತವ್ಯಯಗಳ ಮೂಲಕ ಸ್ವಸಾಮರ್ಥ್ಯದಿಂದ ಸ್ವಾವಲಂಬನೆಯನ್ನಾಗಿ ಮಾಡುವವರಿಗೂ ವಿದೇಶಿ ಆಮದಿನ ಮೇಲೆ ಸುಂಕ ವಿಧಿಸುತ್ತಾ ದೇಶೀ ಕೈಗಾರಿಕೆಗಳನ್ನು ಕಾಪಾಡುವುದು.'' ಎರಡನೆಯದಾಗಿ, ಒಂದು ರಾಷ್ಟ್ರವು ಸರಕುಗಳ ಮೇಲೆ ಸುಂಕಗಳನ್ನು ಹೆಚ್ಚಾಗಿ ವಿಧಿಸಿ ಆ ರಾಷ್ಟ್ರದಿಂದ ಬರುವ ಆಮದಿನ ನಿಯಂತ್ರಣಕ್ಕೆ ಮುಂದಾದರೆ, ಪ್ರತೀಕಾರವಾಗಿ ಆ ರಾಷ್ಟ್ರವೂ ತಾನು ವಿಧಿಸಿದ ರಾಷ್ಟ್ರದಿಂದ ಆಮದಿನ ಮೇಲೆ ಮಾಡಿಕೊಳ್ಳುತ್ತಿರುವ ಸರಕುಗಳ ಮೇಲೆ ಸುಂಕ ವಿಧಿಸಬಹುದು. ಈ ಎರಡೂ ವಾದಗಳನ್ನು ವ್ಯಾಪಾರ ನೀತಿಯನ್ನಾಗಿ ಈಗ್ಗೆ ಸುಮಾರು ಮುನ್ನೂರು ವರ್ಷಗಳ ಹಿಂದೆಯೇ ಅಮೆರಿಕಾವು ಜಾರಿಗೆ ತಂದು ತಮ್ಮ ಆರ್ಥಿಕ ಕೋಟೆಯನ್ನು ಭದ್ರಪಡಿಸಿಕೊಂಡಿದ್ದು, ಈ ಸಂದರ್ಭದಲ್ಲಿ ಒಂದು ವಿಚಾರವನ್ನು ಸ್ಪಷ್ಟಪಡಿಸಿಕೊಳ್ಳಬೇಕು. ಅದೇಂದರೆ, ಪ್ರಸ್ತುತ ಅಮೆರಿಕಾವು ಆರ್ಥಿಕ ರಂಗದಲ್ಲಿ ಸಾಧನೆಗೈದು ತನ್ನ ವಕ್ರದೃಷ್ಟಿಯನ್ನು ತನ್ನ ಇತರೆ ನೆರೆ ರಾಷ್ಟ್ರಗಳಾದ ಕ್ಯೂಬಾ ಅರ್ಜೆಂಟೈನಾ, ಮೆಕ್ಸಿಕೊಗಳ ಮೇಲೆ ನೆಟ್ಟಿರುವುದು. ಅಮೆರಿಕಾದ ಜೊತೆಗೆ ಇನ್ನೂ ಅನೇಕ ಅಭಿವೃದ್ಧಿ ಹೊಂದಿದ ರಾಷ್ಟ್ರಗಳ ಗುಂಪೇ ಇದೆ. ಇದನ್ನು ಜಿ-ಎಂಟು (ಜಿ-೮) ಎಂಬುದಾಗಿ ಅಂತರರಾಷ್ಟ್ರೀಯ ಮಟ್ಟದಲ್ಲಿ ಗುರುತಿಸಲಾಗುತ್ತದೆ. ಈ ಗುಂಪಿಗೆ ಅಮೆರಿಕಾವು ಹಿರಿಯಣ್ಣನಾಗಿರುವ ವಿಷಯ ಹೊಸದೇನಲ್ಲ. ತಮ್ಮ ಯೋಜನೆಗಳನ್ನು ಕಾರ್ಯಗತಗೊಳಿಸಲು ಅಲ್ಲೇ ಸ್ಥಾಪಿತವಾಗಿರುವ 'ಸಂಯುಕ್ತ ರಾಷ್ಟ್ರಗಳ ಸಂಸ್ಥೆ', 'ವಿಶ್ವಬ್ಯಾಂಕು', 'ಅಂತರರಾಷ್ಟ್ರೀಯ ಹಣಕಾಸು ನಿಧಿ' ಮತ್ತು ಪ್ರಪಂಚ ಅಥವಾ ವಿಶ್ವ ವ್ಯಾಪಾರ ಸಂಸ್ಥೆ ಇವುಗಳಿಂದ ಬೇರೆ ರಾಷ್ಟ್ರಗಳ ವ್ಯಾಪಾರ ವಹಿವಾಟಿನ ಮೇಲೆ ತಮ್ಮ ನಿಯಂತ್ರಣವನ್ನು ಸಾಧಿಸಲು ಮಾಡಲಾದ ಪ್ರಯತ್ನಗಳಷ್ಟೆ. ಈ ಗುಂಪಿನ ರಾಷ್ಟ್ರಗಳು ಮೊದಲನೆಯ ಹಾಗೂ ಎರಡನೆಯ ಜಾಗತಿಕ ಯುದ್ಧಗಳ ನಂತರ ಆರ್ಥಿಕವಾಗಿ ದಿವಾಳಿಯಾದದ್ದು ಮತ್ತು ೧೯೨೯ರಿಂದ ೧೯೪೩ರವರೆಗೆ 'ಆರ್ಥಿಕ ಮುಗ್ಗಟ್ಟು' ಎದುರಿಸಿ ಬಸವಳಿದ ಘಟನೆ ಇತಿಹಾಸದ ಪುಟಗಳಲ್ಲಿ ಅಚ್ಚಳಿಯದೆ ಉಳಿದಿದೆ. ತದನಂತರ, ಇನ್ನು ತಮಗೆ ಉಳಿಗಾಲವಿಲ್ಲವೆಂದು ತಿಳಿದು ಪ್ರಮುಖವಾಗಿ ಅಮೆರಿಕಾವು ತನ್ನ ಹೊಸ ಆರ್ಥಿಕ ನೀತಿಯನ್ನು 'ಜಾಗತೀಕರಣ'ದ ಹೆಸರಿನಲ್ಲಿ ಇತರೆ ರಾಷ್ಟ್ರಗಳ ಸಂಪತ್ತನ್ನು ಪರೋಕ್ಷವಾಗಿ ಕೊಳ್ಳೆ ಹೊಡೆಯುವ ಯೋಜನೆಯನ್ನು ರೂಪಿಸಿ ಕಾರ್ಯಪ್ರವೃತ್ತವಾಗಿದ್ದುದು. ಅಭಿವೃದ್ಧಿಶೀಲ ರಾಷ್ಟ್ರಗಳು ಅಮೆರಿಕಾವು ಸೇರಿದಂತೆ ಇತರೆ ಅಭಿವೃದ್ಧಿಹೊಂದಿದ ಬಲಿಷ್ಠ ರಾಷ್ಟ್ರಗಳ ಮಾರ್ಜಾಲ (ಅ)ನ್ಯಾಯಕ್ಕೆ ಸೆರೆಸಿಕ್ಕಿದಂಥವು. ಇವರು ಪ್ರತಿಪಾದಿಸುವ ಜಾಗತಿಕ ಆರ್ಥಿಕ ನೀತಿ ಎಂಬ ಗೂಬೆಯನ್ನು ತಲೆಯ ಮೇಲೆ ಪ್ರತಿಷ್ಠಾಪಿಸಿಕೊಂಡು ಸಂತೋಷಪಡುತ್ತಿರುವುದು ಅತಿ ದುಃಖದ ಸಂಗತಿ.

ಭಾರತವು ತನ್ನ ಅರ್ಥವ್ಯವಸ್ಥೆಯನ್ನು ೧೯೯೦-೧೯೯೧ರ ಅಂದಿನ ಪ್ರಧಾನ ಮಂತ್ರಿ ಪಿ. ವಿ. ನರಸಿಂಹ ರಾವ್ ಹಾಗೂ ವಿತ್ತಮಂತ್ರಿಯಾಗಿದ್ದ ಡಾ॥ ಮನಮೋಹನ ಸಿಂಗ್ ಹರಾಜು ಹಾಕಿದ್ದು ಭಾರತದ ಆರ್ಥಿಕಾ(ಅನ)ಭಿವೃದ್ಧಿಯ ಇತಿಹಾಸದಲ್ಲಿ ಒಂದು ಮರೆಯಲಾಗದ ಮೈಲಿಗಲ್ಲು ಎಂದು ತಮ್ಮ ಬೆನ್ನನ್ನು ತಾವೇ ತಟ್ಟಿಕೊಂಡು ಸಂತೋಷಪಟ್ಟಿದ್ದು ಒಂದು ವಿಪರ್ಯಾಸ. ವಿಶ್ವ ವ್ಯಾಪಾರ ಸಂಘಟನೆಯ ಅನುಯಾಯಿಗಳಾಗಿ ಕಣ್ಣುಮುಚ್ಚಿ ಸಹಿಹಾಕಿದ್ದು ಇನ್ನೊಂದು ಗರಿಮೆ. ಭಾರತದಲ್ಲಿ ಅಣು ಸ್ಥಾವರಗಳಿಗೆ ಬಳಸುವ ಅಣುವಿಕಿರಣ ಕಚ್ಚಾ ವಸ್ತುಗಳ ಆಮದಿನ ಮೇಲೆ ನಿರ್ಬಂಧವನ್ನು ಒಡ್ಡುವ ಭಯದ ಮೇಲೆ ಅಮೆರಿಕಾಕ್ಕೆ ಮಣಿದು ನಮ್ಮ ಪ್ರಧಾನ ಮಂತ್ರಿ ಮನಮೋಹನ ಸಿಂಗರು ಅಣುಶಕ್ತಿ ಒಪ್ಪಂದಕ್ಕೆ ಭಾರತದ ಅಣುಶಕ್ತಿ ವಿಜ್ಞಾನಿಗಳ ಅಸಮ್ಮತಿ ಇದ್ದರೂ ಕಣ್ಣುಮುಚ್ಚಿ ಸಹಿ ಹಾಕಿದ್ದಾರೆ. ಇನ್ನು ಭಾರತದಲ್ಲಿ ಹತ್ತಿಬಟ್ಟೆ (ಜೀನ್ಸ್) ಅನ್ನು ತಯಾರುಮಾಡುವ ಏಕೈಕ ಕೈಗಾರಿಕೆಯೆಂದರೆ, ಅರವಿಂದ್ ಬಟ್ಟೆ ಗಿರಣಿ. ಸುಮಾರು ಮೂವತ್ತು ಕೋಟಿ ರೂಪಾಯಿ ಮೌಲ್ಯದ ಬಟ್ಟೆ ತಯಾರಿಸಿ ರಫ್ತು ಮಾಡಿದ ನಂತರ ಅಮೆರಿಕಾವು ಅಲ್ಲಿನ ಜನರಿಗೆ ಅಗತ್ಯವಿರುವ ಗುಣಮಟ್ಟಕ್ಕೆ ಸರಿಹೊಂದುವುದಿಲ್ಲ ಎಂಬ ಕಾರಣಕ್ಕೆ ತನ್ನ ಇಚ್ಛಾನುಸಾರ ಗುಣಮಟ್ಟದ ಅಂಶಗಳನ್ನು ಬಂದ ಹಾಗೆ ನಿರ್ಧರಿಸಿಕೊಂಡು ಮಾರುಕಟ್ಟೆಯಲ್ಲಿ ಈ ಬಟ್ಟೆಯ ಮಾರಾಟದ ಮೇಲೆ ನಿರ್ಬಂಧವನ್ನು ಹೇರಿ ಅರವಿಂದ್ ಕೈಗಾರಿಕೆ ಮಾಲೀಕರಿಗೆ ಮೂರು ಪಂಗನಾಮ ಹಾಕಿದ ಸಂಗತಿ ನಮ್ಮ ವಿದೇಶಾಂಗ ಮತ್ತು ವ್ಯಾಪಾರ ಮಂತ್ರಿಗಳು ಮರೆತಂತಿದೆ. ಅದಂತಿರಲಿ, ಈ ಎಲ್ಲ (ಕು)ನೀತಿ,

## ರಂಗೋಲಿಯಂತಹ ಹುಡುಗಿ



ನಸುಕಿನಲೇ ಎದ್ದು
ಹೊಸಿಲಿಗೆ ನೀರು ಹಾಕಿ
ಅಲ್ಲಲ್ಲಿ ಚದುರಿಕೊಂಡ
ಚುಕ್ಕೆ ಚುಕ್ಕೆಗಳನ್ನೆಲ್ಲಾ ಸೇರಿಸುತ್ತಾ
ಹೊಸ ಚಿತ್ರ ಬರೆದ ಹುಡುಗಿ...
ಒಂದೊಂದು ಚುಕ್ಕಿಗೂ
ರಂಗು ರಂಗಿನ ಬಣ್ಣ ತುಂಬಿ
ಜೀವ ಚೆಲುವನ್ನು ತಂದು ಕೊಟ್ಟ ಹುಡುಗಿ...
ಮನೆಯೊಳಗೆ ಅಡಿಯಿಟ್ಟು
ದೇವರಿಗೆ ದೀಪ ಹಚ್ಚಿ
ಬೆನ್ನು ಹಾಕಿ ನಿಂತ ಮನೆಯೊಳಗಿನ
ಮುಖಗಳಲ್ಲಿ ಭಾವ ಬಣ್ಣವನ್ನು
ತುಂಬಲು ಪ್ರಯತ್ನಿಸುತ್ತಿದ್ದಾಳೆ...
ಉಸಿರೇ ನಿಂತಂತಿರುವ ಪೇಲವ ಮುಖಗಳಲ್ಲಿ
ಚೈತನ್ಯ ಚಿಲುಮೆಯನ್ನು ಉಕ್ಕಿಸಲು
ಹೆಣಗಾಡುತ್ತಿದ್ದಾಳೆ...
ಕಳೆಯೇ ಇಲ್ಲದ ನಿಸ್ತೇಜ ಕಂಗಳಲ್ಲಿ
ನಗೆ ಬಿಂದುವನ್ನು ಹುಡುಕುವ ಯತ್ನದಲ್ಲಿದ್ದಾಳೆ...

ಕೆಲವೊಮ್ಮೆ...
ಸರಾಗವಾಗಿ ಬಿಂದು ಬಿಂದುಗಳನ್ನು
ಸೇರಿಸಿ ಭಾವ ಬಣ್ಣವನ್ನು ತುಂಬಿ
ಹೊಸ ರೂಪು ಪಡೆಯಲು
ಇವರುಗಳು ರಂಗೋಲಿಯಂತೆ ಸಲೀಸಲ್ಲ
ಅಂದುಕೊಂಡು ತೆಪ್ಪಗಾಗಿಬಿಡುತ್ತಾಳೆ.

**ಸ್ಮಿತಾ ಅಮೃತರಾಜ್ ಸಂಪಾಜೆ**
ಸುಳ್ಯ, ಬಾಲೆಂಬಿ ಅಂಚೆ, ಚೆಂಬು ಗ್ರಾಮ
ಮಡಿಕೇರಿ ತಾಲೂಕು, ಕೊಡಗು - ೫೭೪ ೨೩೪

ನಿಯಮಗಳು ವಿಶ್ವ ವ್ಯಾಪಾರ ಸಂಘಟನೆ (ಡಬ್ಲ್ಯು.ಟಿ.ಓ.) ಮೂಲಕ ವ್ಯವಸ್ಥಿತವಾಗಿ ನಡೆಯುತ್ತಿರುವುದು ಇಂದು ಬಹಿರಂಗ ಗುಟ್ಟಾಗಿದೆ. ಈಗೀಗ ಭಾರತದ ಶಿಕ್ಷಣ ಕ್ಷೇತ್ರದಲ್ಲಿ ಅನೇಕ ಬದಲಾವಣೆಗಳನ್ನು ನಾವು ಕಾಣ ಬಹುದು. ಈಗ ಜಾಗತೀಕರಣದ ಮುಕ್ತ ಮಾರು ಕಟ್ಟೆಯಲ್ಲಿ ಶಿಕ್ಷಣವು ಒಂದು ಸೇವೆಯೆಂದು ಗುರುತಿಸ ಲಾಗಿದೆ. ವಾರ್ಷಿಕ ಪಠ್ಯಕ್ರಮ ಹಾಗೂ ಪರೀಕ್ಷೆಗಳಿಂದ ಅರ್ಧವಾರ್ಷಿಕ ಪಠ್ಯ ಹಾಗೂ ಪರೀಕ್ಷಾಪದ್ಧತಿಗೆ ಪಲ್ಲಟ ಗೊಂಡು ನಮ್ಮಲ್ಲಿ ವಿದ್ಯಾರ್ಥಿಗಳ ಪಾಡು "ಬಾಣಲಿ ಯಿಂದ ಜಾರಿ ಬೆಂಕಿಗೆ ಬಿದ್ದಂತಿದೆ". ಪ್ರತಿಯೊಂದು ತರಗತಿಗೂ ಕಡ್ಡಾಯ ಗಣಕ ಯಂತ್ರ ಶಾಸ್ತ್ರಾಭ್ಯಾಸ ಮೊದಲಾದುವನ್ನು ಜಾರಿಗೆ ತರುವುದಲ್ಲದೆ, ಇಲ್ಲಿರುವ ಶಿಕ್ಷಣ ಸಂಸ್ಥೆಗಳನ್ನು ಯಾವುದೇ ಮೈಲಿಗಟ್ಟಲೆ ದೂರ ವಿರುವ ವಿಶ್ವವಿದ್ಯಾಲಯದ ಮಾನದಂಡಗಳನ್ನನುಸರಿಸಿ ಗುಣಮಟ್ಟಗಳನ್ನಳೆಯುವುದರ ಹಿಂದೆ ಅಭಿವೃದ್ಧಿ ರಾಷ್ಟ್ರಗಳ ಕೈವಾಡವೆಷ್ಟಿದೆ ಎಂಬುದನ್ನು ಗ್ರಹಿಸಬಹುದು. ವಿಶ್ವಬ್ಯಾಂಕು ಹಾಗೂ ಅಂತರರಾಷ್ಟ್ರೀಯ ಹಣಕಾಸು ನಿಧಿಯಿಂದ ಭಾರತ ಸರ್ಕಾರವು ಪಡೆಯುತ್ತಿರುವ ನೆರವಿನ ಹೆಸರಿನಲ್ಲಿ ಪಡೆಯುತ್ತಿರುವ ಸಾಲಕ್ಕೆ ಈ ಸಂಸ್ಥೆಗಳು ವಿಧಿಸುವ ಷರತ್ತುಗಳಿಗೆ ತಕ್ಕಂತೆ ನಮ್ಮ ವಿಶ್ವವಿದ್ಯಾಲಯ ಅನುದಾನ ಆಯೋಗವು ತಾಳಹಾಕುತ್ತಿದೆ. ಬೆಂಗಳೂರಿನ ಪ್ರತಿಷ್ಠಿತ ಕಾಲೇಜಿನಲ್ಲಿ ಆಯೋಜಿಸಿದ್ದ 'ಅರ್ಧವಾರ್ಷಿಕ ಪಠ್ಯಕ್ರಮ ಹಾಗೂ ಪರೀಕ್ಷಾ ಪದ್ಧತಿ' ಕಮ್ಮಟದಲ್ಲಿ ಬೆಂಗಳೂರು ವಿಶ್ವವಿದ್ಯಾಲಯದ ಉಪಕುಲಪತಿ ಹಾಗೂ ಕರ್ನಾಟಕ ರಾಜ್ಯ ಸರ್ಕಾರದ ಹಣಕಾಸು ಕಾರ್ಯದರ್ಶಿಯವರು ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆಗಳಿಂದ ಸಾಲದ ಮೊತ್ತವನ್ನು ಶಿಕ್ಷಣ ಕ್ಷೇತ್ರದಲ್ಲಿ ಹೂಡಿರುವುದರಿಂದಾಗಿ ಅವರು ವಿಧಿಸುವ ನಿಯಮಗಳಿಗೆ ಬದ್ಧರಾಗ ಬೇಕಾಗುತ್ತದೆ; ಇಲ್ಲದಿದ್ದರೆ ಶಿಕ್ಷಕರು ಹಾಗೂ ಶಿಕ್ಷಣ ಸಂಸ್ಥೆಗಳು ದಿವಾಳಿ ಏಳುತ್ತವೆಂಬುದು ಅಭಿಪ್ರಾಯಪಟ್ಟಿದ್ದು ಶೋಭೆ ತರುವ ವಿಷಯವಲ್ಲ. ಹೀಗೆ ಸಾಲದ ಹೆಸರಿನಲ್ಲಿ ಅಭಿವೃದ್ಧಿ ಹೊಂದಿದ ರಾಷ್ಟ್ರಗಳು ಅಭಿವೃದ್ಧಿಶೀಲ ರಾಷ್ಟ್ರಗಳನ್ನು ಸಾರಾ ಸಗಟಾಗಿ ಬಳಸಿಕೊಳ್ಳುವುದು ಅಪಾಯಕರ ಬೆಳವಣಿಗೆ ಚಿಹ್ನೆಯಾಗಿದೆ. ಈ ನಿಟ್ಟಿನಲ್ಲಿ ವಿದ್ಯಾರ್ಥಿಗಳ ಕುರಿತ ಸರ್ವತೋಮುಖ ಬೆಳವಣಿಗೆಯ ಪಠ್ಯಗಳನ್ನು ರಚಿಸಿ ಪರೀಕ್ಷಾ ಪದ್ಧತಿಯನ್ನು ಅಳವಡಿಸಿಕೊಳ್ಳುವ ಹಾದಿಯಲ್ಲಿ ಕೂಡಲೇ ಕಾರ್ಯಪ್ರವೃತ್ತರಾಗಬೇಕು.




ಇಂದಿನ ಜಾಗತಿಕ ಮಟ್ಟದಲ್ಲಿ ಭಾರತವೊಂದೇ ವ್ಯಾಪಾರ ನಿರ್ಬಂಧಕ್ಕೊಳಗಾಗಿರುವ ರಾಷ್ಟ್ರವೇನಲ್ಲ. ಇನ್ನೂ ಅನೇಕ ರಾಷ್ಟ್ರಗಳು ಈ ವ್ಯಾಪಾರ ನಿರ್ಬಂಧವೆಂಬ ಕರಾಳ ಛಾಯೆಯಲ್ಲಿ ಇಂದಿಗೂ ನಲುಗುತ್ತಿರುವುದನ್ನು ನಾವು ನೋಡಬಹುದು. ಈ ಪಟ್ಟಿಯಲ್ಲಿ ರಷ್ಯಾ, ಕ್ಯೂಬಾ, ಇರಾನ್, ಇರಾಕ್, ಅರ್ಜೆಂಟೈನಾ, ಜಾರ್ಜಿಯಾ, ನೇಪಾಳ ಹೀಗೆ ಅನೇಕ ರಾಷ್ಟ್ರಗಳು ಪಾಶ್ಚಿಮಾತ್ಯರ ಆರ್ಥಿಕ ನಿರ್ಬಂಧಕ್ಕೊಳಗಾಗಿವೆ.

ಇಪ್ಪತ್ತೊಂದನೆಯ ಶತಮಾನದ ಆದಿಯಲ್ಲಿ ಸಮಾಜವಾದದ ಭದ್ರಬುನಾದಿಯ ಮೇಲೆ ನಿರ್ಮಿಸಲಾಗಿದ್ದ ಸೋವಿಯತ್ ಒಕ್ಕೂಟವು ೧೯೯೦ರಲ್ಲಿ ತನ್ನ ಅಸ್ತಿತ್ವವನ್ನು ಕಳೆದು ಕೊಂಡದ್ದು ದುಃಖಕರ ಸಂಗತಿಯಾಗಿದೆ. ಅಂದಿನ ಅಧ್ಯಕ್ಷ ಮಿಖಾಯಲ್ ಗೋರ್ಬಚೋವ್ ಆ ರಾಷ್ಟ್ರದಲ್ಲಿ ದೊರಕುವ ನೈಸರ್ಗಿಕ ಅನಿಲ ಕ್ಷೇತ್ರವನ್ನು ಅನಿರ್ಬಂಧಿತವಾಗಿ ಖಾಸಗೀ ಒಡೆತನಕ್ಕೆ ಒಪ್ಪಿಸಿದುದು ಒಂದು ದುರಂತ. ಆ ರಾಷ್ಟ್ರದ ಜನರ ಬಾಳನ್ನು ಹಾಳುಗೆಡವಿದ ಈ ಕೃತ್ಯವು ಜಾಗತೀಕರಣದ ಚಿತ್ರಪಟದಲ್ಲಿ ಈಗಲೂ ರಾರಾಜಿಸುತ್ತಿದೆ. ಈಗ ರಷ್ಯಾದ ಮೇಲೆ ಅಭಿವೃದ್ಧಿ ಹೊಂದಿರುವ ಐರೋಪ್ಯ ಹಾಗೂ ಪಾಶ್ಚಿಮಾತ್ಯ ರಾಷ್ಟ್ರಗಳು ಅನೇಕ ರೀತಿಯಲ್ಲಿ ನಿರ್ಬಂಧಗಳನ್ನು ಹೇರಿವೆ. ಈಗ ರಷ್ಯಾದಿಂದ ರಫ್ತಾಗುವ ಸರಕು-ಸೇವೆಗಳಿಗೆ ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ಬೆಲೆ ಇಲ್ಲದಂತಾಗಿದೆ.

ಇರಾನ್ ಮತ್ತು ಇರಾಕ್‌ನಲ್ಲಿ ಉತ್ಪಾದನೆಯಾಗುವ ಕಚ್ಚಾತೈಲವನ್ನು ಅಮೆರಿಕಾವು ತನ್ನ ಸ್ವಾಧೀನಕ್ಕೆ ತೆಗೆದುಕೊಳ್ಳಲು ತನ್ನ ಸಶಸ್ತ್ರ ಪಡೆಗಳನ್ನು ನೇಮಿಸಿ ಅಂತರರಾಷ್ಟ್ರೀಯ ಕಚ್ಚಾ ತೈಲ ಬೆಲೆಯನ್ನು ಪ್ರತಿ ಬ್ಯಾರೆಲ್‌ಗೆ ೫೦ ಡಾಲರ್‌ನಿಂದ ೬೦ ಡಾಲರ್‌ಗೆ ಹೆಚ್ಚಿಸಿ ಲಾಭ ಪಡೆಯುತ್ತಿದೆ.

ಜಾಗತಿಕ ಮಟ್ಟದಲ್ಲಿ ಅನೇಕ ವ್ಯಾಪಾರ ನಿರ್ಬಂಧಗಳನ್ನು ಹೇರಿರುವ ರಾಷ್ಟ್ರವೆಂದರೆ ಅಮೆರಿಕಾ. ಇದು ಪ್ರಪಂಚದ ಸುಮಾರು ಶೇಕಡಾ ೮೦ರಷ್ಟು ವ್ಯಾಪಾರ ವಹಿವಾಟನ್ನು ವಾರ್ಷಿಕವಾಗಿ ನಡೆಸುತ್ತದೆ ಎಂದು ಅಂದಾಜು ಮಾಡಲಾಗಿದೆ. ಕ್ಯೂಬಾ ತನ್ನ ಕಬ್ಬು, ಸಕ್ಕರೆ ಹಾಗೂ ಹೊಗೆಸೊಪ್ಪಿನ ಉತ್ಪಾದನೆಯಲ್ಲಿ ವಿಶ್ವ ಮಾರುಕಟ್ಟೆಯ ಮುಂಚೂಣಿಯಲ್ಲಿದೆ. ಇಲ್ಲಿನ ನಾಗರಿಕರು ಉತ್ತಮ ಕೃಷಿಕರು ಹಾಗೂ ಅಲ್ಲೇ ದೊರೆಯುವ ಸಂಪನ್ಮೂಲಗಳಿಂದ ಅತಿ ಹೆಚ್ಚಿನ ಉತ್ಪಾದನೆ ಮಟ್ಟವನ್ನು ಸಾಧಿಸಿದ್ದಾರೆ. ಇಲ್ಲಿ ದೊರೆಯುವ ವೈದ್ಯಕೀಯ ಚಿಕಿತ್ಸಾ ಸೌಲಭ್ಯವು (ಕ್ಯೂಬಾ ಸರಕಾರದ ಏಕಸ್ವಾಮ್ಯ) ವಿಶ್ವದ ಯಾವುದೇ ರಾಷ್ಟ್ರದಲ್ಲಿ ದೊರೆಯುವುದಿಲ್ಲವೆಂದರೆ ಆಶ್ಚರ್ಯವಾಗಬಹುದು. ಆದರೆ ಕ್ಯೂಬಾಕ್ಕೆ ಯಾವುದೇ ತೆರನಾದ ಅತ್ಯಾಧುನಿಕ ಚಿಕಿತ್ಸಾ ವಿಧಾನವನ್ನು ಬೇರೆ ರಾಷ್ಟ್ರಗಳು ನೀಡಕೂಡದೆಂದು ಅಮೆರಿಕಾವು ಅಡ್ಡಗಾಲು ಹಾಕುತ್ತಿದೆ. ಹೀಗೆ ಮಾಡುವುದರಿಂದ ಕ್ಯೂಬಾವು ಅಮೆರಿಕಾಕ್ಕೆ ಮಣಿದು ತಾಳಹಾಕುತ್ತದೆ ಎಂಬುದು ಅಧ್ಯಕ್ಷ ಬುಷ್‌ನ ಕನಸು. ಕ್ಯೂಬಾದ ಅಧ್ಯಕ್ಷ ಫಿಡೆಲ್ ಕ್ಯಾಸ್ಟ್ರೊ ಈ ಕನಸನ್ನು ಮಣ್ಣುಗೂಡಿಸುವುದು ಖಂಡಿತ.

ಇತ್ತೀಚಿನ ದಿನಗಳಲ್ಲಿ ಕೆಲವು ರಾಷ್ಟ್ರಗಳು ಒಂದು ತೆರನಾದ ಪ್ರತೀಕಾರದ ವ್ಯಾಪಾರ ನೀತಿಯನ್ನು ಅನುಸರಿಸು ತ್ತಿವೆಯೆಂದರೆ ತಪ್ಪಾಗಲಾರದು. ಒಂದು ಕಾಲಕ್ಕೆ ಜಾರ್ಜಿಯಾ ಪ್ರಾಂತ್ಯವು ರಷ್ಯಾ ಒಕ್ಕೂಟದ ಭಾಗವಾಗಿದ್ದು, ಎಂಬತ್ತರ ದಶಕದಲ್ಲಿ ಪ್ರಜಾತಂತ್ರಕ್ಕಾಗಿ ಎದ್ದ ಅಲೆ ಅಲ್ಲಿನ ಆಡಳಿತದ ಪತನಕ್ಕೆ ಕಾರಣವಾಯಿತು. ಈಗ ರಷ್ಯಾವು ಜಾರ್ಜಿಯಾ ಮೇಲೆ ಆರ್ಥಿಕ ನಿರ್ಬಂಧವನ್ನು ವಿಧಿಸಿದೆ. ಜಾರ್ಜಿಯಾ ದುರ್ಬಲ ರಾಷ್ಟ್ರವೆಂದು ರಷ್ಯಾ ಭಾವಿಸಬಾರದೆಂದು ಅಧ್ಯಕ್ಷ ಮಿಖಾಯಿಲ್ ಸಾಕಶ್ವಿಲ್ಲಿ ತೀವ್ರವಾಗಿ ಟೀಕಿಸಿದ್ದಾರೆ. ಇತ್ತ ರಷ್ಯಾದ ಅಧ್ಯಕ್ಷ ವ್ಲಾಡಿಮಿರ್ ಪುಟಿನ್ ನಿರ್ಬಂಧವನ್ನು ಕಟ್ಟುನಿಟ್ಟಾಗಿ ಜಾರಿಗೊಳಿಸುವಂತೆ ಆದೇಶಿಸಿದ್ದಾರೆ. ರಸ್ತೆ, ರೈಲು, ವಿಮಾನ ಹಾಗೂ ಎಲ್ಲಾ ಸಂಪರ್ಕವನ್ನು ಕಡಿದುಹಾಕಲಾಗಿದೆ. ರಷ್ಯಾದಲ್ಲೇ ಕನಿಷ್ಠ ಒಂದು ಲಕ್ಷ ಜಾರ್ಜಿಯನ್ನರಿದ್ದಾರೆ. ಈ ಜನರು ಜಾರ್ಜಿಯಾದಲ್ಲಿರುವ ತಮ್ಮ ಕುಟುಂಬಗಳಿಗೆ ವಾರ್ಷಿಕ ಸರಿಸುಮಾರು ೨ ಲಕ್ಷ ಬಿಲಿಯನ್ ಡಾಲರುಗಳಷ್ಟು ಹಣ ಕಳುಹಿಸುತ್ತಾರೆ. ಈ ಮೊತ್ತ ಜಾರ್ಜಿಯಾದ ವಾರ್ಷಿಕ ಆಯವ್ಯಯಕ್ಕೆ ಸಮನಾಗಿರುತ್ತದೆ. ಸೋಜಿಗದ ಸಂಗತಿಯೆಂದರೆ, ಇಲ್ಲಿಯೂ ಕೂಡ ಅಮೆರಿಕಾದ ಹಸ್ತಕ್ಷೇಪವಿದೆ. ಈ ವಲಯದಲ್ಲಿ ದೊರಕುವ ತೈಲ ಮತ್ತು ಅನಿಲ ಸಂಪನ್ಮೂಲಗಳ ಮೇಲೆ ರಷ್ಯಾದ ಹಿಡಿತವನ್ನು ತಪ್ಪಿಸಲು ಅಮೆರಿಕಾ ಈ ಹೊಸ ರಾಷ್ಟ್ರಗಳ ಜೊತೆಗೆ ಸ್ನೇಹ ಮಾಡುತ್ತಿದೆ.

ಜಾಗತಿಕ ಮಟ್ಟದಲ್ಲಿ ಅಂತರರಾಷ್ಟ್ರೀಯ ವ್ಯಾಪಾರವು ಎಲ್ಲಾ ರಾಷ್ಟ್ರಗಳ ಅಭಿವೃದ್ಧಿಗೆ ಅನಿವಾರ್ಯವಷ್ಟೇ ಅಲ್ಲದೆ ಅವಶ್ಯಕವೂ ಆಗಿದೆ. ಆದರೆ ಈ ಹಂತದಲ್ಲಿ ಎಲ್ಲಾ ರಾಷ್ಟ್ರಗಳ ಆರ್ಥಿಕ ಮಟ್ಟವು ಒಂದೇ ತೆರನಾಗಿಲ್ಲದಿರುವ ಕಾರಣ ಯಾವ ರಾಷ್ಟ್ರವು ಆರ್ಥಿಕವಾಗಿ ಬಲಿಷ್ಠವಾಗಿರುತ್ತದೆಯೊ ಅದು ಇನ್ನುಳಿದ ರಾಷ್ಟ್ರಗಳ ಮೇಲೆ ತನ್ನ ಪ್ರಭುತ್ವವನ್ನು ಸ್ಥಾಪಿಸಿ ತನ್ನ ಆಶಯಕ್ಕನುಗುಣವಾಗಿ ನಡೆದುಕೊಳ್ಳದಿರುವಾಗ ವ್ಯಾಪಾರ ನಿರ್ಬಂಧಗಳನ್ನು ವಿಧಿಸಿ ಗುಲಾಮರ ಹಾಗೆ ನೋಡುವ ಪ್ರವೃತ್ತಿಯು ಸಾಮಾನ್ಯವಾದ ದೃಶ್ಯವಾಗಿದೆ. ಆದರೆ ಅಭಿವೃದ್ಧಿಶೀಲ ರಾಷ್ಟ್ರಗಳು ಮೊದಲು ಆಂತರಿಕ, ಆರ್ಥಿಕ, ಸಾಮಾಜಿಕ ಹಾಗೂ ರಾಜಕೀಯ ರಂಗಗಳಲ್ಲಿ ಹೆಚ್ಚು ಜವಾಬ್ದಾರಿಯುತವಾಗಿ ನಡೆದುಕೊಳ್ಳುವುದು ಅವಶ್ಯಕ. ಪಾಶ್ಚಿಮಾತ್ಯ ಹಾಗೂ ಐರೋಪ್ಯ ಸಿದ್ಧಾಂತಗಳನ್ನನುಸರಿಸಿ ಆ ಅಂಶಗಳನ್ನು ತಮ್ಮ ಯೋಜನೆಗಳಲ್ಲಿ ಅಳವಡಿಸಿ ಕಾರ್ಯಪ್ರವೃತ್ತರಾಗುವುದು ಯಾವುದೇ ಕಾಲಕ್ಕೂ ಸಮಂಜಸವಲ್ಲ. ಆಂತರಿಕವಾಗಿ ದೊರಕುವ ನೈಸರ್ಗಿಕ ಸಂಪನ್ಮೂಲಗಳನ್ನು, ಉತ್ತಮ ಮಾನವ ಮತ್ತು ಉತ್ಪಾದನಾ ತಾಂತ್ರಿಕತೆಯ ಆಧಾರದ ಮೇಲೆ ಸ್ವಾವಲಂಬನೆ ಸಾಧಿಸುವ ನಿಟ್ಟಿನಲ್ಲಿ ಶ್ರಮಿಸುವುದು ಸೂಕ್ತ. ಅತಿಯಾಗಿ ವಿದೇಶಿ ಒತ್ತಡಕ್ಕೆ ಮಣಿಯುವುದು ರಾಷ್ಟ್ರದ ಒಟ್ಟು ಅಭಿವೃದ್ಧಿಗೆ ಕಂಟಕ ಪ್ರಾಯ ವಾಗುತ್ತದೆ. ಅತಿ ಶೀಘ್ರದಲ್ಲಿ ಅತಿ ಹೆಚ್ಚು ಅಭಿವೃದ್ಧಿಗೈಯುವ ಮಹದಾಸೆಯನ್ನು ಕೈಬಿಟ್ಟು ಅಭಿವೃದ್ಧಿಹೊಂದಿದ ರಾಷ್ಟ್ರಗಳ ಜೊತೆ ಹುಚ್ಚು ಓಟಕ್ಕೆ ನಿಲ್ಲುವುದು ಬುದ್ಧಿವಂತಿಕೆಯ ಲಕ್ಷಣವಲ್ಲ. ಈ ಹಾದಿಯಲ್ಲಿ ಎಲ್ಲಾ ರಾಷ್ಟ್ರಗಳೂ ಒಂದಾಗಿ ಶಾಂತಿಯುತವಾದ ಹಾಗೂ ಆರೋಗ್ಯಕರ ಪೈಪೋಟಿಯನ್ನು ಅಂತರರಾಷ್ಟ್ರೀಯ ನೀತಿಯನ್ನಾಗಿಸಿಕೊಂಡು ಮುಂದುವರೆಯುವುದರಲ್ಲಿ ಅಭಿವೃದ್ಧಿಯನ್ನು ಸಾಧಿಸಬೇಕು. ಈ ನಿಟ್ಟಿನಲ್ಲಿ ನಾವು ಕಾರ್ಯಪ್ರವೃತ್ತರಾಗೋಣ.

ಬಿ. ಎಸ್. ವೇಣುಗೋಪಾಲ್
ಸಂಖ್ಯೆ ೪೨೫, ೮ನೇ ಮುಖ್ಯರಸ್ತೆ, ತ. ರಾ. ಸುಬ್ಬರಾವ್ ನಗರ, ಹನುಮಂತನಗರ, ಬೆಂಗಳೂರು - ೧೯

# ಚಿಗುರೊಡೆಯದ ಚಾರ್ವಾಕ ದರ್ಶನ



**ಲೋ**ಕಾಯತ ಎಂದು ಪ್ರಖ್ಯಾತಿ ಪಡೆದು ಉದಾತ್ತ ಚಿಂತನೆಗೆ ಹಚ್ಚಿದ ಸಿದ್ಧಾಂತವೆಂದರೆ ಚಾರ್ವಾಕ ದರ್ಶನ. ಭಾರತೀಯ ಪಾರಂಪರಿಕ ದರ್ಶನಗಳಲ್ಲಿ ತನ್ನದೇ ಆದ ನೆಲೆಬೆಲೆಯನ್ನು ತಂದುಕೊಂಡಿರುವ ಈ ತತ್ವವು, ತುಂಬಾ ಪ್ರಾಚೀನವಾಗಿದ್ದು ವೈಚಾರಿಕತೆಯ ನೆಲೆಗಟ್ಟಿನ ಮೇಲೆ ಅಸ್ತಿತ್ವಕ್ಕೆ ಬಂದಿದೆ. ಚಾರ್ವಾಕ ಮತವು ಐತಿಹಾಸಿಕವಾದದ್ದು ಎನ್ನುವುದಕ್ಕೆ ಬೌದ್ಧ, ಜೈನ, ರಾಮಾಯಣ, ಮಹಾಭಾರತ, ಬೃಹದಾರಣ್ಯಕ ಹಾಗೂ ಕಠೋಪನಿಷತ್ತುಗಳಲ್ಲಿ ದೊರಕುವ ಪ್ರಮುಖ ಅಂಶಗಳೇ ಸಾಕ್ಷ್ಯಾಧಾರಗಳಾಗಿವೆ.

ನಮ್ಮ ದಾರ್ಶನಿಕ ಪಂಡಿತರು ಚಾರ್ವಾಕ ತತ್ವದ ಬಗ್ಗೆ ವಿವಿಧ ರೀತಿಯಲ್ಲಿ ಅರ್ಥೈಸಿದ್ದಾರೆ. ಚರ್ವ (ಭೋಜನ ಮಾಡು) ಚರ್ವಣ ಎಂಬ ಪದದಿಂದ ಚಾರ್ವಾಕವಾಗಿ ಮಾರ್ಪಟ್ಟಿದೆ ಎಂದು ಕೆಲವರು ಹೇಳಿದರೆ, ಬೃಹಸ್ಪತಿಯ ಶಿಷ್ಯನಾದ ಚಾರ್ವಾಕನಿಂದ ಈ ದರ್ಶನ ಬೆಳಕು ಕಂಡಿತೆಂದು ಮತ್ತೆ ಕೆಲವರು ವಾದಿಸುತ್ತಾರೆ. ಕೆಲವರ ಅಭಿಪ್ರಾಯದಂತೆ ಪುಣ್ಯ ಪಾಪಗಳೆನ್ನುವ ಪರೋಕ್ಷ ವಸ್ತುಗಳನ್ನು ಅಗಿದು (ಚರ್ವಣ) ಹುಡಿಮಾಡಿದ್ದರಿಂದ ಚಾರ್ವಾಕವಾಗಿದೆಯೆಂದು ವಿವರಿಸಿದರೆ, ಚಾರು+ವಾಕ್=ಚಾರ್ವಾಕ ಅಂದರೆ ಸುಂದರವಾದ ಮಾತೆಂದು ಇನ್ನೂ ಕೆಲವರು ಅಭಿಪ್ರಾಯ ಪಡುತ್ತಾರೆ. ಮತ್ತೊಂದು ವಾದದ ಪ್ರಕಾರ ಲೋಕದಲ್ಲಿ ಕಾಣುವ ಪ್ರಪಂಚದ ಸತ್ಯದೃಶ್ಯಗಳನ್ನು ಅನುಕರಣೆ ಮಾಡಿದ್ದು ತತ್ಸಂಬಂಧವಾಗಿ ಈ ಹೆಸರು ಬಂತೆಂದು ಹೇಳುತ್ತಾರೆ. ಏನೇ ಆದರೂ ಲೋಕಾಯತ ಮತವು ವ್ಯಾಪಕವಾಗಿ ಪ್ರಸಾರವಾಗಿ ಧಾರ್ಮಿಕ ವಲಯದಲ್ಲಿ ತಳಮಳವನ್ನುಂಟುಮಾಡಿರುವುದು ಆಶ್ಚರ್ಯಕರವಾದ ಸಂಗತಿ.

ಧಾರ್ಮಿಕ ಚಿಂತಕರ ಪಾಲಿಗೆ ಅಪಥ್ಯವಾಗಿರುವ ಈ ತತ್ವವು ತುಂಬಾ ವ್ಯಾಪಕವಾದ ಟೀಕೆಗೊಳಗಾಗಿದೆ. ಆಸ್ತಿಕ ಬಳಗದ ಅಭಿಪ್ರಾಯದಂತೆ ಚಾರ್ವಾಕ ಮತವು ಹೀನಾಯವಾದ ಮತವಾಗಿದ್ದು, ಅದು ಮಾನವನನ್ನು ಆಪತ್ತಿಗೆ ಸಿಲುಕಿಸುತ್ತದೆ, ವ್ಯಕ್ತಿಯನ್ನು ದೇವರು ದೈವತ್ವವನ್ನು ಪ್ರಶ್ನಿಸುವಂತೆ ಪ್ರೇರೇಪಣೆ ನೀಡುತ್ತದೆ. ಅದೊಂದು ನಾಸ್ತಿಕ ವರ್ಗದ ವಿತಂಡವಾದಿಗಳ ವಾದವೆಂದು ಬಾಣಂತಿ ಬೆಕ್ಕಿನಂತೆ ಅರಚುತ್ತಾರೆ. ಪ್ರಶ್ನಾತೀತವೆನಿಸಿದ್ದ ಕಾಲದಲ್ಲಿ ಪುರಾಣಗಳು, ವೇದ ಉಪನಿಷತ್ತುಗಳು ಉಚ್ಛ್ರಾಯ ಸ್ಥಿತಿಯಲ್ಲಿರುವ ಹಂತದಲ್ಲಿ ಚಾರ್ವಾಕರು ಆಧ್ಯಾತ್ಮಿಕ ವೈದಿಕ-ಅವೈದಿಕ ಬ್ರಾಹ್ಮಣ-ಪುರೋಹಿತ ವರ್ಗಗಳಿಗೆ ದುಃಸ್ವಪ್ನವಾಗಿದ್ದರಲ್ಲದೆ ಸಾಮಾನ್ಯ ಜನರಲ್ಲಿ ಮನೆಮಾಡಿಕೊಂಡಿದ್ದ ಮೌಢ್ಯದ ಅಂಶಗಳಾದ ಸ್ವರ್ಗ-ನರಕ, ಪಾಪ-ಪುಣ್ಯ, ದೇವರು-ಧರ್ಮ ಮುಂತಾದವುಗಳನ್ನು ಗಂಭೀರವಾಗಿ ಪ್ರಶ್ನಿಸಿ ಖಂಡಿಸಿದ್ದಾರೆ. ಚಾರ್ವಾಕರ ಚಾಟಿ ಏಟಿನಂತಹ ಪ್ರಶ್ನೆಗಳಿಗೆ ಸಮರ್ಪಕವಾದ ಉತ್ತರ ನೀಡದೆ ತೊಳಲಾಡಿದ ಧರ್ಮಸ್ಥಾಪಕರು, ಮತಸ್ಥಾಪಕರು, ಆಧ್ಯಾತ್ಮಿಕ ಚಿಂತಕರು ಅವರ ವಾದವನ್ನು ಅತ್ಯಂತ ವ್ಯವಸ್ಥಿತವಾಗಿ ಚಿವುಟಿ ಹಾಕಲು ಪ್ರಯತ್ನಿಸಿದರು. ಚಾರ್ವಾಕರು ತಮ್ಮನ್ನು ಎಷ್ಟೇ ಟೀಕೆ ಮಾಡಿದರೂ ಎದೆಗುಂದದೆ ಧಾರ್ಮಿಕ ಸೋಗಲಾಡಿಗಳ ಬೂಟಾಟಿಕೆಯನ್ನು ಬಯಲಿಗೆಳೆದರು.

ಚಾರ್ವಕರ ವಾದದಂತೆ ಜಗತ್ತು ತನ್ನಷ್ಟಕ್ಕೆ ತಾನೇ ರಚನೆಯಾಗಿದೆ. ಅದನ್ನು ನಾಶಪಡಿಸುವುದಕ್ಕಾಗಲಿ, ಹುಟ್ಟಿಸುವುದಕ್ಕಾಗಲಿ ಯಾವುದೇ ವ್ಯಕ್ತಿ ಚೇತನ ವಸ್ತುವಿನ ಅಗತ್ಯವಿಲ್ಲ. ಅದು ತನ್ನ ಸ್ವಭಾವದಿಂದ ಹುಟ್ಟಿ ಬೆಳೆಯುತ್ತದೆ ಮತ್ತು ನಾಶವಾಗುತ್ತದೆ. ಇದಕ್ಕೆ ಸ್ವಭಾವವಾದವೆಂದು ಹೆಸರು. ವಸ್ತುಗಳ ಸ್ವಭಾವವೇ ಸಕಲ ವಿದ್ಯಮಾನಗಳಿಗೆ ಕಾರಣ. ಉದಾಹರಣೆಗೆ, ಅಗ್ನಿಯು ಉಷ್ಣ, ಜಲವು ಶೀತ, ಸಮಶೀತೋಷ್ಣವುಳ್ಳದ್ದು ಗಾಳಿ, ಇದೆಲ್ಲಾ ಯಾರಿಂದ ಹುಟ್ಟಿತು, ಹೇಗೆ ರಚನೆಯಾಯಿತು ? ಅದು ಸ್ವಭಾವ. ಇರುವಿಕೆಯಿಂದಲೇ ಎಲ್ಲವೂ ಆಗಿದೆ ಎಂದು ಹೇಳಲಾಗುತ್ತದೆ. ಇದೇ ಅಂಶವನ್ನೇ ನಮ್ಮ ಆಧುನಿಕ ವೈಜ್ಞಾನಿಕ ವಿಶ್ವ ನಿಯಮದ ಸಿದ್ಧಾಂತ ಒತ್ತಿ ಹೇಳುತ್ತದೆ.

ಮಾನವ ದೇಹ ಮತ್ತು ಚೈತನ್ಯಗಳ ಬಗ್ಗೆ ಚಾರ್ವಾಕರು ಇಂದಿನ ವೈದ್ಯಶಾಸ್ತ್ರಕ್ಕೆ ಸಮನಾದ ಸಿದ್ಧಾಂತವನ್ನೆ ಮಂಡಿಸಿದ್ದಾರೆ. ದೇಹಕ್ಕಿಂತ ಬೇರೆಯಾದ ಚೈತನ್ಯವಿಲ್ಲ. ಶರೀರವಿಲ್ಲದೆ ಆತ್ಮವಿಲ್ಲ. ಭೂಮಿ, ಜಲ, ತೇಜಸ್ಸು, ವಾಯು ಈ ನಾಲ್ಕು ಮೂಲಾಂಶಗಳಿಂದ ಅದು ರಚನೆಯಾಗುತ್ತದೆ. ಅನ್ನ ಪಾನಗಳಿಂದ ದೇಹದೊಳಗಿನ ಚೈತನ್ಯ ವೃದ್ಧಿಗೊಳ್ಳುತ್ತದೆ. ಅವುಗಳು ದೊರೆಯದಿದ್ದರೆ ಚೈತನ್ಯ ಕೃಶವಾಗಿ ನಶಿಸುವಿಕೆಯ ಹಂತ ತಲುಪುತ್ತದೆ. ಭೂತವಸ್ತುಗಳು ವಿಶಿಷ್ಟ ಪ್ರಮಾಣದಲ್ಲಿ ಸಮ್ಮಿಶ್ರಣಗೊಂಡಾಗ ಜರುಗುವ ಸ್ಥಿತಿಗತಿಯಂತೆ ಚೈತನ್ಯ ಮತ್ತು ಶರೀರಕ್ಕೆ ಸಂಬಂಧವಿದೆ. ಚೈತನ್ಯ ಬೇರೆಯಾಗಲಿ, ದೇಹ ಬೇರೆಯಾಗಲಿ ಇಲ್ಲ, ಆತ್ಮವೆ ದೇಹ, ದೇಹವೇ ಆತ್ಮ. ಅವೆರಡು ಒಂದೇ. ಒಂದನ್ನು ಬಿಟ್ಟು ಮತ್ತೊಂದಿಲ್ಲ. ಹಸಿರು ಬಣ್ಣದ ವಿಳ್ಯೆದೆಲೆ, ಕಂದುಬಣ್ಣದ ಅಡಿಕೆ, ಬಿಳಿ ಬಣ್ಣದ ಸುಣ್ಣ ಸೇರಿ ಅಗಿದಾಗ ಕೆಂಪು ರಸ ಉತ್ಪತ್ತಿಯಾಗುವಂತೆ, ಭೂತ ವಸ್ತುಗಳ ವಿಶಿಷ್ಟ ಪ್ರಮಾಣದ ರಾಸಾಯನಿಕ ಸಮ್ಮಿಶ್ರಣದ ಪ್ರಕ್ರಿಯೆಗಳ ಫಲವೇ ಚೈತನ್ಯ ಶರೀರದ ಸಂಬಂಧವಾಗಿದೆ.

ಲೋಕಾಯತ ಎಂದು ಪ್ರಖ್ಯಾತಿ ಪಡೆದು ಉದಾತ್ತ ಚಿಂತನೆಗೆ ಹಚ್ಚಿದ ಸಿದ್ಧಾಂತವೆಂದರೆ ಚಾರ್ವಾಕ ದರ್ಶನ. ಭಾರತೀಯ ಪಾರಂಪರಿಕ ದರ್ಶನಗಳಲ್ಲಿ ತನ್ನದೇ ಆದ ನೆಲೆಬೆಲೆಯನ್ನು ತಂದುಕೊಂಡಿರುವ ಈ ತತ್ವವು, ತುಂಬಾ ಪ್ರಾಚೀನವಾಗಿದ್ದು ವೈಚಾರಿಕತೆಯ ನೆಲೆಗಟ್ಟಿನ ಮೇಲೆ ಅಸ್ತಿತ್ವಕ್ಕೆ ಬಂದಿದೆ. ಚಾರ್ವಾಕ ಮತವು ಐತಿಹಾಸಿಕವಾದದ್ದು ಎನ್ನುವುದಕ್ಕೆ ಬೌದ್ಧ, ಜೈನ, ರಾಮಾಯಣ, ಮಹಾಭಾರತ, ಬೃಹದಾರಣ್ಯಕ ಹಾಗೂ ಕಠೋಪನಿಷತ್ತುಗಳಲ್ಲಿ ದೊರಕುವ ಪ್ರಮುಖ ಅಂಶಗಳೇ ಸಾಕ್ಷ್ಯಾಧಾರಗಳಾಗಿವೆ.

**ರಾಘೋಬಾ ಎಸ್. ಕಿರ್ಲೋಸ್ಕರ್**

## ಸುದ್ದಿಚಿತ್ರ

'ಹೊಸತು' ಸಮಾಲೋಚಕ ಮಂಡಲಿಯ ಸದಸ್ಯರಲ್ಲೊಬ್ಬರಾದ ಶ್ರೀ ಟಿ. ಆರ್. ಅನಂತರಾಮು ಕಳೆದ ತಿಂಗಳು ಪತ್ನಿ ಸಮೇತರಾಗಿ ಸ್ಪೈಯಿನ್ ಹಾಗೂ ಯೂರೋಪಿನ ಕೆಲವು ದೇಶಗಳಲ್ಲಿ ಪ್ರವಾಸ ಮಾಡಿ ಬಂದರು. ದಿನಾಂಕ : ೨೨-೯-೨೦೦೭ರಂದು 'ಹೊಸತು' ಕಚೇರಿಯಲ್ಲಿ ಏರ್ಪಡಿಸಿದ್ದ ಸಂತೋಷಕೂಟದಲ್ಲಿ ತಮ್ಮ ಪ್ರವಾಸದ ಅನುಭವಗಳನ್ನು ಹಂಚಿಕೊಂಡರು. ಚಿತ್ರದಲ್ಲಿ (ಎಡದಿಂದ ಬಲಕ್ಕೆ) ಶ್ರೀಮತಿ ಅನ್ನಪೂರ್ಣ ಅನಂತರಾಮು, ಶ್ರೀ ಟಿ. ಆರ್. ಅನಂತರಾಮು ಮತ್ತು ಅಧ್ಯಕ್ಷತೆ ವಹಿಸಿದ್ದ ಹಿರಿಯರಾದ ಶ್ರೀ ಎಚ್. ಎಸ್. ದೊರೆಸ್ವಾಮಿ.

ಅಪಕ್ವ ಮನಸ್ಸಿನ ವೇದಾಂತ ಪಂಡಿತರು ಹೇಳುವಂತೆ ದೇಹ ಸತ್ತ ಮೇಲೆ ಚೈತನ್ಯ ಬದುಕುಳಿದು ಬೇರೊಂದು ದೇಹವನ್ನು ಸೇರುತ್ತದೆ. ಅದು ನಿರಂತರ ದೇಹವನ್ನು ಬದಲಾಯಿಸುತ್ತದೆ ಎನ್ನುವ ವಾದದಲ್ಲಿ ಹುರುಳಿಲ್ಲ. ಅದು ಕೇವಲ ಒಂದು ಮಾನಸಿಕ ಭ್ರಮೆಯಾಗಿದೆ. ಚೈತನ್ಯ ದೇಹದೊಂದಿಗೆ ಹುಟ್ಟುತ್ತದೆ. ಅದು ಸತ್ತಾಗ ಚೈತನ್ಯ ಸಹ ಸಾಯುತ್ತದೆ. ಅದಕ್ಕೆ ಪ್ರತ್ಯೇಕವಾದ ಅಸ್ತಿತ್ವವಿಲ್ಲ ಮತ್ತು ಸುಟ್ಟು ಬೂದಿಯಾದ ಶರೀರಕ್ಕೆ ಪುನರಾಗಮನ, ಪುನರ್ಜನ್ಮವಿಲ್ಲ. ಅದು ಏನಿದ್ದರೂ ನಶ್ವರ ಎಂದು ಚಾರ್ವಾಕ ದರ್ಶನ ಅಭಿಪ್ರಾಯಪಡುತ್ತದೆ.

ವೇದ ಶಾಸ್ತ್ರ ಪುರಾಣಗಳ ಬಗ್ಗೆ ಚಾರ್ವಾಕರು ತುಂಬ ಭಿನ್ನವಾಗಿ ಅರ್ಥೈಸುತ್ತಾರೆ. ಅವುಗಳನ್ನು ರಚಿಸಿದವರು ಋಷಿ ಮುನಿಗಳಲ್ಲ, ಬದಲಾಗಿ ಭಂಡ, ಧೂರ್ತ, ನಿಶಾಚರ ದುಷ್ಟಬುದ್ಧಿಯ ವ್ಯಕ್ತಿಗಳು. ಯಾವುದೇ ಗಂಭೀರ ಚಿಂತಕನು, ಮಹಾನ್ ಋಷಿ ಮುನಿಗಳು ಇಂತಹ ಮೋಸ ವಂಚನೆಗೆ ಸಮನಾದ ಅಂಶಗಳನ್ನು ರಚಿಸುವುದಿಲ್ಲವೆಂದ ಅವರು, ಈ ಜಗತ್ತಿನ ಸೃಷ್ಟಿ ನಾಶ ಲಯ ಲೋಪಗಳೆಲ್ಲವೂ ಪರಮಾತ್ಮ, ದೇವರಿಂದ ನಡೆಯುತ್ತವೆ ಹಾಗೂ ಜಗತ್ತಿನ ಎಲ್ಲಾ ಆಗುಹೋಗುಗಳು ಅವನ ಲೀಲೆಗೆ ಸಂಬಂಧಿಸಿದ್ದು. ಅವನಿಲ್ಲದೆ ಒಂದು ಹುಲ್ಲುಕಡ್ಡಿಯೂ ಸಹ ಅಲುಗಾಡುವುದಿಲ್ಲ ಎಂದು ಹೇಳಿರುವ ವಾದ ಹುರುಳಿಲ್ಲದ್ದು. ಈ ಪ್ರಪಂಚದ ಸೃಷ್ಟಿಗೆ ಯಾವ ಪರಮಾತ್ಮನ, ದೇವರ ಚೈತನ್ಯದ ಲವಲೇಶವಿಲ್ಲ. ಹಿಂದೆ ಹೇಳಿದಂತೆ ಅದು ತನ್ನ ಸ್ವಭಾವದಿಂದ ತಾನೇ ನಡೆಯುತ್ತದೆ ಎಂದು ಲೋಕಾಯತರು ಅಭಿಪ್ರಾಯಪಡುತ್ತಾರೆ.

ಪುನರ್ಜನ್ಮ, ವೈಕುಂಠ, ಸ್ವರ್ಗ-ನರಕ ಇತ್ಯಾದಿ ಅಂಶಗಳನ್ನು ಮುಗ್ಧ ಜನರ ತಲೆಯಲ್ಲಿ ತುಂಬಿ ಅಸ್ತಿತ್ವದಲ್ಲಿಲ್ಲದ ಯಾವುದೋ ಒಂದು ಚೈತನ್ಯದ ಹೆಸರು ಹೇಳಿ ಗುಡಿ ಗುಂಡಾರ ಅಧ್ಯಾತ್ಮ ತಾಣಗಳನ್ನು ನಿರ್ಮಿಸಿ ಪೂಜೆ, ಭಜನೆ, ಹೋಮ-ಹವನ, ಜಪ-ತಪ, ಯಜ್ಞ-ಯಾಗ, ಕೀರ್ತನೆ-ಸಂಕೀರ್ತನೆ ಬೋಧಿಸುವುದು ರೋಗಗ್ರಸ್ತ ಮನಸ್ಸುಗಳ ಕೆಲಸವೇ ವಿನಾ ಬೇರೇನೂ ಅಲ್ಲ. ಇಂತಹ ಅರ್ಥರಹಿತ ಆಚರಣೆಗಳನ್ನು ಆಚರಿಸುವುದರಿಂದ, ವ್ಯಕ್ತಿಗಳಿಗಾಗಲಿ, ವಸ್ತುವಿಗಾಗಲಿ ಯಾವುದೇ ಪ್ರಯೋಜನವಿಲ್ಲ. ಇದರಿಂದ ಮುಗ್ಧ ಜೀವಿಗಳು ಸಂಕಷ್ಟಕ್ಕೆ ಸಿಲುಕಿ ಬಲಿಯಾಗುತ್ತಾರೆ ಎಂದು ವಾದಿಸಿದ ಚಾರ್ವಾಕರು ಪಂಡಿತರಿಗೆ ಕೆಲವು ತರ್ಕಗಳನ್ನು ಮುಂದಿಡುತ್ತಾರೆ. ಶ್ರಾದ್ಧದಲ್ಲಿ ಹಾಕಿದ ಪಿಂಡವು ಪರಲೋಕದಲ್ಲಿರುವ ನಮ್ಮ ಪಿತೃಗಳಿಗೆ ಮುಟ್ಟುತ್ತದೆ ಎನ್ನುವುದಾದರೆ ಅನ್ಯ ಊರಿನಲ್ಲಿರುವ ವ್ಯಕ್ತಿಯ ಹೆಸರು ಹೇಳಿ ತಾವು ಇರುವ ಸ್ಥಳದಿಂದಲೇ ಅನ್ನ ಪಾನ ಹಾಕಬಹುದಲ್ಲವೆ ? ಜ್ಯೋತಿಷ್ಟೋಮದಲ್ಲಿ ಸ್ವರ್ಗಕ್ಕೆ ಹೋಗಲೆಂದು ಪಶುಗಳನ್ನು ಕೊಂದರೆ, ಮನೆಯ ಹಿರಿಯನು ತನ್ನ ತಂದೆಯನ್ನೇಕೆ ಕೊಲ್ಲಬಾರದು ? ಸಮಾಜದಲ್ಲಿಯೇ ಹುಟ್ಟಿ ಸಮಾಜದಲ್ಲಿಯೇ ಬೆಳೆದು ಕೊನೆಗೆ ಅದರಲ್ಲಿಯೇ ಮರಣ ಹೊಂದುವ ಮಾನವನು, ಪರಲೋಕದಲ್ಲಿ ಮರಣಾನಂತರ ಸ್ವರ್ಗ ಸಿಗುತ್ತದೆಂದು, ಕೈವಲ್ಯ ಪ್ರಾಪ್ತಿಯಾಗುತ್ತದೆಂದು, ಇಹಲೋಕದಲ್ಲಿ ವ್ಯರ್ಥವಾಗಿ ದೇಹವನ್ನು ದಂಡಿಸುತ್ತ ಬದುಕನ್ನು ಸವೆಸುವುದು ಮೂರ್ಖತನದ ಪರಮಾವಧಿ. ಪರಿಶುದ್ಧವಾದ ಈ ವಿಶ್ವದಲ್ಲಿ ಸುಖಭೋಗವನ್ನು ಅಪರಾಧಿ ಮನೋಭಾವನೆಯ ಲವಲೇಶವಿಲ್ಲದೆ ಸವಿಯಬೇಕು. ನಶಿಸಿಹೋದ ದೇಹವು ಮತ್ತೆ ಎಂದೂ ಬರುವುದಿಲ್ಲ. ಬದುಕಿರುವಾಗಲೇ ಸುಖವಾಗಿ ಜೀವನ ನಡೆಸಬೇಕು ಎಂದು ವಿವರಿಸುತ್ತಾರೆ. ಈ ಹೇಳಿಕೆಯ ವಿಸ್ತೃತ ಅಂಶವನ್ನು ತಿರುಚಿರುವ ಅವರ ವಿರೋಧಿ ಗುಂಪಿನವರು ಚಾರ್ವಾಕರು ಸುಖಪಡುವುದಕ್ಕಾಗಿ ದುರ್ಮಾರ್ಗಗಳನ್ನು ಪ್ರೋತ್ಸಾಹಿಸುತ್ತಾರೆಂದು ಗೂಬೆ ಕೂರಿಸುತ್ತಾರೆ. ಇಲ್ಲಿ ನಾವು ಗಮನಿಸಬೇಕಾದ ಮುಖ್ಯ ಅಂಶವೆಂದರೆ ವಿಷ್ಣು ಪುರಾಣದಲ್ಲಿ ಕಳವು ಮಾಡಿಕೊಂಡುಬಂದಾದರೂ ಪಿತೃಗಳ ಶ್ರಾದ್ಧವನ್ನು ಮಾಡಬೇಕೆಂದು ಹೇಳಲಾಗಿದೆ. ಹಾಗೆಂದ ಮಾತ್ರಕ್ಕೆ ವಿಷ್ಣು ಪುರಾಣವು ಕಳವನ್ನು ಕಲಿಸುತ್ತದೆ ಎಂದು ಭಾವಿಸಿದರೆ ಹೇಗೆ ಅಸಹ್ಯವಾದೀತೊ ಹಾಗೆಯೇ ಚಾರ್ವಾಕರ ಸಾಲ ಮಾಡಿ ತುಪ್ಪ ತಿನ್ನಬೇಕೆನ್ನುವ ಮಾತೂ ಸಹ. ಯಾವುದೇ ಮಹಾಚಿಂತಕನು ಅನೀತಿ ದುರ್ಮಾರ್ಗಗಳನ್ನು ಬೋಧಿಸುವುದಿಲ್ಲ.

ಲೋಕಾತೀತವಾದ ವಿಚಾರಗಳು ಹಾಗೂ ಅಂತಹ ಅಂಶಗಳನ್ನು ಬಿಂಬಿಸುವ ಶಾಸ್ತ್ರ ಪುರಾಣ, ಪುಣ್ಯಕಥೆ, ವೈಕುಂಠ, ಕೈಲಾಸ, ಪರಲೋಕ ಶಕ್ತಿ-ದೇವರು, ಪಾಪ-ಪುಣ್ಯ ಇತ್ಯಾದಿ ಕುರಿತಾಗಿ ಊಹಿಸಿ, ಕಲ್ಪಿಸಿ ಅನುಮಾನಗಳನ್ನಾಧರಿಸಿ ಹೇಳುವ ಕಪೋಲಕಲ್ಪಿತ ಕಥೆಗಳನ್ನು ಸಾರಾಸಗಟಾಗಿ ತಳ್ಳಿಹಾಕಿದ ಚಾರ್ವಾಕರು ಜೀವನದ ಅಂತಿಮ ಗುರಿಯೆಂದರೆ ಅರ್ಥ ಮತ್ತು ಕಾಮಗಳ ಪ್ರಾಪ್ತಿಯಾಗಿದೆ ಎನ್ನುತ್ತಾರೆ. ಇಲ್ಲಿ ಕಾಮವೆಂದರೆ ಕೇವಲ ಸ್ತ್ರೀ-ಪುರುಷರ ನಡುವಿನ ಸಮಾಗಮವಲ್ಲ. ಆ ಚೌಕಟ್ಟಿನಲ್ಲಿ ಬರುವ ಒಂದು ಸಣ್ಣ ಅಂಶ ವಿಶಾಲವಾದ ಸಮುದ್ರದಲ್ಲಿ ಒಂದು ಹನಿ ನೀರು ಹೇಗೋ ಹಾಗೆ. ಇಡಿಯಾಗಿ ಹೇಳುವುದಾದರೆ ದೇಹದ ಇಂದ್ರಿಯಗಳಿಗೆ ತೃಪ್ತಿ ಕೊಡುವ, ಸುಖ ನೀಡುವ, ಸಮಗ್ರ ಮೊತ್ತ ಕಾಮದಲ್ಲಿ ಅಡಗಿದೆ. ತುಂಬು ಸುಖವು ಈ ವಿಶ್ವದಲ್ಲಿ ಎಲ್ಲೂ ಸಿಗುವುದಿಲ್ಲ. ಅದು ದುಃಖ ಮಿಶ್ರಿತವಾಗಿಯೇ ದೊರೆಯುತ್ತದೆ. ಹಾಗೆ ದುಃಖವಿದೆಯೆಂದು ಸುಖವನ್ನು ಹಾಳು ಮಾಡಿಕೊಳ್ಳಬಾರದು, ಮೀನಿನಲ್ಲಿ ಮುಳ್ಳಿದೆಯೆಂದು ಅದನ್ನು ತಿನ್ನದೆ ಎಸೆಯುವುದು, ಭಿಕ್ಷುಕರ ಕಾಟವೆಂದು ಅಡುಗೆಯನ್ನು ಮಾಡದೆ ಇರುವುದು, ಕಾಡುಪ್ರಾಣಿಗಳ ಕಾಟವೆಂದು ಹೊಲಕ್ಕೆ ಬೀಜವನ್ನು ಬಿತ್ತದೆ ಇರುವುದು ಶುದ್ಧ ಬೆಪ್ಪುತನ ಎಂದು ಚಾರ್ವಾಕರು ವಾದಿಸಿದ್ದಾರೆ.

ಚಾರ್ವಾಕರ ದೃಷ್ಟಿಯಲ್ಲಿ ಮೋಕ್ಷವು ಮರಣದಲ್ಲಿದೆ, ಅಂದರೆ ದೇಹದಲ್ಲಿ ಚೈತನ್ಯ ಇರುವವರೆಗೆ ಅದು ಭೋಗಮಯವಾಗಿರುತ್ತದೆ. ತನ್ನಿಮಿತ್ತ ಅದು ನಾನಾ ವಿಧದ ಕ್ಲೇಶಗಳನ್ನು ಎದುರಿಸಬೇಕಾಗುತ್ತದೆ. ಈ ಎಲ್ಲಾ ಸಂಕಷ್ಟಗಳಿಂದ ಅಂತಿಮ ಮೋಕ್ಷ ಹೊಂದಬೇಕೆಂದರೆ ದೇಹ ನಶಿಸಿ ಸಂಪೂರ್ಣ ನಾಶಹೊಂದುವುದಾಗಿದೆ, ಅರ್ಥಾತ್ ಸಾವಾಗಿದೆ.

ದೇವರು-ಧರ್ಮ, ಪೂಜಾರಿ-ಪುರೋಹಿತ, ಕರ್ಮ, ಪುನರ್ಜನ್ಮ, ಈಶ್ವರವಾದ, ಅಧ್ಯಾತ್ಮವಾದ ಮುಂತಾದವುಗಳನ್ನು ಕುರಿತು ಪ್ರಶ್ನೆ ಮಾಡದೆ ಬಾಯಿಮುಚ್ಚಿಕೊಂಡು ಬದುಕುತ್ತಿದ್ದ ಪ್ರಶ್ನಾತೀತ ಕಾಲದಲ್ಲಿ ಅವುಗಳನ್ನು ಪ್ರಶ್ನಿಸಿ, ಮೌಢ್ಯ ತುಂಬಿ ತಮ್ಮ ಬೇಳೆ ಬೇಯಿಸಿಕೊಳ್ಳುತ್ತಿದ್ದ ವ್ಯಕ್ತಿಗಳ ವ್ಯವಸ್ಥೆಯನ್ನು ಖಂಡಿಸಿ, ಅಪರಾಧಿ ಮನೋಭಾವನೆಯಿಂದ ತೊಳಲಾಟದ ಬದುಕನ್ನು ಸವೆಸುತ್ತಿದ್ದ ಮುಗ್ಧ ಜೀವಿಗಳಿಗೆ ಭರವಸೆಯ ಬೆಳಕನ್ನು ತುಂಬಿದ ಚಾರ್ವಾಕರ ಎದೆಗಾರಿಕೆ ಅತ್ಯಂತ ಉನ್ನತವಾದದ್ದು ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಆದರೆ ಕಾಲ ಕಳೆದಂತೆಲ್ಲಾ ಅಧ್ಯಾತ್ಮ, ದೈವಭಕ್ತಿ, ಭಾವನಾವಾದ ಮುಂತಾದ ಪ್ರಕ್ರಿಯೆಗಳಿಗೆ ಸಿಲುಕಿ ಚಾರ್ವಾಕ ಮತವು ಹಿನ್ನೆಲೆಗೆ ಸರಿಯಿತು.

ರಾಘೋಬಾ ಎಸ್. ಕಿರ್ಲೋಸ್ಕರ್
ಸಾ|| ಗೋಟ್ನಬಾಗ್ ಮಾಜಾಳಿ, ಕಾರವಾರ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ

# ಮಕ್ಕಳ ಸಾಹಿತ್ಯ
# ಪರಿಕಲ್ಪನಾತ್ಮಕ ನೆಲೆಗಳು



ಜಾತಕ ಕತೆಗಳು, ಪಂಚತಂತ್ರದ ಕತೆಗಳು, ಹಿತೋಪದೇಶ, ರಾಮಾಯಣ, ಮಹಾಭಾರತ, ಜನಪದ ಕತೆಗಳು, ಅಕ್ಬರ್-ಬೀರಬಲ್‌ನ ಕತೆಗಳು, ತೆನಾಲಿರಾಮನ ಕತೆಗಳು – ಹೀಗೆ ಮಕ್ಕಳ ಸಾಹಿತ್ಯಕ್ಕಿರುವ ದೀರ್ಘವಾದ ಒಂದು ಇತಿಹಾಸವನ್ನು ಗುರುತಿಸಬಹುದಾದರೂ ಭಾರತದ ಮತ್ತು ಕನ್ನಡದ ಸಂದರ್ಭದಲ್ಲಿ ಇಂಗ್ಲಿಷ್ ಶಿಕ್ಷಣದ ಔಪಚಾರಿಕ ಶಾಲಾವ್ಯವಸ್ಥೆ ಆರಂಭವಾದ ಬಳಿಕ ಅದರ ಚಹರೆಗಳು, ಉದ್ದೇಶಗಳು ಹೆಚ್ಚು ಸ್ಪಷ್ಟವಾದವು ಎನ್ನಬೇಕು.

ಪಂಜೆ ಮಂಗೇಶರಾಯರು, ಜಿ. ಪಿ. ರಾಜರತ್ನಂ, ಹೊಯ್ಸಳ, ಎಂ. ವಿ. ಸೀತಾರಾಮಯ್ಯ, ಮಚ್ಚಿಮಲೆ ಶಂಕರನಾರಾಯಣರಾಯರು, ಶಂ. ಗು. ಬಿರಾದಾರ, ಎ. ಕೆ. ರಾಮೇಶ್ವರ, ಕಂಚ್ಯಾಣಿ ಶರಣಪ್ಪ ಮುಂತಾದವರನ್ನು 'ಶಿಶು ಸಾಹಿತಿಗಳು', 'ಮಕ್ಕಳ ಸಾಹಿತ್ಯ ನಿರ್ಮಾಪಕರು' ಎಂದು ಗುರುತಿಸಲಾಗಿದೆ. ಆದರೆ ಇಲ್ಲಿರುವ ಮುಖ್ಯ ಪ್ರಶ್ನೆಗಳೆಂದರೆ ಮಕ್ಕಳು ಎಂದರೆ ಯಾರು ? ಮಕ್ಕಳ ಸಾಹಿತ್ಯ ಎಂದರೇನು ? ದೊಡ್ಡವರು ಮಕ್ಕಳಿಗಾಗಿ ಬರೆದ ಸಾಹಿತ್ಯವೆ ? ಮಕ್ಕಳ ಬಗ್ಗೆ ಬರೆದ ಸಾಹಿತ್ಯವೆ ? ಮಕ್ಕಳೇ ಮಕ್ಕಳಿಗಾಗಿ ಬರೆದ ಸಾಹಿತ್ಯವೆ ? ಮಕ್ಕಳು ತಮ್ಮ ಅನುಭವಗಳನ್ನು ನಿರೂಪಿಸಿದ ಸಾಹಿತ್ಯವೆ ? ಮಕ್ಕಳ ಸಾಹಿತ್ಯ ದೊಡ್ಡವರ ಸಾಹಿತ್ಯದಿಂದ ಭಿನ್ನವೆ ? ಮಕ್ಕಳ ಸಾಹಿತ್ಯ ಅನ್ನುವ ಪ್ರಭೇದ ಸರಿಯೆ ?

'ಮಕ್ಕಳ ಸಾಹಿತ್ಯ', 'ಮಕ್ಕಳ ಸಾಹಿತಿ' ಎಂಬುದು ಶೀರ ದುರದೃಷ್ಟಕರ ಹಾಗೂ ಅಪಾಯಕಾರಿ ಪದಪ್ರಯೋಗಗಳೆಂಬ ಐವನ್ ಸೌತಾಲ್ (೧೯೭೫) ಎಂಬ ಪ್ರಸಿದ್ಧ ಲೇಖಕ ಅಭಿಪ್ರಾಯಪಡುತ್ತಾನೆ. ಮಕ್ಕಳ ಸಾಹಿತ್ಯ ನಿರಪಾಯಕರವಾದದ್ದು. ಅದರಲ್ಲಿ ಸಂಘರ್ಷಗಳಿಲ್ಲ, ಬಿಕ್ಕಟ್ಟುಗಳಿಲ್ಲ, ತಾಕಲಾಟಗಳಿಲ್ಲ, ಮಕ್ಕಳ ಸಾಹಿತ್ಯದಲ್ಲಿ ಸಂಭ್ರಮ, ಸಂತಸ, ಸಮೃದ್ಧಿ, ಸಾಹಸ, ಅದ್ಭುತ ರಮ್ಯತೆಗಳಿಗೆ ಸ್ಥಾನ. ಅದು ಜೀವನದ ವಾಸ್ತವತೆಯಿಂದ ಕಲ್ಪನಾಲೋಕಕ್ಕೆ ಪಲಾಯನಮಾಡುವ ಒಂದು ಸಾಧನ. ಅಮೂರ್ತ ವಿಚಾರಗಳು ಹಾಗೂ ಸಾಮಾಜಿಕ ಸಮಸ್ಯೆಗಳಿಗೆ ಅದರಲ್ಲಿ ಎಡೆಯಿಲ್ಲ. ಮಕ್ಕಳ ತಲೆಯೊಳಕ್ಕೆ ಇಷ್ಟೇ ಪ್ರಮಾಣದಲ್ಲಿ ಸುರಿಯಬೇಕು ಎಂಬ ನಿರ್ಬಂಧಗಳಿರುವುದರಿಂದ ವಸ್ತು ಮತ್ತು ಆದರ ನಿರೂಪಣೆ, ಭಾಷಾಶೈಲಿ, ಪುಟಗಳು ಇತ್ಯಾದಿಗಳಿಗೆಲ್ಲ ಒಂದು ಮಿತಿಯಿದೆ. ಹೀಗಾಗಿ ಮಕ್ಕಳ ಸಾಹಿತ್ಯ ಎಂಬುದು ಒಂದು ಸಾಮಾನ್ಯೀಕರಣ ಎಂದು ಆತ ವಾದಿಸುತ್ತಾನೆ.

ಮಕ್ಕಳ ಸಾಹಿತ್ಯ ತುಂಬ ಗಂಭೀರವಾದ ಸಾಹಿತ್ಯವಲ್ಲ. ಅದು 'ಮೈನರ್' ಸಾಹಿತ್ಯ. ಅನುವಾದದ ಹಾಗೆ ಎರಡನೆಯ ದರ್ಜೆಯದು ಎಂಬ ಭಾವನೆ ನಮ್ಮಲ್ಲೂ ಪಶ್ಚಿಮದ ಜಗತ್ತಿನಲ್ಲೂ ಇದೆ. ಹೀಗಾಗಿ ಅನೇಕ ಗಂಭೀರ – ಪ್ರಮುಖ ಲೇಖಕರು ಮಕ್ಕಳ ಸಾಹಿತ್ಯದ ಕಡೆ ಕಣ್ಣೆತ್ತಿ ನೋಡಿಲ್ಲ. ಮಕ್ಕಳಿಗಾಗಿ ಏನನ್ನೂ ಬರೆದಿಲ್ಲ. ಮಕ್ಕಳಿಗಾಗಿ ಬರೆದರೆ ತಮ್ಮ ಸೃಷ್ಟಿಶೀಲತೆಯ ಬೆಲೆ ಕಡಿಮೆಯಾದೀತೆಂಬ ಭಯ ಅವರಿಗೆ. ಕನ್ನಡದ ಸಂದರ್ಭದಲ್ಲಿ ನವ್ಯ ಲೇಖಕರು ಮಕ್ಕಳ ಸಾಹಿತ್ಯದ ಸನಿಹವೂ ಸುಳಿಯಲಿಲ್ಲ ಎಂಬುದು ಗಮನಾರ್ಹ. ಮಕ್ಕಳ ಸಾಹಿತ್ಯದ ಉತ್ತಮ ಮಾದರಿಗಳು ಎಂದು ನಾವು ಗುರುತಿಸಬಹುದಾದವು ನವೋದಯ ಸಾಹಿತ್ಯ ಪಂಥದವರಿಂದ ಸೃಷ್ಟಿಯಾಗಿದೆ ಎಂಬುದು ಗಮನಾರ್ಹ. ದೊಡ್ಡವರಿಗಾಗಿ ಸಾಹಿತ್ಯ ರಚನೆ ಬಹಳ ಗಂಭೀರವಾದ ಕೆಲಸ. ಅದು ವಾಚಕ ವೃಂದವನ್ನು, ಅಪಾರ ಜನಪ್ರಿಯತೆಯನ್ನು ತಂದುಕೊಡುತ್ತದೆ; ಆದರೆ ಮಕ್ಕಳ ಸಾಹಿತ್ಯ ರಚನೆ ಅಲ್ಪ ಪ್ರತಿಭಾವಂತರ ಕ್ಷೇತ್ರ ಎಂದು ಭಾವಿಸುವುದು ತಪ್ಪು. ಟಾಲ್‌ಸ್ಟಾಯ್, ಟಾಗೋರ್, ಕುವೆಂಪು, ಕಾರಂತ, ಪಂಜೆ ಮಂಗೇಶರಾಯರು, ಜಿ. ಪಿ. ರಾಜರತ್ನಂ ಮೊದಲಾದವರು ಎಂದೂ ಹಾಗೆ ಭಾವಿಸಿದ್ದಿಲ್ಲ. ಮಕ್ಕಳಿಗಾಗಿ ಬರೆಯುವಾಗ ಅವರು ತಮ್ಮ ಲೇಖನಿಯನ್ನು ಮೊಂಡುಮಾಡಿದ್ದಿಲ್ಲ. ಮಕ್ಕಳಿಗಾಗಿ ಬರೆಯುವುದು ಅತ್ಯಂತ ಸಂತಸದ ಮತ್ತು ಸವಾಲಿನ ಕ್ರಿಯೆ ಎಂದೇ ಅವರು ನಂಬಿದ್ದರು. ಕನ್ನಡದಲ್ಲಿ ಈಚಿನ ದಿನಗಳಲ್ಲಿ ಎಚ್. ಎಸ್. ವೆಂಕಟೇಶಮೂರ್ತಿ, ಎನ್. ಎಸ್. ಲಕ್ಷ್ಮೀನಾರಾಯಣ ಭಟ್ಟ, ಸುಮತೀಂದ್ರ ನಾಡಿಗ, ವೈದೇಹಿ ಮೊದಲಾದವರು ಈ ಪರಂಪರೆಯನ್ನು ಮುಂದುವರಿಸಿಕೊಂಡು ಹೋಗುತ್ತಿದ್ದಾರೆ.

ಡಾ॥ ಮಹಾಬಲೇಶ್ವರ ರಾವ್

ಮಕ್ಕಳ ಸಾಹಿತ್ಯ, 'ದೊಡ್ಡವರ ಸಾಹಿತ್ಯ' ಇತ್ಯಾದಿ ವರ್ಗೀಕರಣಗಳು ಸಾಹಿತ್ಯ ಚರಿತ್ರಕಾರರ ಹಾಗೂ ವಿಮರ್ಶಕರ ಉತ್ಪಾದನೆಗಳು. ಅಧ್ಯಯನದ ಉದ್ದೇಶದಿಂದ ಹುಟ್ಟಿಕೊಂಡ ವರ್ಗೀಕರಣಗಳಷ್ಟೆ. ತೀರ ಗಂಭೀರವಾಗಿ ತೆಗೆದುಕೊಂಡರೆ ದೊಡ್ಡವರ ಸಾಹಿತ್ಯಕ್ಕಿಂತ ಮಕ್ಕಳ ಸಾಹಿತ್ಯ ಹೇಗೆ ಭಿನ್ನ ? ಲಕ್ಷಣಗಳೇನು ? ಎಂಬ ಪ್ರಶ್ನೆಗಳು ಹುಟ್ಟಿಕೊಳ್ಳುತ್ತವೆ. ಇಲ್ಲಿರುವುದು ಕೇವಲ ಸಾಹಿತ್ಯ. ಲೇಖಕ ಹಾಗೂ ಓದುಗರ ನಡುವಿನ ಸಂಬಂಧ ಮತ್ತು ಸರಿಯಾದ ಓದುಗನಿಗೆ ಸರಿಯಾದ ಗ್ರಂಥ ಒದಗಿಸುವ ಪ್ರಯತ್ನ ಅಷ್ಟೇ. ಮಕ್ಕಳ ಸಾಹಿತ್ಯ ಅಂದೊಡನೆ ಓದುವವರು ಚಿಕ್ಕವರು, ಆದುದರಿಂದ ಅನುಭವಗಳನ್ನೆಲ್ಲ ತೆಳುವಾಗಿ ಹೇಳಬೇಕು ಎಂದರ್ಥವಲ್ಲ. ಮಕ್ಕಳಿಗೆ ಅರ್ಥವಾಗುವುದಿಲ್ಲ; ಆದುದರಿಂದ ಅವರಿಗಾಗಿ ಬರವಣಿಗೆಯನ್ನು ಸರಳವಾಗಿಸಬೇಕು ಎಂದು ಭಾವಿಸಿ ಬರೆಯುವುದು ತಪ್ಪು. ಮಕ್ಕಳ ಸಾಹಿತ್ಯವೆಂದರೆ ನೀರು ಸಾರಲ್ಲ, ಅದು ಹೇಗಿರ ಬೇಕೆಂದರೆ ವ್ಯಕ್ತಿ ಪ್ರೌಢನಾದಾಗ ತಾನು ಬಾಲ್ಯದಲ್ಲಿ ಓದಿದ ಪುಸ್ತಕಗಳಿಗೆ ಮರಳಬೇಕು ಮತ್ತು ಅದರಿಂದ ಹೊಸ ಒಳನೋಟಗಳನ್ನು, ಹೊಸ ಆನಂದವನ್ನು ಗಳಿಸಬೇಕು. ಹೊಸ ಶೋಧವನ್ನು ನಡೆಸಬೇಕು. ಇದಕ್ಕೆ ಬದಲಾಗಿ ''ನೀವು ನನಗೆ ಮೋಸ ಮಾಡಿದಿರಿ. ನೀವು ನಿಮ್ಮ ಹೃದಯದಿಂದ ಬರೆಯಲಿಲ್ಲ ಎಂದು ಲೇಖಕನನ್ನು ದೂಷಿಸುವಂತಾಗಬಾರದು'' ಎಂದು ಸೋತಾಲ್ ಅಭಿಪ್ರಾಯಪಡುತ್ತಾನೆ.

ಕನ್ನಡದಲ್ಲಿ ಕುವೆಂಪು, ಬೇಂದ್ರೆಯಂಥ ಮಹಾಕವಿಗಳು 'ಬೊಮ್ಮನ ಹಳ್ಳಿಯ ಕಿಂದರಿ ಜೋಗಿ', 'ಕರಡಿ ಕುಣಿತ' ಮುಂತಾದ ರಚನೆಗಳ ಮೂಲಕ ಮಕ್ಕಳಿಗೆ ರಂಜನೆ, ಪರೋಕ್ಷ ಶಿಕ್ಷಣ ನೀಡುವುದರ ಜೊತೆ ಜೊತೆಗೆ ಹಿರಿಯರಿಗೆ ಆಧ್ಯಾತ್ಮಿಕ ಅನುಭವವನ್ನೂ ನೀಡಿದರು. ಹೀಗಾಗಿ ದೊಡ್ಡವರ ಸಾಹಿತ್ಯ ಹಾಗೂ ಮಕ್ಕಳ ಸಾಹಿತ್ಯದ ನಡುವೆ ಏನಾದರೂ ವ್ಯತ್ಯಾಸಗಳಿದ್ದರೆ ಅದು ಮಾಂತ್ರಿಕತೆ, ಚೋದ್ಯ ಮತ್ತು ಸರಳತೆಯ ಗಡಿರೇಖೆಗಳಷ್ಟೆ. ಆದುದರಿಂದ ಮಕ್ಕಳಿಗಾಗಿ ಬರೆಯುವುದು ಅರೆಕಾಲಿಕ ಕೆಲಸವಲ್ಲ. ಅದು ಒಟ್ಟಂದದಲ್ಲಿ ಮಗುವನ್ನು ನಮ್ಮೆದುರು ಅನಾವರಣಗೊಳಿಸುವ ಕ್ರಿಯೆ.

ನಿರೂಪಣಾಶಕ್ತಿ, ಅದ್ಭುತ ಕಲ್ಪನಾಶಕ್ತಿ, ವಾಸ್ತವಪ್ರಜ್ಞೆ, ಕರಾರುವಾಕ್ಕುತನ, ಕೌತುಕ ಹಾಗೂ ಕುತೂಹಲ ಕೆರಳಿಸುವ ತಂತ್ರಗಾರಿಕೆ, ಪಾರದರ್ಶಕ ಭಾಷಾಶೈಲಿ, ಉಪದೇಶಕ್ಕೆ ಕೈಹಾಕದಿರುವ ಪ್ರವೃತ್ತಿ, ಮಕ್ಕಳ ಅಂತರಂಗ ಅರಿತು, ಅವರ ಭಾವನಾತ್ಮಕ, ಬೌದ್ಧಿಕ ಅಗತ್ಯಗಳಿಗೆ ಸ್ಪಂದಿಸುವ ಸಾಮರ್ಥ್ಯ ಮತ್ತು ಮಗು ಸಹಜ ಮುಗ್ಧತೆ ಮುಂತಾದ ಗುಣಗಳಿಂದ ಕೂಡಿದ ಸಾಹಿತ್ಯವನ್ನು ಮಕ್ಕಳ ಸಾಹಿತ್ಯವೆನ್ನಬಹುದು. ಆದರೆ ಅದೇ ಕಾಲಕ್ಕೆ ಅದು ದೊಡ್ಡವರ ಸಾಹಿತ್ಯವಾಗಿಯೂ ಪರಿಣಮಿಸುತ್ತದೆ. ಬಾಲ್ಯದಲ್ಲಿ ಓದಿದ್ದನ್ನು ಮತ್ತೆ ಹೊಸ ಅನುಭವ

ಹಾಗೂ ಹೊಸ ಒಳನೋಟಗಳ ಬೆಳಕಿನಲ್ಲಿ ಪರಾಮರ್ಶಿಸಿ ಹೊಸ ಆನಂದಾನುಭೂತಿ ಗಳಿಸಲು ಪ್ರೇರಕವಾಗುತ್ತದೆ.

ಮುಖ್ಯವಾಗಿ ನಾವು ಕೇಳಿಕೊಳ್ಳಬೇಕಾದ ಪ್ರಶ್ನೆ 'ಮಕ್ಕಳು ಎಂದರೆ ಯಾರು ?' ಅದೊಂದು ಸಮಾನ ಸ್ವರೂಪದ ಮೊತ್ತವೇ ? ಮಕ್ಕಳು ಎಂಬುದನ್ನು ನಾವು ಏಕರೂಪದ ಸಮೂಹ ವಾಚಕದ ನೆಲೆಯಲ್ಲಿ ಪರಿಕಲ್ಪಿಸಿಕೊಂಡರೆ ಅಪಾಯಗಳು ಕಾದಿವೆ. ಮೂರು ವರ್ಷ ಪ್ರಾಯದಿಂದ ತೊಡಗಿ ೧೮-೧೯ರವರೆಗಿನ ಮಕ್ಕಳ ಗುಂಪನ್ನು ವಿದ್ವಾಂಸರು ಸುಮಾರು ಮೂರು ನಾಲ್ಕು ಗುಂಪುಗಳಾಗಿ ವಿಭಾಗಿಸುತ್ತಾರೆ. ಮೂರರಿಂದ ಆರರವರೆಗಿನ ಮಕ್ಕಳ ಗುಂಪಿಗಾಗಿ ರಚಿಸುವ ಸಾಹಿತ್ಯವನ್ನು 'ಶಿಶು ಸಾಹಿತ್ಯ'ವೆಂದೂ ಆರರಿಂದ ಹನ್ನೊಂದವರೆಗಿನ ಹರೆಯದ ಮಕ್ಕಳಿಗೆ ರಚಿತವಾದ ಸಾಹಿತ್ಯವನ್ನು 'ಬಾಲ ಸಾಹಿತ್ಯ'ವೆಂದೂ ಹನ್ನೊಂದರಿಂದ ಹದಿನಾಲ್ಕು-ಹದಿನಾರರವರೆಗಿನ ಹುಡುಗ ಹುಡುಗಿಯರಿಗಾಗಿ ಬರೆದ ಸಾಹಿತ್ಯವನ್ನು 'ಕಿಶೋರ ಸಾಹಿತ್ಯ'ವೆಂದೂ ಹದಿಹರೆಯದ ಉತ್ತರಾರ್ಧದಲ್ಲಿರುವವರಿಗಾಗಿ ನಿರ್ಮಾಣವಾಗುವ ಸಾಹಿತ್ಯವನ್ನು 'ಯುವ ಸಾಹಿತ್ಯ'ವೆಂದೂ ಕರೆಯಲಾಗುತ್ತದೆ.

ಗಮನಿಸಬೇಕಾದ ಅಂಶವೆಂದರೆ ಈ ಎಲ್ಲ ವರ್ಗಗಳಲ್ಲಿರುವ ಮಕ್ಕಳು ಬೆಳವಣಿಗೆ ಮತ್ತು ವಿಕಾಸದ ವಿವಿಧ ಹಂತಗಳಲ್ಲಿರುವವರು. ಅವರ ಆಸಕ್ತಿ, ಅಭಿರುಚಿ, ಸೃಷ್ಟಿಶೀಲತೆ, ಬುದ್ಧಿಶಕ್ತಿ, ಚಿಂತನಕ್ರಮ, ಅಭಿವ್ಯಕ್ತಿ, ಭಾಷಿಕ ಹಾಗೂ ಕಲ್ಪನಾಸಾಮರ್ಥ್ಯ, ಗ್ರಹಿಕೆ ಇತ್ಯಾದಿಗಳಲ್ಲಿ ಅಗಾಧವಾದ ಅಂತರಗಳಿವೆ. ಅಷ್ಟು ಮಾತ್ರವಲ್ಲದೆ ಒಂದು ಮಗುವಿನ ಬೆಳವಣಿಗೆ ಮತ್ತು ವಿಕಾಸದ ವಿವಿಧ ಹಂತಗಳಲ್ಲಿ ಆಲೋಚನೆ, ಸಂವೇದನೆ ಹಾಗೂ ಅಭಿವ್ಯಕ್ತಿ ಕ್ರಮಗಳಲ್ಲೂ ವ್ಯತ್ಯಾಸಗಳು ಕಂಡುಬರುತ್ತವೆ. ಉದಾಹರಣೆಗೆ, ಎಂಟರ ಹರೆಯದ ಬಾಲೆ ಮಳೆಯನ್ನು ಬಣ್ಣಿಸುತ್ತಾ ''ಮೇಲಿನಿಂದ ಕೆಳಕ್ಕೆ ಇಳಿಯುವ ಮಳೆ, ಕೆಳಗಿನಿಂದ ಮೇಲಕ್ಕೆ ಹೋಗದ ಮಳೆ'' ಎಂದು ಬರೆದರೆ ಅದೇ ಬಾಲೆ ಹದಿನಾಲ್ಕರ ಹರೆಯದಲ್ಲಿ ಮಳೆಗಾಲವನ್ನು ಬಣ್ಣಿಸುವುದು ಹೀಗೆ : ''ಅತ್ತಿಂದಿತ್ತ ಓಲಾಡುವ ಅಡಿಕೆ ಮರಗಳು ಮಳೆಯನ್ನು ಮತ್ತೆ ಮತ್ತೆ ಬಾ ಬಾ ಎಂದು ಕರೆಯುವಂತೆ ಭಾಸವಾಗುತ್ತಿತ್ತು. ಕತ್ತಲಲ್ಲಿ ಬೆಳಕಿನಂತೆ ಜಗಮಗಿಸುತ್ತಿರುವ ಮಿಂಚುಹುಳುಗಳ ಸಾಲು ದೂರದಲ್ಲಾರೋ ಹಣತೆಗಳನ್ನು ಹಿಡಿದುಕೊಂಡು ಬರುತ್ತಿರುವಂತೆ ಬೆರಗು ಹುಟ್ಟಿಸುತ್ತಿತ್ತು. ದಟ್ಟವಾದ ಕಾರ್ಮೋಡಗಳು ಕಂಬಳಿಯನ್ನು ಹೊದ್ದುಕೊಂಡ ಮನುಷ್ಯನಂತೆ ಕಾಣುತ್ತಿದ್ದವು.'' 'ಆದುದರಿಂದ ಮಕ್ಕಳು ಮತ್ತು ಮಕ್ಕಳ ಸಾಹಿತ್ಯ' ಏಕರೂಪದ ಶಿಲಾರಚನೆಯಾಗಲು ಸಾಧ್ಯವಿಲ್ಲ ಎಂಬ ಅರಿವು ಮಕ್ಕಳಿಗಾಗಿ ಬರೆಯುವವರಲ್ಲಿ ಇರುವುದು ಅಗತ್ಯವೆನಿಸುತ್ತದೆ.

'ಮಕ್ಕಳ ಸಾಹಿತ್ಯ' ಅನ್ನುವಾಗ ಇದು ಕೇವಲ ಓದು-ಬರೆಹ ಕಲಿಯುತ್ತಿರುವವರಿಗೆ, ವಿದ್ಯಾಲಯಗಳಲ್ಲಿ ವ್ಯಾಸಂಗ ಮಾಡುತ್ತಿರುವವರಿಗೆ ಮಾತ್ರ ಸೀಮಿತವೆ ? ಓದು-ಬರೆಹ ಬಾರದ ಮಕ್ಕಳಿಗಾಗಿ ಸಾಹಿತ್ಯ ಸೃಷ್ಟಿ ಸಾಧ್ಯವೆ ? ಹೇಗೆ ಸಾಧ್ಯ ? ಯಾವ ಮಾಧ್ಯಮ ? 'ಚಿನ್ನಾರಿಮುತ್ತ', 'ಕೇರ್ ಆಫ್ ಫುಟ್‌ಪಾತ್' ಮುಂತಾದ ಚಲನಚಿತ್ರಗಳು ಈ ಮಕ್ಕಳ ಪಾಲಿಗೆ 'ನೋಡುವ ಸಾಹಿತ್ಯ' ಆಗಲಾರವೆ ? ಎಂಬ ಪ್ರಶ್ನೆಗಳನ್ನು ಕೈಗೆತ್ತಿಕೊಂಡು ಯೋಚಿಸಬೇಕೆನಿಸುತ್ತದೆ.

ದೊಡ್ಡವರು ಮಕ್ಕಳಿಗಾಗಿ ಬರೆದ, ಮಕ್ಕಳ ಬಗ್ಗೆ ಬರೆದ ಸಾಹಿತ್ಯವನ್ನು ಮಕ್ಕಳ ಸಾಹಿತ್ಯವೆಂದು ಗ್ರಹೀತವಾಗಿಟ್ಟುಕೊಂಡು ಮುಂದುವರಿದರೆ ಮುಂದೆ ನಮಗೆ ಎದುರಾಗುವ ಪ್ರಶ್ನೆಗಳೆಂದರೆ – ಸಾಹಿತ್ಯವನ್ನು ಓದುವ ಮಕ್ಕಳು ಎಷ್ಟು ಮಂದಿ ? ಅವರ ಪ್ರತಿಕ್ರಿಯೆಗಳೇನು ? ಎಷ್ಟು ಮಂದಿ ಮಕ್ಕಳ ಸಾಹಿತಿಗಳು ಅವರ ಆ ಪ್ರತಿಕ್ರಿಯೆಗಳನ್ನು ಗಮನದಲ್ಲಿಟ್ಟುಕೊಂಡು ತಮ್ಮ ಬರವಣಿಗೆಯನ್ನು ಪರಿಷ್ಕರಿಸಲು ಯತ್ನಿಸಿದ್ದಾರೆ ? ಶಾಲಾ ಶಿಕ್ಷಣದಲ್ಲಿ ಮಕ್ಕಳ ಸಾಹಿತ್ಯಕ್ಕೆ ಯಾವ ಸ್ಥಾನ ಸಿಕ್ಕಿದೆ ?

ಪಠ್ಯಪುಸ್ತಕ ಆಧಾರಿತವೂ ಪರೀಕ್ಷಾ ಕೇಂದ್ರಿತವೂ ಆದ ಶಾಲಾ ಶಿಕ್ಷಣ ವ್ಯವಸ್ಥೆಯಲ್ಲಿ ವಿದ್ಯಾರ್ಥಿಗಳಲ್ಲಿ ಹಾಗೂ ಶಿಕ್ಷಕರಲ್ಲಿ ಓದುಗಾರಿಕೆಯ ಹವ್ಯಾಸ ಬಹಳ ಕಡಿಮೆ. ವಿದ್ಯುನ್ಮಾನ ಮಾಧ್ಯಮಗಳ ಭರಾಟೆಯಿಂದಾಗಿ ಟ್ಯೂಶನ್, ಹೋಂವರ್ಕ್, ಪರೀಕ್ಷೆಗಳಿಂದಾಗಿ ದಿನೇ ದಿನೇ ವಾಚನಾಭಿರುಚಿ ಕುಸಿಯುತ್ತಿದೆ. ಪುಸ್ತಕ ಪ್ರೀತಿ ಹಾಗೂ ಗ್ರಂಥಾಲಯ ಹವ್ಯಾಸ ಬೆಳೆಯುತ್ತಿಲ್ಲ. ಶಾಲೆಗಳಲ್ಲಿ ಮಕ್ಕಳಲ್ಲಿ ಓದುವ ಹವ್ಯಾಸ ರೂಢಿಸಲಿಕ್ಕೆ ಯೋಗ್ಯವಾದ ಗ್ರಂಥಾಲಯ ವ್ಯವಸ್ಥೆಯೇ ನಮ್ಮಲ್ಲಿಲ್ಲ. ಭಾಷಾ ಪಠ್ಯಪುಸ್ತಕಗಳಲ್ಲಿ ಒಂದು ಕಾಲಕ್ಕೆ ಕನ್ನಡದ ಮಕ್ಕಳ ಸಾಹಿತಿಗಳು ರಚಿಸಿದ ಪ್ರಾತಿನಿಧಿಕವೆನ್ನಬಹುದಾದ ಕತೆ, ಕವನ, ಹಾಡು ಇತ್ಯಾದಿಗಳಿಗೆ ಅವಕಾಶ ಕಲ್ಪಿಸಲಾಗುತ್ತಿತ್ತು. ಆದರೆ ಈಗ ಸಾಹಿತ್ಯಾಂಶ, ಭಾವಾಂಶ ಇತ್ಯಾದಿಗಳಿಗಿಂತಲೂ ಮುಖ್ಯವಾಗಿ ಅಸಾಹಿತ್ಯಕವಾದುದನ್ನು ಸಾಹಿತ್ಯೇತರ ಕಾರಣಗಳಿಗಾಗಿ ಪಠ್ಯಪುಸ್ತಕಗಳಲ್ಲಿ ತುರುಕುವ ಪ್ರವೃತ್ತಿ ಬೆಳೆದಿದೆ. ಸ್ವತಃ ವ್ಯಾಪಕ ಓದುಗಾರಿಕೆಯಿಲ್ಲದ ಶಿಕ್ಷಕರು ಮಕ್ಕಳಲ್ಲಿ ಓದುವ ಹವ್ಯಾಸ ರೂಢಿಸುವಲ್ಲಿ ವಿಫಲರಾಗುತ್ತಿದ್ದಾರೆ. ಹೀಗಿರುವಾಗ ದೊಡ್ಡವರು ಮಕ್ಕಳಿಗಾಗಿ ಬರೆದ ಸಾಹಿತ್ಯವನ್ನು ಓದಿ ಆನಂದಿಸುವ ಮಕ್ಕಳ ಅಂಕಿ-ಸಂಖ್ಯೆಗಳಾಗಲಿ, ಅವರ ಪ್ರತಿಕ್ರಿಯೆಗಳಾಗಲಿ, ಆ ಪ್ರತಿಕ್ರಿಯೆಗಳನ್ನು ಆಧರಿಸಿ ತಮ್ಮ ಬರವಣಿಗೆಯನ್ನು ಪುನರ್ವಿಮರ್ಶೆ ಮಾಡಿಕೊಂಡ ಲೇಖಕರ ಬಗೆಗಾಗಲಿ ನಮಗೆ ವಿಶೇಷ ಮಾಹಿತಿಗಳು ದೊರೆಯುವುದಿಲ್ಲ. ಮಕ್ಕಳ ಸಾಹಿತ್ಯ ಹೇಗಿರಬೇಕು ? ಹೇಗಿರಬಾರದು ? ಅಥವಾ ಅದಕ್ಕೆ ಪ್ರೋತ್ಸಾಹ ಸಾಲದೇ ಎಂಬ ಚರ್ಚೆಗಳೇ ಮುನ್ನೆಲೆಯಲ್ಲಿವೆ.

## ಧ್ಯಾನಸ್ಥ

ನೀ ದೂರ ಇರುವಾಗ
ಮಾತುಗಳ
ಸುರಿಮಳೆಯೇ ಸುರಿಯುವುದು
ನೀ ಎದುರು ಬಂದಾಗ
ಮಾತುಗಳ ಮಳೆ ಕರಗಿ
ಧ್ಯಾನಸ್ಥವಾಗುವುದು !

**ಅಕ್ಕಿ ಬಸವೇಶ**
ಉಪನಾಯಕನಹಳ್ಳಿ, ಬಳ್ಳಾರಿ ಜಿಲ್ಲೆ - ೫೮೩ ೨೧೨

''ಮಕ್ಕಳು ತಮಗಾಗಿ ಅಥವಾ ಪರರಿಗಾಗಿ ಬರೆಯಲಾರರು'' ಎಂಬ ಮಾತು ಇಂದು ಹುಸಿಯಾಗಿದೆ. ನಾವು ಹಿರಿಯರು ಅವರಿಗಾಗಿ ಬರೆಯಬೇಕಾಗಿದೆ. 'ನಾವು' ಬರೆದುದನ್ನು 'ಅವರು' ಓದಿ ಆನಂದಿಸಲಿ ಎಂಬ ವಾದ ಇಂದು ಅರ್ಥಹೀನ. ಮಾಸ್ಟರ್ ಕಿಶನ್ 'ಫುಟ್‌ಪಾತ್' ಎಂಬ ಚಲನಚಿತ್ರ ನಿರ್ದೇಶನ ಮಾಡಿ ಮಾಧ್ಯಮಗಳನ್ನು ಧೈರ್ಯದಿಂದ ಎದುರಿಸಿ ಮಾತಾಡಿದ್ದನ್ನು ನಾವು ನೋಡಿದ್ದೇವೆ. ನಾಡಿನ ವಿವಿಧ ಪತ್ರಿಕೆಗಳಲ್ಲಿ ಇಂದು ಕೆಲವರಾದರೂ ಮಕ್ಕಳು ಆಗೊಮ್ಮೆ ಈಗೊಮ್ಮೆ ಕತೆ, ಕವನ, ಪತ್ರ ಇತ್ಯಾದಿಗಳನ್ನು ಬರೆಯುವುದು ಹಿರಿಯರ ಗಮನಕ್ಕೆ ಬಂದಿದೆ. ಹಲವು ಶಾಲಾ-ಕಾಲೇಜುಗಳು, ಸಾಹಿತ್ಯ ಸಂಘಟನೆಗಳು ಮಕ್ಕಳ ಸಾಹಿತ್ಯ ಸಮ್ಮೇಳನ ಹಾಗೂ ಕಮ್ಮಟಗಳನ್ನು ನಡೆಸಿ ಮಕ್ಕಳು ಬರೆದುದನ್ನು ವಾಚನ ಮಾಡಲು ಅವಕಾಶ ಕಲ್ಪಿಸುತ್ತಿವೆ. ಕೆಲವು ಮಕ್ಕಳು ಒಂಭತ್ತು ಹತ್ತನೆಯ ತರಗತಿಗೆ ಬರುವ ಹೊತ್ತಿಗಾಗಲೆ ಕಥಾ ಸಂಕಲನ, ಕವನ ಸಂಕಲನ ಪ್ರಕಟಿಸಿದ್ದೂ ಇದೆ. ಹೀಗಾಗಿ ನಾವಿಂದು 'ನಿಂತನೀರಾಗಿರುವ ಮಕ್ಕಳ ಸಾಹಿತ್ಯ' ಎಂಬ ಜಡ ಪರಿಕಲ್ಪನೆಯನ್ನು ಪುನರ್‌ಪರಿಶೀಲಿಸಬೇಕಾಗಿದೆ; ಪುನರ್‌ನಿರ್ವಚಿಸಬೇಕಾಗಿದೆ ಮತ್ತು ಅದರ ವ್ಯಾಪ್ತಿಯನ್ನು ವಿಸ್ತರಿಸಬೇಕಾಗಿದೆ. ಬದಲಾದ ಕಾಲಘಟ್ಟದಲ್ಲಿ ಮಕ್ಕಳ ಸಾಹಿತಿಗಳು ಚಂದ್ರ, ನಕ್ಷತ್ರ, ಅಮ್ಮ, ದೇವರು, ಕೋಗಿಲೆ, ನವಿಲು, ಉಗಿಬಂಡಿ ಇತ್ಯಾದಿ ಸಿದ್ಧವಸ್ತುಗಳ ಚೌಕಟ್ಟಿನಿಂದ, ಹಳೆಯ ಕತೆಗಳ ಮರುನಿರೂಪಣೆಯಿಂದ ಹೊರಗೆ ಬರಬೇಕಾಗಿದೆ. ಮಕ್ಕಳ ಬಗೆಗಿನ ನಮ್ಮ ಪರಿಕಲ್ಪನೆಗಳಲ್ಲಿ ಬದಲಾವಣೆಗಳಾಗಬೇಕಾಗಿದೆ. ಸೌಲಭ್ಯಸಹಿತರೂ ಪ್ರತಿಭಾಸಂಪನ್ನರೂ ಬಹುಮಾಧ್ಯಮ ಭೂಷಿತರೂ ಅಂತರ್ಜಾಲ ಓದುಗರೂ ಆದ ಈ ಕಾಲದ ಮಕ್ಕಳಿಗಾಗಿ ಹೊಸ ಸಂವೇದನೆಗಳೊಡನೆ ಅತ್ಯಾಧುನಿಕ ವಿಷಯ ವಿಚಾರಗಳನ್ನು ಆಪ್ಯಾಯಮಾನವಾಗಿ ನಿರೂಪಿಸುವ ಅಗತ್ಯವಿದೆ. ಮನೋವಿಕಾಸ ಹಾಗೂ ಬೌದ್ಧಿಕ ಸಂವರ್ಧನೆಗೆ ಅಗತ್ಯವಾದುದು ಸಿದ್ಧವಾಗಬೇಕಾಗಿದೆ.

ದೊಡ್ಡ ದೊಡ್ಡ ಚಿತ್ರಗಳು, ಹಾಲುಬಿಳಿ ಕಾಗದ ಹಾಗೂ ಅಂದದ ಮುದ್ರಣದಿಂದ ಮಕ್ಕಳ ಸಾಹಿತ್ಯವಾಗುವುದಿಲ್ಲ. ಆದರ್ಶ ನೀತಿಗಳಿಂದ ತುಂಬಿ ತುಳುಕುವ ಸಾಹಿತ್ಯ ಮಕ್ಕಳ ಸಾಹಿತ್ಯವಾಗಲಾರದು; ಆದರ್ಶವಿಲ್ಲದ ಸಾಹಿತ್ಯ ಮಕ್ಕಳ ಸಾಹಿತ್ಯವೆನಿಸಿಕೊಳ್ಳಲಾರದು. ಮಕ್ಕಳಿಗಾಗಿ ಬರೆಯುವುದೆಂದರೆ ಬೆಂಕಿಯ ಜೊತೆಗಿನ ಆಟ; ಈ ಆಟದಲ್ಲಿ ಬೆಂಕಿ ಸರ್ವಸ್ವವನ್ನೂ ಸುಟ್ಟುಬಿಡಬಹುದು ಅಥವಾ ಸುತ್ತಲೂ ಕುಳಿತವರಿಗೆ ಬೆಳಕು ನೀಡಬಹುದು.

ಪಂಜೆ ಮಂಗೇಶರಾಯರ ''ಗುಡುಗುಡುಗುಮ್ಮಟ ದೇವರು ಬಂದರು ದಾರಿಬಿಡಿ'' ಕತೆಯ ಸೊಲ್ಲಿನಂತೆ ಇಂದು ಹಿರಿಯರು ಹಿಂದೆ ಸರಿದು ಮಕ್ಕಳಿಗೆ ನಡೆಯಲು ದಾರಿ ಮಾಡಿಕೊಡಬೇಕು. ಶಿಕ್ಷಣ ವ್ಯವಸ್ಥೆ ಹಾಗೂ ಪ್ರಕಾಶನ ವ್ಯವಸ್ಥೆ ಮಕ್ಕಳ ಆತ್ಮಾಭಿವ್ಯಕ್ತಿಗೆ ವಿಪುಲ ಅವಕಾಶಗಳನ್ನು ಒದಗಿಸಬಹುದು. ಪ್ರತಿಯೊಂದು ವಿದ್ಯಾಲಯದಲ್ಲೂ ಗ್ರಂಥಾಲಯ ಸಂಘಟನೆಯನ್ನು ಬಲಪಡಿಸಿ ವಾಚನಾಭಿರುಚಿ ಹೆಚ್ಚಿಸುವ ಕ್ರಮಗಳನ್ನು ಕೈಗೊಳ್ಳಬೇಕು. ಮಕ್ಕಳ ಕೃತಿಗಳ ಪ್ರಕಟಣೆಗಾಗಿ ಶಾಲೆಗಳಲ್ಲಿ ಭಿತ್ತಿಪತ್ರಿಕೆ ಹಾಗೂ ವಾರ್ಷಿಕ ಸಂಚಿಕೆಯ ಮುದ್ರಣ ಕಾರ್ಯಕ್ಕೆ ತಕ್ಕ ವ್ಯವಸ್ಥೆಯಾಗಬೇಕು. ಹುಲಿರಾಯ, ಸಣ್ಣ ತಮ್ಮಣ್ಣ, ತಟ್ಟು ಚಪ್ಪಾಳೆ ಪುಟ್ಟ ಮಗು, ಜ್ಞಾನ ಗಂಗೋತ್ರಿ, ಜ್ಞಾನ ವಿಜ್ಞಾನ ಕೋಶ ಮುಂತಾದ ಕೃತಿಗಳ ಬಗ್ಗೆ ಮಕ್ಕಳು ಹಾಗೂ ಹಿರಿಯರು ಜೊತೆಗೂಡಿ ಚರ್ಚಿಸುವ, ಸಂವಾದ ನಡೆಸುವ ವೇದಿಕೆ ಮತ್ತು ವಾತಾವರಣ ಸೃಷ್ಟಿಯಾಗಬೇಕು. ಅನೇಕ ಮಕ್ಕಳು 'ಹ್ಯಾರಿ ಪಾಟರ್' ಸರಣಿಗೆ ಮುಗಿಬೀಳುವುದೇಕೆ ಎಂಬ ಬಗ್ಗೆ ಕೂಲಂಕಷ ಪರಾಮರ್ಶನ ನಡೆಯಬೇಕು.

**ಡಾ|| ಮಹಾಬಲೇಶ್ವರ ರಾವ್**
ಪ್ರಾಂಶುಪಾಲರು, ಡಾ|| ಟಿ. ಎಂ. ಎ. ಪೈ ಕಾಲೇಜ್ ಆಫ್ ಎಜುಕೇಷನ್, ಕುಂಜಿಬೆಟ್ಟು, ಉಡುಪಿ - ೫೭೬ ೧೦೨

# ಪ್ರಾದೇಶಿಕ ಅಸಮಾನತೆ

## ಅನುದಾನ ಹಂಚಿಕೆ ಸೂತ್ರದಲ್ಲಿ ತಾರತಮ್ಯ

— ಡಾ॥ ಬಿ. ಶೇಷಾದ್ರಿ, ಡಾ॥ ಟಿ. ಆರ್. ಚಂದ್ರಶೇಖರ —

ಅಭಿವೃದ್ಧಿ ಸಂಬಂಧಿ ಪ್ರಾದೇಶಿಕ ಅಸಮಾನತೆ ನಿವಾರಣೆಗೆ ಡಾ॥ ಡಿ. ಎಂ. ನಂಜುಂಡಪ್ಪ ನೇತೃತ್ವದ ಉನ್ನತಾಧಿಕಾರ ಸಮಿತಿಯು ವೈಜ್ಞಾನಿಕವಾದ ಹಾಗೂ ಪ್ರಾದೇಶಿಕ ಆಯಾಮದಿಂದ ಕೂಡಿದ ಸಲಹೆ-ಶಿಫಾರಸ್ಸುಗಳನ್ನು ನೀಡಿದೆ. ಅದರ ಬಹುದೊಡ್ಡ ಕೊಡುಗೆಯೆಂದರೆ ಅಭಿವೃದ್ಧಿ ಹೊಂದದ ತಾಲ್ಲೂಕುಗಳಿಗೆ ಸಂಬಂಧಿಸಿದಂತೆ ಅನುದಾನ ಹಂಚಿಕೆ ಸೂತ್ರ. ಇಂತಹ ಅದ್ಭುತವಾದ ಸೂತ್ರವನ್ನು ಕೈಬಿಟ್ಟು ಸರ್ಕಾರವು ಹಿಂದುಳಿದ ವಿಭಾಗಕ್ಕೆ ತೀವ್ರ ಅನ್ಯಾಯ ಉಂಟುಮಾಡುವಂತಹ ಹಾಗೂ ಪ್ರಾದೇಶಿಕತೆಗೆ ಅತೀತವಾದ ಸೂತ್ರವನ್ನು ಅನುದಾನ ಹಂಚಿಕೆಗಾಗಿ ರೂಪಿಸಿದೆ. ಈ ಸರ್ಕಾರಿ ಸೂತ್ರ ಅನಗತ್ಯವಾಗಿತ್ತು. ಆದ್ದರಿಂದ ಸರ್ಕಾರವು ಈಗಲಾದರೂ ಎಚ್ಚೆತ್ತುಕೊಂಡು ತಾನು ರೂಪಿಸಿರುವ ೫೦:೩೦:೨೦ ಸೂತ್ರವನ್ನು ಕೈಬಿಟ್ಟು ಉನ್ನತಾಧಿಕಾರ ಸಮಿತಿಯ ಸೂತ್ರದನ್ವಯ ಅನುದಾನ ಹಂಚಿಕೆಯನ್ನು ಮಾಡಬೇಕು.

**ಪ್ರಸ್ತಾವನೆ**

ಪ್ರಾದೇಶಿಕ ಅಸಮಾನತೆಯನ್ನು ಕುರಿತಂತೆ ಅಧ್ಯಯನ ಮಾಡಿ ಅದರ ನಿವಾರಣೆಗೆ ಸಲಹೆ-ಶಿಫಾರಸ್ಸುಗಳನ್ನು ನೀಡಲು ಕರ್ನಾಟಕ ಸರ್ಕಾರವು ೨೦೦೦ರಲ್ಲಿ ಒಂದು ಉನ್ನತಾಧಿಕಾರ ಸಮಿತಿಯನ್ನು ಡಾ॥ ಡಿ. ಎಂ. ನಂಜುಂಡಪ್ಪ ಅವರ ನೇತೃತ್ವದಲ್ಲಿ ನೇಮಿಸಿತು. ಈ ಸಮಿತಿಯು ತನ್ನ ಬೃಹತ್ ವರದಿಯನ್ನು ಸರ್ಕಾರಕ್ಕೆ ೨೦೦೨ರಲ್ಲಿ ಸಲ್ಲಿಸಿತು. ಪ್ರಾದೇಶಿಕ ಅಸಮಾನತೆ ನಿವಾರಣೆಗೆ ಸಮಿತಿಯು ಅನೇಕ ಸಲಹೆಗಳನ್ನು ನೀಡಿದೆ. ಅದರಲ್ಲಿ ಬಹುಮುಖ್ಯವಾದುದು ಎಂಟು ವರ್ಷಗಳ ವಿಶೇಷ ಅಭಿವೃದ್ಧಿ ಯೋಜನೆ. ಈ ಯೋಜನೆ ಯಡಿಯಲ್ಲಿ ರಾಜ್ಯದ ಹಿಂದುಳಿದ ೧೧೪ ತಾಲ್ಲೂಕುಗಳ ಅಭಿವೃದ್ಧಿಗಾಗಿ ವಿಶೇಷವಾಗಿ ರೂ. ೧೬,೦೦೦ ಕೋಟಿ ಹಣಕಾಸು ವಿನಿಯೋಜನೆಯನ್ನು ಮಾಡಬೇಕಾಗುತ್ತದೆ.

ಈ ಸಮಿತಿಯು ತನ್ನ ವರದಿಯನ್ನು ಸಲ್ಲಿಸಿದ ಐದು ವರ್ಷಗಳ ನಂತರ ಎಂಟು ವರ್ಷಗಳ ವಿಶೇಷ ಅಭಿವೃದ್ಧಿ ಯೋಜನೆಯನ್ನು ಒಪ್ಪಿಕೊಂಡು ಸರ್ಕಾರವು ೨೦೦೭-೦೮ರ ಬಜೆಟ್ಟಿನಲ್ಲಿ ಅದರ ಅನುಷ್ಠಾನಕ್ಕೆ ಮೊದಲ ವರ್ಷದ ಬಾಬ್ತು ರೂ. ೧೫೭೧.೫೦ ಕೋಟಿ ತೆಗೆದಿರಿಸಿದೆ. ಪ್ರಾದೇಶಿಕ ಅಸಮಾನತೆ ನಿವಾರಣೆ ದಿಶೆಯಲ್ಲಿ ಸರ್ಕಾರವು ತೆಗೆದುಕೊಂಡ ದಿಟ್ಟ ಹೆಜ್ಜೆ ಇದಾಗಿದೆ. ಇದಕ್ಕಾಗಿ ಸರ್ಕಾರಕ್ಕೆ ಅಭಿನಂದನೆ ಸಲ್ಲಬೇಕು.

ವಿಶೇಷ ಅಭಿವೃದ್ಧಿ ಯೋಜನೆ ಬಾಬ್ತು ಅನುದಾನ ಹಂಚಿಕೆಗೆ ಸಂಬಂಧಿಸಿದಂತೆ ಸಮಿತಿಯು ವಿಭಾಗ, ಜಿಲ್ಲೆ ಹಾಗೂ ತಾಲ್ಲೂಕುವಾರು ಸೂತ್ರವನ್ನು ರೂಪಿಸಿದೆ. ಇದಕ್ಕಾಗಿ ಸಮಿತಿಯು ಎರಡು ಸೂಚ್ಯಂಕಗಳನ್ನು ರಚಿಸಿದೆ.

೧. ಸಮಗ್ರ ಸಂಯುಕ್ತ ಅಭಿವೃದ್ಧಿ ಸೂಚ್ಯಂಕ

೨. ಸಂಚಯಿತ ದುಃಸ್ಥಿತಿ ಸೂಚ್ಯಂಕ

ಸಮಿತಿಯ ಸೂತ್ರದ ಪ್ರಕಾರ ಅನುದಾನವನ್ನು ಹಿಂದುಳಿದಿರುವಿಕೆಯ ತೀವ್ರತೆಯನ್ನು ಅನುಸರಿಸಿ ಹಂಚಬೇಕಾಗುತ್ತದೆ. ಸಮಿತಿಯು ರಾಜ್ಯದ ನಾಲ್ಕು ವಿಭಾಗಗಳ ನಡುವೆ ಹಿಂದುಳಿದ ತಾಲ್ಲೂಕುಗಳಿಗೆ ಸಂಬಂಧಿಸಿದಂತೆ ಅನುದಾನವನ್ನು ಹೇಗೆ ಹಂಚಬೇಕು ಎಂಬುದಕ್ಕೆ, ವಿಭಾಗದೊಳಗೆ ಜಿಲ್ಲೆಗಳ ನಡುವೆ ಅನುದಾನ ಹೇಗೆ ಹಂಚಬೇಕು ಎಂಬುದಕ್ಕೆ ಹಾಗೂ ಜಿಲ್ಲೆಯೊಳಗೆ ತಾಲ್ಲೂಕುಗಳ ನಡುವೆ ಅನುದಾನ ಹೇಗೆ ಹಂಚಬೇಕು ಎಂಬುದಕ್ಕೆ ವೈಜ್ಞಾನಿಕವಾದ ಮತ್ತು ವಸ್ತುನಿಷ್ಠವಾದ ಸೂತ್ರವನ್ನು ರೂಪಿಸಿದೆ.

ಈಗ ಸರ್ಕಾರವು ಎಂಟು ವರ್ಷಗಳ ವಿಶೇಷ ಅಭಿವೃದ್ಧಿ ಯೋಜನೆಯ ಅನುಷ್ಠಾನಕ್ಕೆ ೨೦೦೭-೦೮ರಲ್ಲಿ ಕ್ರಮ ತೆಗೆದುಕೊಳ್ಳುವುದರ ಜೊತೆಗೆ ಅನುದಾನ ಹಂಚಿಕೆಗೆ ಸಮಿತಿಯ ಸೂತ್ರವನ್ನು ಕೈಬಿಟ್ಟು ತನ್ನದೇ ಸೂತ್ರವನ್ನು ಪ್ರಕಟಿಸಿದೆ. ಸಮಿತಿಯ ಸೂತ್ರವನ್ನು ಕೈಬಿಟ್ಟು ಸರ್ಕಾರವು ತನ್ನದೇ ಸೂತ್ರವನ್ನು ಯಾಕೆ ರೂಪಿಸಿತು ಎಂಬುದಕ್ಕೆ ವಿವರಣೆ ದೊರೆಯುತ್ತಿಲ್ಲ. ಸಮಿತಿಯ ಸೂತ್ರವನ್ನು ಬಿಟ್ಟು, ಸರ್ಕಾರದ ಸೂತ್ರವನ್ನು ಅನುಸರಿಸುವುದರಿಂದ ರಾಜ್ಯದ ಅತ್ಯಂತ ಹಿಂದುಳಿದ ಗುಲಬರ್ಗಾ ವಿಭಾಗಕ್ಕೆ ಅನ್ಯಾಯವಾಗುತ್ತದೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಲೇಖನದಲ್ಲಿ ಗುಲಬರ್ಗಾ ವಿಭಾಗಕ್ಕೆ ಉಂಟಾಗುವ ಖೋತಾ ಎಷ್ಟು ಹಾಗೂ ಅನುದಾನ ಹಂಚಿಕೆಯ ಸೂತ್ರಗಳಿಗೆ ಸಂಬಂಧಿಸಿದ ಸಂಗತಿಗಳನ್ನು ಇಲ್ಲಿ ಚರ್ಚಿಸಲಾಗಿದೆ.

**ಅನುದಾನ ಹಂಚಿಕೆಗೆ ಸಮಿತಿ ಸೂತ್ರ**

ಈಗಾಗಲೇ ತಿಳಿಸಿರುವಂತೆ ಡಾ॥ ಡಿ. ಎಂ. ನಂಜುಂಡಪ್ಪ ಸಮಿತಿಯು ಅನುದಾನ ಹಂಚಿಕೆಗೆ ವಿವರವಾದ ಸೂತ್ರವನ್ನು ರೂಪಿಸಿದೆ. ಈ ಸೂತ್ರವು ಸಮಿತಿಯು ಅಭಿವೃದ್ಧಿಯ ಮಾಪನಕ್ಕೆ ರೂಪಿಸಿದ್ದ ಸಮಗ್ರ ಸಂಯುಕ್ತ ಅಭಿವೃದ್ಧಿ ಸೂಚ್ಯಂಕವನ್ನು ಆಧರಿಸಿದೆ. ಅನುದಾನ ಹಂಚಿಕೆಗೆ ಸಮಿತಿಯು ಸಮಗ್ರ ಸಂಯುಕ್ತ ಅಭಿವೃದ್ಧಿ ಸೂಚ್ಯಂಕವನ್ನು ಆಧರಿಸಿ 'ಸಂಚಯಿತ ದುಃಸ್ಥಿತಿ ಸೂಚ್ಯಂಕ'ವನ್ನು ರಚಿಸಿದೆ. ಈ ಸಮಿತಿಯು ರಾಜ್ಯದ ತಾಲ್ಲೂಕುಗಳನ್ನು ಅಭಿವೃದ್ಧಿ ಮಟ್ಟವನ್ನು ಆಧರಿಸಿ ಎರಡು ಗುಂಪುಗಳಾಗಿ ವರ್ಗೀಕರಿಸಿದೆ.

೧. ಸಾಪೇಕ್ಷವಾಗಿ ಅಭಿವೃದ್ಧಿ ಹೊಂದಿದ ತಾಲ್ಲೂಕುಗಳು (೬೧)

(ಸಮಗ್ರ ಸಂಯುಕ್ತ ಅಭಿವೃದ್ಧಿ ಸೂಚ್ಯಂಕವು ಒಂದು ಅಥವಾ ಒಂದಕ್ಕಿಂತ ಅಧಿಕ ವಿರುವ ತಾಲ್ಲೂಕುಗಳು)

೨. ಅಭಿವೃದ್ಧಿ ಹೊಂದದ ತಾಲ್ಲೂಕುಗಳು (೧೧೪)

(ಸಮಗ್ರ ಸಂಯುಕ್ತ ಅಭಿವೃದ್ಧಿ ಸೂಚ್ಯಂಕವು ಒಂದಕ್ಕಿಂತ ಕಡಿಮೆಯಿರುವ ತಾಲ್ಲೂಕುಗಳು) ಸಮಿತಿಯು ಅಭಿವೃದ್ಧಿ ಹೊಂದದ ತಾಲ್ಲೂಕುಗಳನ್ನು ಮತ್ತೆ ಮೂರು ಗುಂಪುಗಳಾಗಿ ವರ್ಗೀಕರಿಸಿದೆ.

| | |
|---|---|
| ೧. ಅತ್ಯಂತ ಹಿಂದುಳಿದ ತಾಲ್ಲೂಕುಗಳು | ೩೯ |
| ೨. ಅತಿ ಹಿಂದುಳಿದ ತಾಲ್ಲೂಕುಗಳು | ೪೦ |
| ೩. ಹಿಂದುಳಿದ ತಾಲ್ಲೂಕುಗಳು | ೩೫ |
| **ಒಟ್ಟು ಅಭಿವೃದ್ಧಿ ಹೊಂದದ ತಾಲ್ಲೂಕುಗಳು** | ೧೧೪ |

ಅತ್ಯಂತ ಹಿಂದುಳಿದ ತಾಲ್ಲೂಕುಗಳ ಗುಂಪಿನ ೩೯ ತಾಲ್ಲೂಕುಗಳ ಪೈಕಿ ೨೧ (ಶೇ. ೬೬.೭೪) ಗುಲಬರ್ಗಾ ವಿಭಾಗದಲ್ಲಿವೆ. ಅಂದಮೇಲೆ ಹಿಂದುಳಿದಿರುವಿಕೆಯ ತೀವ್ರತೆಯು ರಾಜ್ಯದ ಯಾವ ಭಾಗದಲ್ಲಿ ಮಡುಗಟ್ಟಿಕೊಂಡಿದೆ ಎಂಬುದು ಇದರಿಂದ ಸ್ಪಷ್ಟವಾಗುತ್ತದೆ. ರಾಜ್ಯದ ಒಟ್ಟು ಅಭಿವೃದ್ಧಿ ಹೊಂದಿದ ೬೧ ತಾಲ್ಲೂಕುಗಳ ಪೈಕಿ ಗುಲಬರ್ಗಾ ವಿಭಾಗದ ಪಾಲು ಕೇವಲ ೩ (ಶೇ. ೯.೬೮).

**ಅನುದಾನ ಹಂಚಿಕೆ ಸೂತ್ರ**

ಸಮಿತಿಯು ರಾಜ್ಯದ ೧೧೪ ತಾಲ್ಲೂಕುಗಳ ನಡುವೆ ಅನುದಾನ ಹಂಚಿಕೆಗೆ ಜಿಲ್ಲಾವಾರು ಸಂಚಯಿತ ದುಃಸ್ಥಿತಿ ಸೂಚ್ಯಂಕವನ್ನು ರಚಿಸಿದೆ. ರಾಜ್ಯದ ಅಭಿವೃದ್ಧಿಯ ಸರಾಸರಿ ಒಂದು ಮತ್ತು ಸಂಬಂಧಿಸಿದ ತಾಲ್ಲೂಕಿನ ಸಮಗ್ರ ಸಂಯುಕ್ತ ಅಭಿವೃದ್ಧಿ ಸೂಚ್ಯಂಕಗಳ ನಡುವಿನ ವ್ಯತ್ಯಾಸವೇ 'ದುಃಸ್ಥಿತಿ ಸೂಚ್ಯಂಕ'. ಒಂದು ಜಿಲ್ಲೆಯ ಎಲ್ಲ ಹಿಂದುಳಿದ ತಾಲ್ಲೂಕುಗಳ ದುಃಸ್ಥಿತಿ ಸೂಚ್ಯಂಕದ ಮೊತ್ತವೇ 'ಸಂಚಯಿತ ದುಃಸ್ಥಿತಿ ಸೂಚ್ಯಂಕ'.

ಇಡೀ ರಾಜ್ಯದ ಒಟ್ಟು ಸಂಚಯಿತ ದುಃಸ್ಥಿತಿ ಸೂಚ್ಯಂಕ ೨೦.೨೬. ಇದರಲ್ಲಿ ಗುಲಬರ್ಗಾ ವಿಭಾಗದ ದುಃಸ್ಥಿತಿ ೮.೦೬ (ಶೇ. ೪೦), ಬೆಳಗಾವಿ ವಿಭಾಗದ್ದು ೪.೧೨ (ಶೇ. ೨೦),

ಬೆಂಗಳೂರು ವಿಭಾಗದ್ದು ೫.೩೨ (ಶೇ. ೨೫) ಮತ್ತು ಮೈಸೂರು ವಿಭಾಗದ್ದು ೨.೭೬ (ಶೇ. ೧೫).

ಡಾ॥ ಡಿ. ಎಂ. ನಂಜುಂಡಪ್ಪ ಸಮಿತಿ ವರದಿಯ ಪ್ರಕಾರ ವಿಶೇಷ ಅಭಿವೃದ್ಧಿ ಯೋಜನೆಯ ಅನುದಾನವನ್ನು ವಿಭಾಗಗಳ ನಡುವೆ ಮೇಲ್ಕಂಡ ಅನುಪಾತಕ್ಕೆ ಅನುಗುಣವಾಗಿ ಹಂಚಬೇಕು. ರಾಜ್ಯ ಸರ್ಕಾರವು ೨೦೦೭-೦೮ರಲ್ಲಿ ಇದಕ್ಕೆ ಮೀಸಲಿಟ್ಟ ರೂ. ೧೫೭೧.೫೦ ಕೋಟಿಯನ್ನು ನಾಲ್ಕು ವಿಭಾಗಗಳಿಗೆ ಹಂಚಿದರೆ ಗುಲಬರ್ಗಾ ವಿಭಾಗಕ್ಕೆ ರೂ. ೬೨೮.೬೦ ಕೋಟಿ, ಬೆಳಗಾವಿ ವಿಭಾಗಕ್ಕೆ ರೂ. ೩೧೪.೩೦ ಕೋಟಿ, ಬೆಂಗಳೂರು ವಿಭಾಗಕ್ಕೆ ರೂ. ೩೯೨.೮೭ ಕೋಟಿ ಮತ್ತು ಮೈಸೂರು ವಿಭಾಗಕ್ಕೆ ರೂ. ೨೩೫.೭೩ ಕೋಟಿ ದೊರೆಯುತ್ತದೆ. ಅಂದರೆ ಒಟ್ಟು ಅನುದಾನದಲ್ಲಿ ಶೇ. ೪೦ ಗುಲಬರ್ಗಾ ವಿಭಾಗಕ್ಕೆ ದೊರೆತರೆ ಬೆಳಗಾವಿ ವಿಭಾಗಕ್ಕೆ ಶೇ. ೨೦ ದೊರೆಯುತ್ತದೆ. ಬೆಂಗಳೂರು ವಿಭಾಗಕ್ಕೆ ಶೇ. ೨೫ ಮತ್ತು ಮೈಸೂರು ವಿಭಾಗಕ್ಕೆ ಶೇ. ೧೫ ದೊರೆಯುತ್ತದೆ.

ಸಮಿತಿಯು ಅನುದಾನ ಹಂಚಿಕೆಯ ಸೂತ್ರವನ್ನು ವಿಭಾಗಗಳ ಮಟ್ಟಕ್ಕೆ ಮಾತ್ರ ನಿಲ್ಲಿಸಿಲ್ಲ. ವಿಭಾಗಗಳೊಳಗೆ ಜಿಲ್ಲೆಗಳ ನಡುವೆ, ಹಾಗೂ ಜಿಲ್ಲೆಗಳೊಳಗೆ, ತಾಲ್ಲೂಕುಗಳ ನಡುವೆ ಅನುದಾನ ಹಂಚಿಕೆಯನ್ನು ಸಮಿತಿ ಸೂತ್ರದ ಪ್ರಕಾರ ಲೆಕ್ಕ ಹಾಕಬಹುದಾಗಿದೆ. ಉದಾಹರಣೆಗೆ, ಗುಲಬರ್ಗಾ ವಿಭಾಗದ ಮೊತ್ತ ರೂ. ೬೨೮.೬೦ ಕೋಟಿಯಲ್ಲಿ ವಿಭಾಗದ ಕೊಪ್ಪಳ ಜಿಲ್ಲೆಯ ಪಾಲು ರೂ. ೭೭.೧೯ ಕೋಟಿ. ಕೊಪ್ಪಳ ಜಿಲ್ಲೆಯ ಪಾಲಾದ ರೂ. ೭೭.೧೯ ಕೋಟಿಯಲ್ಲಿ ಯಲಬುರ್ಗಾ ತಾಲ್ಲೂಕಿನ ಪಾಲು ರೂ. ೨೮.೮೪ ಕೋಟಿ. ಆದರೆ ರಾಯಚೂರು ಜಿಲ್ಲೆಯ ದೇವದುರ್ಗ ತಾಲ್ಲೂಕಿನ ಪಾಲು ರೂ. ೩೧.೩೩ ಕೋಟಿ. ಯಲಬುರ್ಗಾ ಹಾಗೂ ದೇವದುರ್ಗ ತಾಲ್ಲೂಕುಗಳು 'ಅತ್ಯಂತ ಹಿಂದುಳಿದ' ಗುಂಪಿಗೆ ಸೇರಿದ್ದರೂ ಅವುಗಳಿಗೆ ದೊರೆಯುವ ಅನುದಾನ ಮೊತ್ತ ಭಿನ್ನವಾಗಿದೆ. ಏಕೆಂದರೆ ಸದರಿ ಗುಂಪಿನ ೩೯ ತಾಲ್ಲೂಕುಗಳ ಪೈಕಿ ದೇವದುರ್ಗವು ೩೯ನೆಯ ಸ್ಥಾನದಲ್ಲಿದ್ದರೆ ಯಲಬುರ್ಗಾ ತಾಲ್ಲೂಕು ೩೨ನೆಯ ಸ್ಥಾನದಲ್ಲಿದೆ. ಹೀಗೆ ಸಮಿತಿಯು ಹಿಂದುಳಿದಿರುವಿಕೆ ತೀವ್ರತೆಗೆ ಅನುಗುಣವಾಗಿ ವಿಭಾಗಗಳ ನಡುವೆ, ವಿಭಾಗಗಳಲ್ಲಿ ಜಿಲ್ಲೆಗಳ ನಡುವೆ ಹಾಗೂ ಜಿಲ್ಲೆಗಳಲ್ಲಿ ತಾಲ್ಲೂಕುಗಳ ನಡುವೆ ಹೇಗೆ ಅನುದಾನ ಹಂಚಬೇಕು ಎಂಬುದಕ್ಕೆ ಸೂಕ್ತವಾದ ಸೂತ್ರ – ಸಮೀಕರಣ ರಚಿಸಿಕೊಟ್ಟಿದೆ.

**ಸರ್ಕಾರಿ ಸೂತ್ರ**

ಕರ್ನಾಟಕ ಸರ್ಕಾರವು ೨೦೦೭-೦೮ನೆಯ ಸಾಲಿನ ಬಜೆಟ್ಟಿನಲ್ಲಿ ರಾಜ್ಯದ ೧೧೪ ಅಭಿವೃದ್ಧಿ ಹೊಂದದ ತಾಲ್ಲೂಕುಗಳಿಗೆ ಸಂಬಂಧಿಸಿದ ವಿಶೇಷ ಅಭಿವೃದ್ಧಿ ಯೋಜನೆ ಬಾಬ್ತು ಮೊದಲು ವರ್ಷದ ಅನುದಾನ ರೂ. ೧೫೭೧.೫೦ ಕೋಟಿಯನ್ನು ತೆಗೆದಿರಿಸಿದೆ. ಡಾ॥ ಡಿ. ಎಂ. ನಂಜುಂಡಪ್ಪ ಸಮಿತಿಯು ವರ್ಗೀರಿಸಿರುವ 'ಅತ್ಯಂತ ಹಿಂದುಳಿದ' (೩೯), 'ಅತಿ ಹಿಂದುಳಿದ' (೪೦) ಮತ್ತು 'ಹಿಂದುಳಿದ' (೩೫) ಗುಂಪುಗಳ ನಡುವೆ ಅನುಕ್ರಮವಾಗಿ ೫೦:೩೦:೨೦ರ ಅನುಪಾತದಲ್ಲಿ ಅನುದಾನ ಹಂಚಬೇಕೆಂಬ ಸೂತ್ರವನ್ನು ಅದು ಪ್ರಕಟಿಸಿದೆ. ಈ ಸರ್ಕಾರಿ ಸೂತ್ರದ ಪ್ರಕಾರ ರಾಜ್ಯದ ಅತ್ಯಂತ ಹಿಂದುಳಿದ ೩೯ ತಾಲ್ಲೂಕುಗಳಿಗೆ ದೊರೆಯುವ ಮೊತ್ತ ರೂ. ೭೮೫.೭೫ ಕೋಟಿ (ಅಂದರೆ ಒಟ್ಟು ಅನುದಾನವಾದ ರೂ. ೧೫೭೧.೫೦ ಕೋಟಿಯ ಶೇ. ೫೦ ಭಾಗ). ಅತ್ಯಂತ ಹಿಂದುಳಿದ ೩೯ ತಾಲ್ಲೂಕುಗಳಿಗೆ ಪ್ರಾಪ್ತವಾಗುವ ರೂ. ೭೮೫.೭೫ ಕೋಟಿಯನ್ನು ಜಿಲ್ಲೆ - ತಾಲ್ಲೂಕುಗಳ ನಡುವೆ ಹೇಗೆ ಹಂಚಬೇಕು ಎಂಬುದರ ಬಗ್ಗೆ ಸರ್ಕಾರವು ಮೌನವಹಿಸಿದೆ. ಅಂದರೆ ಅದು ೩೯ ತಾಲ್ಲೂಕುಗಳ ನಡುವೆ ಸಮಾನವಾಗಿ ಹಂಚುವ ಸಾಧ್ಯತೆಯಿದೆ.

**ಗುಲಬರ್ಗಾ ವಿಭಾಗಕ್ಕೆ ಅನ್ಯಾಯ**

ಸರ್ಕಾರಿ ಸೂತ್ರದ ಪ್ರಕಾರ ಅನುದಾನವನ್ನು ಹಂಚಿದರೆ ರಾಜ್ಯದ 'ಅತ್ಯಂತ ಹಿಂದುಳಿದ' ಗುಲಬರ್ಗಾ ವಿಭಾಗಕ್ಕೆ ಅನ್ಯಾಯವಾಗುತ್ತದೆ. ಮೂರು ಬಗೆಯ ತಾಲ್ಲೂಕುಗಳ ಗುಂಪುಗಳಿಗೆ ಹಂಚಿದರೆ ಗುಲಬರ್ಗಾ ವಿಭಾಗಕ್ಕೆ ರೂ. ೪೯೯.೯೮ ಕೋಟಿ, ಬೆಳಗಾವಿ ವಿಭಾಗಕ್ಕೆ ರೂ. ೩೬೭.೯೦ ಕೋಟಿ, ಬೆಂಗಳೂರು ವಿಭಾಗಕ್ಕೆ ರೂ. ೪೫೫.೬೬ ಕೋಟಿ ಹಾಗೂ ಮೈಸೂರು ವಿಭಾಗಕ್ಕೆ ರೂ. ೨೪೭.೯೬ ಕೋಟಿ ದೊರೆಯುತ್ತದೆ. ಈಗ ನಮಗೆ ಮುಖ್ಯ ಸಮಸ್ಯೆ ಎದುರಾಗುತ್ತದೆ. ಸಮಿತಿ ಸೂತ್ರದ ಪ್ರಕಾರ ಅನುದಾನ ಹಂಚಿದರೆ ಗುಲಬರ್ಗಾ ವಿಭಾಗಕ್ಕೆ ಎಷ್ಟು ದೊರೆಯುತ್ತಿತ್ತೋ ಅದಕ್ಕಿಂತ ಸರ್ಕಾರಿ ಸೂತ್ರದ ಪ್ರಕಾರ ಹಂಚಿದಾಗ ರೂ. ೧೨೮.೬೨ ಕೋಟಿ ಕಡಿಮೆ ದೊರೆಯುತ್ತದೆ. ಇದಕ್ಕೆ ಪ್ರತಿಯಾಗಿ ಉಳಿದ ಮೂರು ವಿಭಾಗಗಳಿಗೆ ಸಮಿತಿ ಸೂತ್ರದ ಪ್ರಕಾರ ಎಷ್ಟು ದೊರೆಯುತ್ತಿತ್ತೋ ಅದಕ್ಕಿಂತ ಅಧಿಕ ಮೊತ್ತ ಸರ್ಕಾರಿ ಸೂತ್ರದ ಪ್ರಕಾರ ಅನುದಾನ ಹಂಚಿದರೆ ದೊರೆಯುತ್ತದೆ.

ಸರ್ಕಾರಿ ಸೂತ್ರದ ಸಮಸ್ಯೆಯ ಒಂದು ಮುಖ ಮಾತ್ರ ಇದಾಗಿದೆ. ಅದರ ಇನ್ನೊಂದು ಮುಖವು ಮೊದಲನೆಯದಕ್ಕಿಂತ ಆತಂಕಕಾರಿಯಾಗಿದೆ. ಈ ಸೂತ್ರದ ಪ್ರಕಾರ ಈಗಾಗಲೇ ತಿಳಿಸಿರುವಂತೆ 'ಅತ್ಯಂತ ಹಿಂದುಳಿದ' ೩೯ ತಾಲ್ಲೂಕುಗಳಿಗೆ ದೊರೆಯುವ ಮೊತ್ತ ರೂ. ೭೮೫.೭೫ ಕೋಟಿ. ಇದನ್ನು ೩೯ ತಾಲ್ಲೂಕುಗಳ ನಡುವೆ ಹಂಚಿದರೆ ರಾಜ್ಯದಲ್ಲಿ ಕಟ್ಟಕಡೆಯ ೧೭೫ನೆಯ ಸ್ಥಾನದಲ್ಲಿರುವ ದೇವದುರ್ಗ ತಾಲ್ಲೂಕಿಗೂ ಮತ್ತು ೧೪೭ನೆಯ ಸ್ಥಾನದಲ್ಲಿರುವ ಕನಕಪುರ ತಾಲ್ಲೂಕಿಗೂ ದೊರೆಯುವ ಅನುದಾನದ ಮೊತ್ತವು ಸಮಾನವಾಗಿರುತ್ತದೆ. ಇದರಿಂದ ಅಭಿವೃದ್ಧಿಗೆ ಸಂಬಂಧಿಸಿದ ಪ್ರಾದೇಶಿಕ ಅಸಮಾನತೆಯನ್ನು ತೊಡೆದು ಹಾಕುವುದಿರಲಿ – ಅದನ್ನು ಕಡಿಮೆ ಮಾಡುವುದೂ ಸಾಧ್ಯವಿಲ್ಲ. ಇದಕ್ಕೆ ಪ್ರತಿಯಾಗಿ ಅಸಮಾನತೆಯು ಉಲ್ಬಣವಾಗುವ ಸಾಧ್ಯತೆಯಿದೆ.

ಡಾ॥ ಡಿ. ಎಂ. ನಂಜುಂಡಪ್ಪ ಸಮಿತಿಯು ತನ್ನ ವರದಿಯಲ್ಲಿ ಪ್ರತಿಪಾದಿಸಿರುವ ಸಿದ್ಧಾಂತವು ಅಭಿವೃದ್ಧಿ ಮಟ್ಟದಲ್ಲಿ ಅಸಮವಾಗಿರುವ ಜಿಲ್ಲೆ-ತಾಲ್ಲೂಕುಗಳ ನಡುವೆ ಅನುದಾನವನ್ನು ಸಮಾನವಾಗಿ ಹಂಚಿದರೆ ಅಸಮಾನತೆಯು ಕಡಿಮೆಯಾಗುವುದಕ್ಕೆ ಪ್ರತಿಯಾಗಿ ತೀವ್ರವಾಗುತ್ತದೆ ಎಂಬುದಾಗಿದೆ. ಈ ಕಾರಣದಿಂದಾಗಿಯೇ ಸಮಿತಿಯು ಹಿಂದುಳಿದಿರುವಿಕೆಗೆ ಅನುಗುಣವಾಗಿ ಅನುದಾನವನ್ನು ವಿಭಾಗಳು, ಜಿಲ್ಲೆಗಳು ಹಾಗೂ ತಾಲ್ಲೂಕುಗಳ ನಡುವೆ ಹಂಚುವ ಸೂತ್ರವನ್ನು ರೂಪಿಸಿದೆ. ಈ ಸರ್ಕಾರವು ರೂಪಿಸಿರುವ ಸೂತ್ರವು ಸಮಿತಿಯ ಮೂಲ ಸಿದ್ಧಾಂತಕ್ಕೆ ವಿರುದ್ಧವಾದುದಾಗಿದೆ. ಸರ್ಕಾರಿ ಸೂತ್ರದ ಮುಖ್ಯ ಸಮಸ್ಯೆಯೆಂದರೆ ಅದಕ್ಕೆ ಪ್ರಾದೇಶಿಕ ಆಯಾಮವೇ ಇಲ್ಲವಾಗಿದೆ. ಪ್ರಾದೇಶಿಕ ದೃಷ್ಟಿಕೋನವೇ ಇಲ್ಲದ ಸೂತ್ರವು ಹಿಂದುಳಿದ ವಿಭಾಗ, ಜಿಲ್ಲೆ ಹಾಗೂ ತಾಲ್ಲೂಕುಗಳಿಗೆ ನ್ಯಾಯ ಒದಗಿಸುವುದು ಸಾಧ್ಯವಿಲ್ಲ. ಸಮಿತಿಯ ಸೂತ್ರವನ್ನು ಬಿಟ್ಟು ಸರ್ಕಾರಿ ಸೂತ್ರವನ್ನು ಅನುಸರಿಸಿದರೆ ರಾಜ್ಯದ ಅತ್ಯಂತ ಹಿಂದುಳಿದ ಗುಲಬರ್ಗಾ ವಿಭಾಗಕ್ಕೆ ರೂ. ೧೨೮.೬೨ ಕೋಟಿಯಷ್ಟು ಅನ್ಯಾಯವಾಗುತ್ತದೆ. ಎರಡನೆಯದಾಗಿ, ಈ ಸೂತ್ರದ ಪರಿಣಾಮವು ಅಸಮಾನತೆಯನ್ನು ಕಡಿಮೆ ಮಾಡುವುದಕ್ಕೆ ಪ್ರತಿಯಾಗಿ ಅದನ್ನು ಉಲ್ಬಣಗೊಳಿಸುವ ಸಾಧ್ಯತೆಯಿದೆ. ಮೂರನೆಯದಾಗಿ, ಡಾ॥ ಡಿ. ಎಂ. ನಂಜುಂಡಪ್ಪ ಸಮಿತಿಯು ಪ್ರತಿಪಾದಿಸಿರುವ ಮೂಲತತ್ವಕ್ಕೆ ಇದು ವಿರುದ್ಧವಾದುದಾಗಿದೆ.

ಸಮಿತಿಯ ಸೂತ್ರದ ಪ್ರಕಾರ ಅನುದಾನ ಹಂಚಿಕೆಯಲ್ಲಿ ಗುಲಬರ್ಗಾ ವಿಭಾಗಕ್ಕೆ ಶೇ. ೪೦ ಪಾಲು ದೊರೆಯಬೇಕು. ಆದರೆ ಈಗ ಸರ್ಕಾರಿ ಸೂತ್ರದ ಪ್ರಕಾರ ಅನುದಾನ ಹಂಚಿದರೆ ಅದಕ್ಕೆ ದೊರೆಯುವ ಪಾಲು ಕೇವಲ ಶೇ. ೩೧.೮೨. ಗುಲಬರ್ಗಾ ವಿಭಾಗಕ್ಕೆ ಶೇ. ೮.೧೮ ಅಂಶಗಳಷ್ಟು ಕಡಿಮೆ ಅನುದಾನ ದೊರೆಯುತ್ತದೆ.

**ತಾರತಮ್ಯ ನಿಲ್ಲಬೇಕು**

ಅಭಿವೃದ್ಧಿ ಸಂಬಂಧಿ ಪ್ರಾದೇಶಿಕ ಅಸಮಾನತೆ ನಿವಾರಣೆಗೆ ಡಾ॥ ಡಿ. ಎಂ. ನಂಜುಂಡಪ್ಪ ನೇತೃತ್ವದ ಉನ್ನತಾಧಿಕಾರ ಸಮಿತಿಯು ವೈಜ್ಞಾನಿಕವಾದ ಹಾಗೂ ಪ್ರಾದೇಶಿಕ ಆಯಾಮದಿಂದ ಕೂಡಿದ ಸಲಹೆ-ಶಿಫಾರಸ್ಸುಗಳನ್ನು ನೀಡಿದೆ. ಅದರ ಬಹುದೊಡ್ಡ ಕೊಡುಗೆಯೆಂದರೆ ಅಭಿವೃದ್ಧಿ ಹೊಂದದ ತಾಲ್ಲೂಕುಗಳಿಗೆ ಸಂಬಂಧಿಸಿದಂತೆ ಅನುದಾನ ಹಂಚಿಕೆ ಸೂತ್ರ. ಇಂತಹ ಅದ್ಭುತವಾದ ಸೂತ್ರವನ್ನು ಕೈಬಿಟ್ಟು ಸರ್ಕಾರವು ಹಿಂದುಳಿದ ವಿಭಾಗಕ್ಕೆ ತೀವ್ರ ಅನ್ಯಾಯ ಉಂಟುಮಾಡುವಂತಹ ಹಾಗೂ ಪ್ರಾದೇಶಿಕತೆಗೆ ಅತೀತವಾದ ಸೂತ್ರವನ್ನು ಅನುದಾನ ಹಂಚಿಕೆಗಾಗಿ ರೂಪಿಸಿದೆ. ಈ ಸರ್ಕಾರಿ ಸೂತ್ರ ಅನಗತ್ಯವಾಗಿತ್ತು. ಆದ್ದರಿಂದ ಸರ್ಕಾರವು ಈಗಲಾದರೂ ಎಚ್ಚೆತ್ತುಕೊಂಡು ತಾನು ರೂಪಿಸಿರುವ ೫೦:೩೦:೨೦ ಸೂತ್ರವನ್ನು ಕೈಬಿಟ್ಟು ಸಮಿತಿಯ ಸೂತ್ರದನ್ವಯ ಅನುದಾನ ಹಂಚಿಕೆಯನ್ನು ಮಾಡಬೇಕು.

ಅಭಿವೃದ್ಧಿ ಸಂಬಂಧಿ ಪ್ರಾದೇಶಿಕ ಅಸಮಾನತೆಯನ್ನು ಸರ್ಕಾರವು ಗಂಭೀರವಾಗಿ ಪರಿಗಣಿಸಬೇಕು. ಮಾನ್ಯ ಮುಖ್ಯಮಂತ್ರಿ ಹಾಗೂ ಮಾನ್ಯ ಉಪಮುಖ್ಯಮಂತ್ರಿಗಳು ದಕ್ಷಿಣ ಕರ್ನಾಟಕ ಪ್ರದೇಶದಲ್ಲಿ ಪ್ರವಾಸ ಮಾಡುವುದನ್ನು ನಿಲ್ಲಿಸಿ ಗುಲಬರ್ಗಾ ವಿಭಾಗದ ಜಿಲ್ಲೆಗಳ ಗ್ರಾಮಗಳಿಗೆ ಭೇಟಿ ನೀಡಬೇಕು. ಮಂತ್ರಿಗಳು ಮತ್ತು ಶಾಸಕರ ಮಾತನ್ನು ಕೇಳುವುದರ ಜೊತೆಗೆ ಜನರ ಮಾತುಗಳನ್ನು ಆಲಿಸಬೇಕು. ಶಾಸಕರು ಹಾಗೂ ಮಂತ್ರಿಗಳನ್ನು ಮಾತ್ರ ಓಲೈಸಿದರೆ ಸಾಕಾಗುವುದಿಲ್ಲ. ಅದು ರಾಜಕಾರಣಿಗಳ ಕೆಲಸ. ರಾಜಕೀಯ ಮುತ್ಸದ್ದಿಯಾದವರು ಜನರ ಮಾತು ಕೇಳಬೇಕು. ಜನರ ಆಕ್ರಂದನಕ್ಕೆ ಓಗೊಡಬೇಕು. ಮಾನ್ಯ ಮುಖ್ಯಮಂತ್ರಿಗಳು ದಕ್ಷಿಣ ಕರ್ನಾಟಕ ಪ್ರದೇಶದಲ್ಲಿ ಒಂದು ತಿಂಗಳಲ್ಲಿ ಒಂದು ಗ್ರಾಮದಲ್ಲಿ ವಾಸ್ತವ್ಯ ಹೂಡಿದರೆ ಉತ್ತರ ಕರ್ನಾಟಕದಲ್ಲಿ ಎರಡು ಗ್ರಾಮಗಳಿಗೆ ಭೇಟಿ ನೀಡಬೇಕು. ಗುಲಬರ್ಗಾ ವಿಭಾಗ ಒಂದು ಕೋಟಿಗೂ ಮೀರಿದ ಜನರ ಬದುಕು ಬರಗಾಲದಿಂದ, ಒಣಭೂಮಿ ಬೇಸಾಯ ದಿಂದ, ಮಲೇರಿಯಾ-ಕಾಲರಗಳಂತಹ ರೋಗಗಳಿಂದ, ಚರಿತ್ರೆಯ ಆಘಾತದಿಂದ ತತ್ತರಿಸಿ ಹೋಗಿದೆ. ಈ ಹಿನ್ನೆಲೆಯಲ್ಲಿ ತಕ್ಷಣ ಅನುದಾನ ಹಂಚಿಕೆಗೆ ಸಂಬಂಧಿಸಿದ ಸರ್ಕಾರಿ ಸೂತ್ರಕ್ಕೆ ಪ್ರತಿಯಾಗಿ ಸಮಿತಿಯ ಸೂತ್ರಕ್ಕನುಗುಣವಾಗಿ ಅನುದಾನ ಹಂಚಬೇಕು. ಇದು ತುರ್ತಾಗಿ ನಡೆಯಬೇಕು.

**ಡಾ॥ ಬಿ. ಶೇಷಾದ್ರಿ**
ಉನ್ನತಾಧಿಕಾರ ಸಮಿತಿ ಸದಸ್ಯರು, ಬಳ್ಳಾರಿ
**ಡಾ॥ ಟಿ. ಆರ್. ಚಂದ್ರಶೇಖರ**
ಪ್ರಾಧ್ಯಾಪಕ, ಅಭಿವೃದ್ಧಿ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬



# ಬಸವಣ್ಣ ಮಾಡಿದ ಒಂದು ಬಹುದೊಡ್ಡ ತಪ್ಪು

ಪ್ರೊ|| ಸಿ. ಹೆಚ್. ಮರಿದೇವರು

◆

ಬಸವಣ್ಣ ವೀರಶೈವರ ಸ್ಥಾವರ ಲಿಂಗಕ್ಕೆ ಸಂಸ್ಕಾರ ನೀಡಿದ. ಇಷ್ಟಲಿಂಗವೆಂಬ ಪ್ರತ್ಯೇಕವಾದ ಹೆಸರು ಕೊಟ್ಟು ಅಸ್ಪೃಶ್ಯರು ಯಾವ ದೇಗುಲಕ್ಕೂ ಹೋಗಬೇಕಾಗಿಲ್ಲ, ದೇಹವೇ ದೇಗುಲ, ಇಷ್ಟಲಿಂಗವೇ ದೇವರು, ನಿತ್ಯ ಅದನ್ನು ಪೂಜಿಸಿರಿ ಎಂದು ಉಪದೇಶಿಸಿದ. ಇಷ್ಟಲಿಂಗವೆಂಬ ಕಷ್ಟಲಿಂಗವನ್ನು ಮಾಡಿದ್ದೇ ಬಸವಣ್ಣ ಮಾಡಿದ ಬಹು ದೊಡ್ಡ ತಪ್ಪು. ಆದರ ಬದಲು ಸಾಮಾಜಿಕ ಪರಿವರ್ತನೆಗೆ ಬೇರೆ ಯಾವುದಾದರೂ ಒಂದು ಚಿಹ್ನೆಯನ್ನು ಆಯ್ಕೆ ಮಾಡಿಕೊಂಡಿದ್ದಿದ್ದರೆ ಅದು ಬಸವಣ್ಣನ ಸಾಮಾಜಿಕ ಕ್ರಾಂತಿಗೆ ಒಂದು ಹೊಸ ವ್ಯಾಖ್ಯಾನವನ್ನೇ ಬರೆಸುತ್ತಿತ್ತು.

ಭರತಖಂಡದ ಮಹಾಪುರುಷರಲ್ಲಿ ಬಸವಣ್ಣ ಒಬ್ಬ. ಮನುಕುಲದಲ್ಲಿ ಹುಟ್ಟಿ ಜಗಜ್ಜ್ಯೋತಿ ಎನಿಸಿಕೊಂಡವನು. ಹನ್ನೆರಡನೇ ಶತಮಾನದಲ್ಲಿ ಆದ ಕಲ್ಯಾಣ ಕ್ರಾಂತಿಯ ಹರಿಕಾರ. ಕಳೆದ ಒಂಭತ್ತು ಶತಮಾನಗಳಲ್ಲಿ ಬಸವಣ್ಣನನ್ನು ಹೊಗಳಿದವರೆಷ್ಟು ತೆಗಳಿದವರೆಷ್ಟು ಎಂದು ಲೆಕ್ಕವಿಲ್ಲ. ಈಗಲೂ ಅವನನ್ನು ತೆಗಳುವವರೂ ಹೊಗಳುವವರೂ ಇದ್ದಾರೆ. ಆದರೆ ಬಸವಣ್ಣನೆಂಬ ಆನೆ ಜಾಗತಿಕ ಕ್ರಾಂತಿಯತ್ತ ದಾಪುಗಾಲು ಹಾಕುತ್ತಾ ನಡೆಯುತ್ತಲೇ ಇದೆ!!

ಬಸವಣ್ಣ ಗುರು ಆಗಲಿಕ್ಕೇ ಅರ್ಹನಲ್ಲ; ಅವನೇನಿದ್ದರೂ ನಮ್ಮ ಶಿಷ್ಯ ಎಂತಲೂ, ಬಸವಣ್ಣ ಎಲ್ಲ ಕೋಮಿನ ಜನಕ್ಕೆ ಲಿಂಗ ಕಟ್ಟಿ ವೀರಶೈವ ಧರ್ಮವನ್ನೇ ಹಾಳುಮಾಡಿಬಿಟ್ಟ ಎಂತಲೂ, ಬಸವಣ್ಣ ವರ್ಣಸಂಕರ ಮಾಡಿ ಮೇಲ್ವರ್ಗದ ಜನರ ಜಾತಿಯನ್ನೇ ಕೆಡಿಸಿಬಿಟ್ಟ ಎಂತಲೂ, ಬಸವಣ್ಣ ಗುರುವಿರಕ್ತರಲ್ಲಿ ಭೇದ ಉಂಟಾಗಲು ಕಾರಣನಾದನೆಂತಲೂ, ಬಸವಣ್ಣ ಎಂದಿಗೂ ಜಂಗಮ ಶ್ರೇಷ್ಠನಾಗಲಾರ ಮತ್ತು ಅವನಿಗೆ ಎಂದಿಗೂ ದೀಕ್ಷೆ ಕೊಡುವ ಹಕ್ಕಿಲ್ಲ ಎಂತಲೂ, ಬಸವಣ್ಣ ದಲಿತ ವರ್ಗದವರಿಂದ ಬಂದವನಂತೆ ವರ್ತಿಸುತ್ತಿದ್ದಾನೆ ಎಂತಲೂ, ಬಸವಣ್ಣ ವೀರಶೈವ ಧರ್ಮದ ಶ್ರೇಷ್ಠತೆಯನ್ನು ಮಣ್ಣುಪಾಲು ಮಾಡಿಬಿಟ್ಟ ಎಂತಲೂ – ಅನೇಕಾನೇಕ ಆರೋಪಗಳನ್ನು ಬಸವಣ್ಣನ ಮೇಲೆ ಹೊರಿಸುತ್ತಲೇ ಬಂದಿದ್ದಾರೆ. ಈಗಲೂ ಈ ಆರೋಪಗಳು ನಿಂತಿಲ್ಲ.

ಕೂಡಲಸಂಗಮದ ಗುರುಕುಲದಲ್ಲಿ ವೇದೋಪನಿಷತ್ತುಗಳನ್ನು ಕರತಲಾಮಲಕ ಮಾಡಿಕೊಂಡ ಬಸವಣ್ಣ, ಸಂಗಮನಾಥನ ಪೂಜೆಗೆ ಬರುತ್ತಿದ್ದ ಅರ್ಚಕರನ್ನು ನೋಡಿದ. ಅವರು ತಲೆಯ ಮೇಲೆ, ಭುಜದ ಮೇಲೆ ಸ್ಥಾವರಲಿಂಗಗಳನ್ನು ಕಟ್ಟಿಕೊಂಡು ಪೂಜಿಸುತ್ತಿದ್ದುದನ್ನು ಗಮನಿಸಿದ್ದ. ಅದು ಇವನ ಕಣ್ಣಿಗೆ ಬೀಳದೆ ಇದ್ದಿದ್ದರೆ ಚೆನ್ನಿತ್ತು!

ಬಸವಣ್ಣನ ಕಾಲದಲ್ಲಿ ಮನುವಿನ ಶ್ರೇಣೀಕೃತ ಸಮಾಜ ಅಸ್ತಿತ್ವದಲ್ಲಿತ್ತು. ಇಂತಹ ವರ್ಗೀಕೃತ ಸಮಾಜದಲ್ಲಿ ಶೂದ್ರರ ಸ್ಥಿತಿ ಚಿಂತಾಜನಕವಾದುದಾಗಿತ್ತು. ಅವರು ಬ್ರಾಹ್ಮಣರ ಕೇರಿಗಳಲ್ಲಿ ತಿರುಗಾಡುವಾಗ ನೆಲದ ಮೇಲೆ ಅವರ ಹೆಜ್ಜೆ ಗುರುತುಗಳು ಮೂಡುತ್ತವೆ. ಹಾಗೆ ಮೂಡಿದ ಹೆಜ್ಜೆ ಗುರುತುಗಳನ್ನು ಅಳಿಸಿಕೊಂಡು ಬರಲು ಅವರು ತಮ್ಮ ಸೊಂಟಕ್ಕೆ ಉದ್ದನೆಯ ಕಸಬರಿಕೆ ಕಟ್ಟಿಕೊಂಡು ಬರಬೇಕಿತ್ತು. ಇಂತಹ ಹತ್ತಾರು ಹೀನಾಯ ಕಟ್ಟಳೆಗಳ ಬಂಧನದಲ್ಲಿ ಅವರು ಸೊರಗಿ ಹೋಗಿದ್ದರು. ಗುರುಕುಲದಿಂದ ಹಿಂತಿರುಗಿಬಂದ ಬಸವಣ್ಣನಿಗೆ ಬಿಜ್ಜಳನ ಅರಮನೆಯಲ್ಲಿ ಕರಣಿಕನ ಸ್ಥಾನ ದೊರಕಿತು. ಆಗಲೇ ಅವನಿಗೆ ವಿವಾಹವೂ ಆಯ್ತು. ಆ ವೇಳೆಗೆ ಅವನ ಹೃದಯಮಂದಿರದಲ್ಲಿ ಸಾಮಾಜಿಕ ಪರಿವರ್ತನೆಯ ಹೂವು ಅರಳಿದ್ದಿತು. ಬಸವಣ್ಣ ಅದಕ್ಕಾಗಿ ಒಂದು ಚಿಹ್ನೆ ಅಥವಾ ಕುರುಹನ್ನು ಹುಡುಕತೊಡಗಿದ. ಆಗ 'ಅವನಿಗೆ ಜ್ಞಾಪಕಕ್ಕೆ ಬಂದದ್ದು ಪುರಾತನ ಶೈವಪರಂಪರೆಯ ವೀರಶೈವರ ಆಚರಣೆಯಲ್ಲಿದ್ದ ಚಿಕ್ಕ ಚಿಕ್ಕ ಸ್ಥಾವರ ಲಿಂಗಗಳ ಪೂಜೆ. ಬಸವಣ್ಣ ಅಂಗದ ಮೇಲೆ ಕಟ್ಟಿಕೊಳ್ಳುವ ಸ್ಥಾವರಲಿಂಗಗಳನ್ನು ನೋಡಬಾರದಿತ್ತು ಮತ್ತು ತನ್ನ ಸಾಮಾಜಿಕ ಪರಿವರ್ತನೆಗೆ ಒಂದು ಕುರುಹಾಗಿ ಅಂತಹ ಸ್ಥಾವರ ಲಿಂಗಗಳನ್ನು ಆಯ್ಕೆ ಮಾಡಿಕೊಳ್ಳಬಾರದಿತ್ತು.

ಬಿಜ್ಜಳನ ಆಸ್ಥಾನದಲ್ಲಿ ಸಿಕ್ಕ ಒಂದು ತಾಳೆಯೋಲೆಯನ್ನು ಯಾರೊಬ್ಬರಿಂದಲೂ ಓದಲಾಗದಿದ್ದಾಗ ಬಸವಣ್ಣ ಅದನ್ನು ಓದಿ ಅರ್ಥವನ್ನು ಹೇಳಿ ಬಿಜ್ಜಳ ಮಹಾರಾಜನಿಗೆ ಅಪಾರ ನಿಧಿ ಸಿಕ್ಕುವಂತೆ ಮಾಡಿಬಿಟ್ಟ. ಅದು ಬಿಜ್ಜಳನಿಗೆ ಮಹದಾನಂದ ಉಂಟುಮಾಡಿತು ಮತ್ತು ಬಸವಣ್ಣನನ್ನು ಮುಖ್ಯಮಂತ್ರಿ ಗಾದಿಗೇರಿಸಲು ಪ್ರೇರಣೆ ನೀಡಿತು. ಇದು ವಾಸ್ತವವೋ ಐತಿಹ್ಯವೋ ತಿಳಿಯದು.

ಬಸವಣ್ಣ ವೀರಶೈವರ ಆಚರಣೆಯಲ್ಲಿದ್ದ ಅತಿ ಚಿಕ್ಕದಾದ ಸ್ಥಾವರ ಲಿಂಗವನ್ನು ಆಯ್ಕೆ ಮಾಡಿಕೊಂಡ ನಂತರ ಮಾದಿಗರ ಹರಳಯ್ಯನಿಂದ ಹಿಡಿದು ಸ್ವಯಂ ತನ್ನವರೆಗೆ ಎಲ್ಲ ಕಸುಬಿನ ಎಲ್ಲ ಜಾತಿಯ ಜನಕ್ಕೆ ಅದನ್ನು ಬಸವಣ್ಣ ಕಟ್ಟಿಬಿಟ್ಟ. ಅದರ ಮೇಲೆ ನೂರಾರು ವಚನಗಳನ್ನು ಬರೆದುಬಿಟ್ಟ ಕೂಡ. ಬಸವಣ್ಣ ವೀರಶೈವರ ಸ್ಥಾವರ ಲಿಂಗಕ್ಕೆ ಸಂಸ್ಕಾರ ನೀಡಿದ. ಇಷ್ಟಲಿಂಗವೆಂಬ ಪ್ರತ್ಯೇಕವಾದ ಹೆಸರು ಕೊಟ್ಟು ಅಸ್ಪೃಶ್ಯರು ಯಾವ ದೇಗುಲಕ್ಕೂ ಹೋಗಬೇಕಾಗಿಲ್ಲ, ದೇಹವೇ ದೇಗುಲ, ಇಷ್ಟಲಿಂಗವೇ ದೇವರು, ನಿತ್ಯ ಅದನ್ನು ಪೂಜಿಸಿರಿ ಎಂದು ಉಪದೇಶಿಸಿದ. ಇಷ್ಟಲಿಂಗವೆಂಬ ಕಷ್ಟಲಿಂಗವನ್ನು ಮಾಡಿದ್ದೇ ಬಸವಣ್ಣ ಮಾಡಿದ ಬಹು ದೊಡ್ಡ ತಪ್ಪು. ಆದರ ಬದಲು ಸಾಮಾಜಿಕ ಪರಿವರ್ತನೆಗೆ ಬೇರೆ ಯಾವುದಾದರೂ ಒಂದು ಚಿಹ್ನೆಯನ್ನು ಆಯ್ಕೆ ಮಾಡಿಕೊಂಡಿದ್ದಿದ್ದರೆ ಅದು ಬಸವಣ್ಣನ ಸಾಮಾಜಿಕ ಕ್ರಾಂತಿಗೆ ಒಂದು ಹೊಸ ವ್ಯಾಖ್ಯಾನವನ್ನೇ ಬರೆಸುತ್ತಿತ್ತು.

ಬಸವಣ್ಣನು ಕಟ್ಟಿದ ನವನವೋನ್ಮೇಷಶಾಲಿನಿಯಾದ ಅಸ್ಪೃಶ್ಯಾತೀತ, ಜಾತ್ಯತೀತ ಸಮಾಜ ಬಸವ ಧರ್ಮದ ಹೆಸರಿನಲ್ಲಿ ವಿಶ್ವದಾದ್ಯಂತ ಸರ್ವಜನಾಂಗದ ಶಾಂತಿಯ ತೋಟವಾಗಿ ರಾರಾಜಿಸುತ್ತಲಿತ್ತು.

ಬಸವಣ್ಣ ಸಂಸ್ಕಾರ ಕೊಟ್ಟು ಕಟ್ಟಿದ ಇಷ್ಟಲಿಂಗಗಳನ್ನು ಎಲ್ಲ ಕೋಮಿನ ಜನ ಕಟ್ಟಿಕೊಂಡು ಲಿಂಗಾಯತರಾದರು. ವೀರಶೈವರೂ ಇದೇ ಇಷ್ಟಲಿಂಗಗಳನ್ನು ಕಟ್ಟಿಕೊಂಡರು. ವೀರಶೈವರು ಲಿಂಗಾಯತದೊಳಕ್ಕೆ ತೂರಿಕೊಂಡರು. ಲಿಂಗಾಯತರು ವೀರಶೈವದೊಳಕ್ಕೆ ತೂರಿಕೊಳ್ಳದಿದ್ದಾಗ್ಯೂ ಮೇಲ್ನೋಟಕ್ಕೆ ವೀರಶೈವರೂ ಲಿಂಗಾಯತರೂ ಒಂದೇ ಎನ್ನುವಂತಾಗಿಬಿಟ್ಟಿತು. ಲಿಂಗಾಯತರ ಸಂಖ್ಯೆ ವೀರಶೈವರ ಸಂಖ್ಯೆಗಿಂತ ಸಹಸ್ರಪಟ್ಟು ಹೆಚ್ಚಾಗಿಹೋಯಿತು. ಆಗ ವೀರಶೈವರಲ್ಲೇ ಇದ್ದ ಜಾತಿಜಂಗಮರು ತಾವು ಶ್ರೇಷ್ಠ; ಬಸವಪ್ರಣೀತ ಲಿಂಗಾಯಿತರೆಲ್ಲ ಕನಿಷ್ಠ ಎಂಬ ಅಡ್ಡಗೋಡೆಗಳನ್ನು ಕಟ್ಟಿ ಬಸವಧರ್ಮ ಬೆಳೆಯದಂತೆ ಅಡಿಗಡಿಗೆ ತಡೆ ಒಡ್ಡುತ್ತ ಬಂದರು. ಈ ರೀತಿಯ ಅಡ್ಡಗೋಡೆಗಳ ಕಟ್ಟುವಿಕೆ ಕಲ್ಯಾಣಕ್ರಾಂತಿಯ ನಂತರ ಅತಿಯಾಗಿ ಹೋಯ್ತು.

ಮೊದಲಿದ್ದ ಶ್ರೇಣೀಕೃತ ಸಮಾಜದಲ್ಲಿ ವ್ಯಾಪಕವಾಗಿದ್ದ ಸ್ಪೃಶ್ಯ ಅಸ್ಪೃಶ್ಯಗಳ ಕಂದರ ವೀರಶೈವ ಲಿಂಗಾಯತರಲ್ಲೂ ವ್ಯಾಪಕವಾಗಿ ಕಾಣಿಸಿಕೊಂಡಿತು. ವೀರಶೈವರೆಲ್ಲ ಸ್ಪೃಶ್ಯರು, ಲಿಂಗಾಯತರೆಲ್ಲ ಅಸ್ಪೃಶ್ಯರು ಎನ್ನುವ ಬಿರುಕನ್ನು ಜಾತಿಜಂಗಮರು ಮತ್ತು ಪಂಚಾಚಾರ್ಯರುಗಳು ದೊಡ್ಡದಾಗಿಸುತ್ತ ಬಂದರು. ಇಷ್ಟೆಲ್ಲ ಆದದ್ದು ಬಸವಣ್ಣ ಮಾಡಿದ ಒಂದು ಬಹುದೊಡ್ಡ ತಪ್ಪಿನಿಂದ. ವೀರಶೈವರಲ್ಲಿದ್ದ ಕುರುಹನ್ನು ಲಿಂಗಾಯತರ ಕುರುಹನ್ನಾಗಿ ಪರಿವರ್ತಿಸಿದ್ದೇ ವೀರಶೈವವೆಂಬ ಕೂಪದಲ್ಲಿದ್ದ ಕಪ್ಪೆಗಳೆಲ್ಲ ಬಸವಣ್ಣನ ವಿರುದ್ಧ ವಟಗುಟ್ಟಲು ಕಾರಣವಾಯ್ತು.

ಮೇಲ್ನೋಟಕ್ಕೆ ವೀರಶೈವರು, ಲಿಂಗಾಯತರು ಒಂದೇ. ಇಬ್ಬರೂ ಇಷ್ಟಲಿಂಗವನ್ನೇ ಕಟ್ಟಕೊಂಡಿದ್ದಾರೆ. ಮೂಲ ವೀರಶೈವರು ಕಟ್ಟುತ್ತಲಿದ್ದ ಸ್ಥಾವರಲಿಂಗಗಳನ್ನು ಕೈಬಿಟ್ಟಿದ್ದಾರೆ. ಬಸವಣ್ಣ ಎಲ್ಲ ಕೋಮಿನ ಜನಕ್ಕೇ ಕಟ್ಟಿದ ಇಷ್ಟಲಿಂಗಕ್ಕೂ ವೀರಶೈವರು ಕಟ್ಟುವ ಇಷ್ಟಲಿಂಗಕ್ಕೂ ಇಂದು ವ್ಯತ್ಯಾಸವಿಲ್ಲ.

ಕ್ರೈಸ್ತರಲ್ಲಿ ಕ್ಯಾಥೊಲಿಕ್ ಮತ್ತು ಪ್ರಾಟೆಸ್ಟೆಂಟ್ ಎಂಬ ಎರಡು ಪ್ರಧಾನ ಶಾಖೆಗಳಿವೆ. ಅದರಂತೆ ವೀರಶೈವರಲ್ಲಿ ಕ್ಯಾಥೊಲಿಕರು ವೀರಶೈವರು; ಪ್ರಾಟೆಸ್ಟಂಟರು ಲಿಂಗಾಯತರು, ಕ್ಯಾಥೊಲಿಕ್ ವೀರಶೈವರು ಸಂಪ್ರದಾಯವಾದಿಗಳು. ಮೂಢನಂಬಿಕೆಗಳ ದಾಸಾನುದಾಸರು. ಅವೈಜ್ಞಾನಿಕ ವಿಚಾರಗಳನ್ನು ಮೇಲಿಂದ ಮೇಲೆ ಪ್ರತಿಪಾದಿಸುವವರು. ಲಿಂಗಾಯತರು ಬಸವಣ್ಣನ ಕಾಲದವರು. ಬಸವಣ್ಣನಿಂದ ಲಿಂಗಾಯತರಾದವರು. ಬಸವಣ್ಣನ ವಿಚಾರ ಬುದ್ಧಿಯವರು, ಬಸವಣ್ಣ, ಸಿದ್ಧರಾಮ ಇತ್ಯಾದಿ ಶರಣರ ಆರಾಧಕರು.

ಪ್ರಾಟೆಸ್ಟಂಟ್ ಲಿಂಗಾಯತರು ಕ್ಯಾಥೊಲಿಕ್ ವೀರಶೈವರನ್ನು ಡೈವೋರ್ಸ್ ಮಾಡುವುದೇ ಪರಿಹಾರಕ್ಕೆ ಏಕೈಕ ಮಾರ್ಗ. ಡೈವೋರ್ಸ್ ಮಾಡುವ ಬಗೆ ಹೇಗೆ? ಲಿಂಗಾಯತರು ಬಸವಣ್ಣ ಕೊಟ್ಟ ಇಷ್ಟಲಿಂಗವನ್ನು ಕೈಬಿಡುವುದು. (ಈಗಾಗಲೇ ಅನೇಕ ಜನ ಬಿಟ್ಟಿದ್ದಾರೆ.)

ಇಷ್ಟಲಿಂಗವನ್ನು ಕೈಬಿಟ್ಟರೆ ಲಿಂಗಾಯತರಿಗೆ ಬೇರಾವ ಚಿಹ್ನೆ ಸೂಕ್ತ ಎಂಬ ಪ್ರಶ್ನೆ ಏಳುತ್ತದೆ. ಅದಕ್ಕೆ ಕಷ್ಟವಾಗಿರುವ ಇಷ್ಟಲಿಂಗಕ್ಕೆ ಬದಲಾಗಿ ಬಸವಣ್ಣನ ಒಂದು ಡಾಲರ್ ಅನ್ನು ಕೊರಳಲ್ಲಿ ಧರಿಸಿ ಲಿಂಗಾಯತರೆಲ್ಲರೂ ಬಸವಾಯತರಾಗಿಬಿಡುವುದು ವಿಹಿತ. ವೀರಶೈವರ ಪಾಡಿಗೆ ಅವರನ್ನು ಬಿಟ್ಟುಬಿಡುವುದು.

ಹೀಗೆ ಮಾಡುವುದರಿಂದ ಬಸವಾಯತರ ಸಂಖ್ಯೆ ಹೆಚ್ಚುತ್ತದೆ. ಎಲ್ಲ ಧರ್ಮೀಯರನ್ನೂ ಬಸವಧರ್ಮದ ತೆಕ್ಕೆಗೆ ಸೇರಿಸಿಕೊಳ್ಳುತ್ತಾ ಹೋಗಬಹುದು. ಬಸವ ಧರ್ಮೀಯರಿಗೆ ವಿಪುಲವಾದ ವಚನಸಾಹಿತ್ಯ ಭಂಡಾರವಿದೆ.

ಬಸವಣ್ಣ ಮಾಡಿದ ಒಂದು ದೊಡ್ಡ ತಪ್ಪನ್ನು ಇಂದು ಸರಿಪಡಿಸೋಣ. ಲಿಂಗಾಯತ ಎಂದು ಕರೆದುಕೊಳ್ಳುವುದನ್ನು ಬಿಟ್ಟು ಬಸವಾಯತರಾಗೋಣ. ಇದು ಇಪ್ಪತ್ತೊಂದನೆಯ ಶತಮಾನದಲ್ಲಿ ಆಗಬೇಕಾಗಿರುವ ಒಂದು ವಿನೂತನ ಸಾಮಾಜಿಕ ಕ್ರಾಂತಿ.

**ಪ್ರೊ॥ ಸಿ. ಹೆಚ್. ಮರಿದೇವರು**
'ಕಲ್ಪವೃಕ್ಷ', ಯಲ್ಲಾಪುರ, ಅರಕೆರೆ ಅಂಚೆ, ತುಮಕೂರು ತಾಲ್ಲೂಕು/ಜಿಲ್ಲೆ

ಶ್ರದ್ಧಾಂಜಲಿ

## ಪ್ರೊ॥ ಸಣ್ಣಗುಡ್ಡಯ್ಯನವರು : ಸ್ಥಳೀಯ ಸಂಸ್ಕೃತಿಯ ಉಸಿರು

ಪ್ರೊ॥ ಎಚ್. ಜಿ. ಸಣ್ಣಗುಡ್ಡಯ್ಯನವರು ದಿನಾಂಕ ೧೭-೯-೨೦೦೭ರಂದು ಕೊನೆಯುಸಿರೆಳೆದರು. ಕೆಲದಿನಗಳಿಂದ ಅಸ್ವಸ್ಥರಾಗಿದ್ದರೂ ಅಪಾರ ಮನೋಬಲವುಳ್ಳ ಅವರ ಸಾವನ್ನು ನಾವ್ಯಾರೂ ಇಷ್ಟು ಬೇಗ ನಿರೀಕ್ಷಿಸಿರಲಿಲ್ಲ. ಕೊನೆಯ ಗಳಿಗೆಯವರೆಗೆ ಮುಂದೆ ಏನೇನು ಬರೆಯಬೇಕೆಂದು ಮನೆಯವರೊಂದಿಗೆ ಮಾತಾಡುತ್ತ ಮಧ್ಯಾಹ್ನ ಮಲಗಿದವರು ಮತ್ತೆ ಮೇಲೇಳಲಿಲ್ಲ. ಮಲಗಿದಲ್ಲೇ ಮಣ್ಣಾದರು. ಮಣ್ಣಾಗಿಯೂ ತುಮಕೂರು ಸಾಂಸ್ಕೃತಿಕ ವಲಯದ ಕಣ್ಣಾಗಿಯೇ ಉಳಿದರು. ಯಾಕೆಂದರೆ, ಅರವತ್ತು ಮತ್ತು ಎಪ್ಪತ್ತರ ದಶಕದಲ್ಲಿ ಅವರು ಸ್ಥಳೀಯ ಸಾಂಸ್ಕೃತಿಕ ವಲಯಕ್ಕೆ ಕೊಟ್ಟ ದೃಷ್ಟಿ ಧೋರಣೆಗಳು ಇಂದಿಗೂ ಅನನ್ಯವಾಗಿವೆ.

ಸಣ್ಣಗುಡ್ಡಯ್ಯನವರ ಮಹತ್ವ ಇರುವುದು ಅಭಿರುಚಿ ನಿರ್ಮಾಣದ ನಿರಂತರ ಪ್ರಕ್ರಿಯೆಯಲ್ಲಿ. ನವೋದಯ ಮತ್ತು ನವ್ಯ ಸಾಹಿತ್ಯಗಳ ಸಮೀಪವರ್ತಿಯಾಗಿಯೂ 'ದೂರ' ಕಾಯ್ದುಕೊಳ್ಳುವ ದೂರದೃಷ್ಟಿಯಿದ್ದ ಸಣ್ಣಗುಡ್ಡಯ್ಯನವರು ಎಲ್ಲ ಹೊಸತನ್ನು ಸ್ವಾಗತಿಸುತ್ತಲೇ ಪರಂಪರೆಯ ಪ್ರಜ್ಞೆಯಲ್ಲಿ ಬೇರುಬಿಟ್ಟು ಬೆಳೆದರು. ಅವರದು ಆತ್ಮವಂಚನೆ ಮಾಡಿಕೊಳ್ಳದ ವ್ಯಕ್ತಿತ್ವ. ಅಂತಃಕರಣವನ್ನು ಒಳಗೊಂಡ ನಿಷ್ಠುರತೆ. ವ್ಯಕ್ತಿ ಮತ್ತು ಸಮಾಜಗಳ ನಡುವೆ 'ಉರಿಯ ಉಯ್ಯಾಲೆ'ಯಲ್ಲಿ ಸುಖಿಸುವ ಮನೋಧರ್ಮ. ಹದ್ದುಗಳ ಎದುರು ಎದ್ದು ನಿಲ್ಲುವ ಎದೆಗಾರಿಕೆ. ಕೆಲವೊಮ್ಮೆ ಅನಗತ್ಯ ಹಟಯೋಗದ ವ್ಯಕ್ತಿ ವೈಪರೀತ್ಯ. ಮತ್ತೊಮ್ಮೆ ಹಟ ಮೀರಿದ ಮನುಷ್ಯ ಸಂಬಂಧ. ಇದು ಸಣ್ಣಗುಡ್ಡಯ್ಯನವರ ವ್ಯಕ್ತಿತ್ವ ವಿಶೇಷ.

ಬೆಂಗಳೂರು, ಮೈಸೂರು, ಧಾರವಾಡದಂತಹ 'ಕೇಂದ್ರ'ಗಳಾಚೆಗೆ ತಂತಮ್ಮ ಊರುಗಳಲ್ಲಿ ಸಾಂಸ್ಕೃತಿಕ ಸದಭಿರುಚಿಯ ಬೇರುಗಳನ್ನು ಗಟ್ಟಿಗೊಳಿಸುತ್ತ ಬಂದ ಮುಖ್ಯ ವ್ಯಕ್ತಿತ್ವಗಳಲ್ಲಿ ಸಣ್ಣಗುಡ್ಡಯ್ಯನವರನ್ನು ಹೆಸರಿಸಲೇಬೇಕು. ಸ್ಥಳೀಯ ಸಾಂಸ್ಕೃತಿಕ ಚರಿತ್ರೆಯ ರಚನೆ ಇಂದಿನ ಅಗತ್ಯಗಳಲ್ಲೊಂದಾಗಿದ್ದು, ಅದರಲ್ಲಿ ಸಣ್ಣಗುಡ್ಡಯ್ಯನವರಂತಹ ಕ್ರಿಯಾಶೀಲರ ಪಾತ್ರ ಸರಿಯಾಗಿ ದಾಖಲಾಗಬೇಕಾಗಿದೆ. ಸ್ವತಃ ಸಣ್ಣಗುಡ್ಡಯ್ಯನವರು ಬರೆದದ್ದು ಕಡಿಮೆ. ಆದರೆ ಬರೆದದ್ದೆಲ್ಲವೂ ಗಮನಾರ್ಹವಾಗಿದೆಯೆಂಬ ಮಾತು ಔಪಚಾರಿಕವಲ್ಲ. ಏಕಾಂತ ಮತ್ತು ಇತರ ಪ್ರಬಂಧಗಳು, ಹದ್ದು ಮತ್ತು ಇತರ ಪ್ರಬಂಧಗಳು – ಈ ಎರಡು ಲಲಿತಪ್ರಬಂಧ ಕೃತಿಗಳು ಸಣ್ಣಗುಡ್ಡಯ್ಯನವರ ಲಲಿತಪ್ರಬಂಧ ಪ್ರತಿಭೆಯ ಪ್ರಬುದ್ಧ ಪ್ರತೀಕಗಳಾಗಿವೆ. ಅಭೀಪ್ಸೆ, ವಸಂತದ ಕನಸುಗಳು ಮತ್ತು ಭಿನ್ನ – ಎಂಬ ಕವನ ಸಂಕಲನಗಳು ಗಮನೀಯ ಕೃತಿಗಳಾಗಿವೆ. 'ಪಾರಿಜಾತ' ಎಂಬ ಪ್ರೇಮಕವಿತೆಗಳ ಆ್ಯಂಥಾಲಜಿಯನ್ನು ಇವರು ಸಂಪಾದಿಸಿದ್ದಾರೆ. ಒಟ್ಟಾರೆ ಹೇಳುವುದಾದರೆ ಬೆಚ್ಚಗಿನ ಸೌಂದರ್ಯ ಪ್ರಜ್ಞೆ ಮತ್ತು ಎಚ್ಚರದ ಸಾಮಾಜಿಕ ಪ್ರಜ್ಞೆಗಳ ಎರಕದಲ್ಲಿ ರೂಪುತಳೆದ ಸಣ್ಣಗುಡ್ಡಯ್ಯನವರ ಕೃತಿಗಳಲ್ಲಿ ಸದಭಿರುಚಿಯ ಒಳಹರವು ಸದಾ ಸೇರಿಕೊಂಡು ವಿಶಿಷ್ಟ ಆಕೃತಿಗೆ ಕಾರಣವಾಗಿದೆ. ಅವರು ಒಂದು ಕಡೆ ಹೀಗೆ ಬರೆದಿದ್ದಾರೆ: ''ನನ್ನ ಪದ್ಯಗಳು ಕನ್ನಡದ ಪ್ರಗಲ್ಭ ವಿಮರ್ಶಕರ ಅಥವಾ ಸಂಕಲನಕಾರರ ಕೃಪೆಗೆ ಒಳಗಾಗದೆ ಅಜ್ಞಾತವಾಗಿ ಉಳಿಯಬೇಕಾಗಿ ಬಂದದ್ದು ಬಹುಮಟ್ಟಿಗೆ ನನ್ನ ಅವಜ್ಞೆಯಿಂದ ಅಥವಾ ಕನ್ನಡ ಸಾಹಿತ್ಯದ ಕಲುಷಿತ ಇತಿಹಾಸದಿಂದ''. ಈ ಮಾತುಗಳಲ್ಲಿರುವ 'ಅಥವಾ' ಬದಲು 'ಮತ್ತು' ಎಂಬ ಪದ ಸೇರಿದರೆ ಸೂಕ್ತವಾದೀತು. ಯಾಕೆಂದರೆ ಎರಡು ಕಾರಣಗಳೂ ನಿಜ.

ಸಣ್ಣಗುಡ್ಡಯ್ಯನವರ ದೇಹದೊಳಗಿನ ಉಸಿರು ನಿಂತಿದೆ. ಆದರೆ ಅದೇ ಉಸಿರು ದೇಹದ ಹೊರಬಂದು ಸಾಂಸ್ಕೃತಿಕ ಪರಿಸರದಲ್ಲಿ ಸಂಚರಿಸುತ್ತಲೇ ಇರುತ್ತದೆ.

– ಬರಗೂರು ರಾಮಚಂದ್ರಪ್ಪ

# ಬೊಳುವಾರು ಕತೆಗಳು ಕೆಲ ಟಿಪ್ಪಣಿಗಳು

ರಾಮಲಿಂಗಪ್ಪ ಟಿ. ಬೇಗೂರು

**ಬಂ**ಡಾಯ ಸಾಹಿತ್ಯ ಸಂಘಟನೆ ಸ್ಥಾಪಿತವಾದದ್ದು ೧೯೭೯ರಲ್ಲಿ. ಬೊಳುವಾರು ತಮ್ಮ ಮೊದಲ ಕಥಾಸಂಕಲನ 'ಅತ್ತ ಇತ್ತಗಳ ಸುತ್ತ ಮುತ್ತ' ಪ್ರಕಟಿಸಿದ್ದು ೧೯೭೯ರಲ್ಲಿ. ಬಂಡಾಯ ಕಾಲಘಟ್ಟ ಮತ್ತು ಚಳವಳಿಯ ಯುಗಧರ್ಮ ಬೊಳುವಾರರ ಕಥನದ ಮೇಲೆ ಸಾಕಷ್ಟು ಪ್ರಭಾವ ಬೀರಿವೆ. ಮನೋಧರ್ಮ ಅಥವಾ ಸಂವೇದನೆಯ ದೃಷ್ಟಿಯಿಂದ ಬೊಳುವಾರರಲ್ಲಿ ಬಂಡಾಯ ಸಾಕಷ್ಟು ಇದೆ. ಆದರೆ ಸಂಘಟನಾತ್ಮಕ ಮುಖ ಇದ್ದ ಬಂಡಾಯ ಚಳವಳಿಯ ಜೊತೆ ಬೊಳುವಾರು ತಮ್ಮನ್ನು ಗುರ್ತಿಸಿಕೊಂಡವರಲ್ಲ.

ಬೊಳುವಾರು ಕರಾವಳಿ ಕನ್ನಡಿಗ ಆಗಿರುವುದರಿಂದ ಕರಾವಳಿ ತೀರದ ಸಂಸ್ಕೃತಿ ಇವರ ಕತೆಗಳಲ್ಲಿ ಮೈತಾಳಿದೆ. ಇವರ ಕಥನದಲ್ಲಿ ಬೆನ್ನೆಲುಬಾಗಿ ಅಲ್ಲಾಹು, ದಿವ್ಯ ಕುರಾನ್, ಮಾಸ್ತಿ, ಪಂಜೆ, ಎಲ್ಲವೂ ಉಂಟು. ಹೀಗಾಗಿ ಇವರ ಮುಸ್ಲಿಂ ಸಂವೇದನೆ ಈ ಎಲ್ಲವನ್ನೂ ಒಳಗೊಂಡ ಸಂವೇದನೆ.

ಮುಸ್ಲಿಂ ಸಂವೇದನೆ ಎಂಬುದು ಇವರಲ್ಲಿ ದ್ವೀಪದ ಥರ ಪ್ರತ್ಯೇಕಿತ ಮತ್ತು ವಿಶಿಷ್ಟ ಅಲ್ಲ. ಇವರ ಮುಸ್ಲಿಂ ಸಂವೇದನೆ ರೊಟ್ಟಿ ಪಾತುಮ್ಮ, ಮುಕುಂದಣ್ಣ, ಮಸ್ಲಿಯಾರ್, ಗಿರಿಜ, ಚಂದ್ರಣ್ಣ, ಆದಂ ಸಾಹುಕಾರ, ಸೀದಿ ಸಾಹುಕಾರ, ಮರಿಯಮ್ಮ ಮೆಹರುನ್ನೀಸಾ, ರಹಮಾನ್ ರಮೇಶ್, ಜೋಸೆಫ್ ರಹಮತ್, ಇದ್ದತ್ ಅಖಿರತ್, ಜನ್ನತ್, ವಲು, ಮಲಾಯಿಕರು ಹೀಗೆ ಈ ಎಲ್ಲ ಮೇಳೈಸಿದ ಸಾಂಸ್ಕೃತಿಕ ಬದುಕಿನ ಉತ್ಪನ್ನ. ಇವರ ಮುಸ್ಲಿಂ ಸಂವೇದನೆ ದಟ್ಟ ಆಚಾರಗಳ ಮುಸ್ಲಿಂ ಲೋಕದ ಪ್ರತಿನಿಧೀಕರಣ ಅಲ್ಲ. ಅದು ಕರಾವಳಿ ಪ್ರದೇಶದ ಮುಸ್ಲಿಮರೂ, ಹಿಂದೂಗಳೂ, ಕಿರಿಸ್ತಾನರೂ ವಾಸಮಾಡುವ ಮುತ್ತುಪ್ಪಾಡಿ ಎಂಬ ಸಾಹಿತ್ಯಕ ವಾಸ್ತವದ ಸಂಸ್ಕೃತಿಯ ಪ್ರತಿನಿಧೀಕರಣ.

ಇವರ ಮುಸ್ಲಿಂ ಸಂವೇದನೆ ಇವರ ಕತೆಗಳಲ್ಲಿ ಸೂಕ್ಷ್ಮ ಸಂವೇದಿ ಮುಸಲ್ಮಾನನೊಬ್ಬ ಮುಸಲ್ಮಾನ ಸಮಾಜವನ್ನು ನೋಡಿದಾಗ ಹುಟ್ಟುವ ಸಂವೇದನೆ ಅಲ್ಲ. ಒಟ್ಟಾರೆ ಹಲವು ಜಾತಿಯ, ಹಲವು ಧರ್ಮದ ಜನಗಳು ಬಾಳುವ ಕಡೆ ನಿರ್ದಿಷ್ಟವಾಗಿ ಬಡವರು ಮತ್ತು ಶ್ರೀಮಂತರು ಎಂಬ ಎರಡು ವರ್ಗಗಳು ಇರುವ ಸಮಾಜವನ್ನು ಒಳಗಣ್ಣಿನಿಂದ ನೋಡುವ ಒಬ್ಬ ಮುಸಲ್ಮಾನ ಕತೆಗಾರನ ಸಂವೇದನೆ. ಬೊಳುವಾರರ ಕತೆಗಳನ್ನು ಮಾತ್ರವೇ ಓದಿದಾಗ ಅವು ಅಪ್ಪಟ ಮುಸ್ಲಿಂಲೋಕಕ್ಕೆ ಮೀಸಲಾದ ಕತೆಗಳಲ್ಲ ಅನ್ನಿಸುತ್ತದೆ. ಅದೇ ಕತೆಗಳನ್ನು ತೇಜಸ್ವಿ, ಮೊಗಳ್ಳಿ, ಅಮರೇಶ್, ನಾಗವೇಣಿಯವರ ಕತೆಗಳ ಜೊತೆ ಹೋಲಿಸಿ ನೋಡಿದಾಗ ಬೊಳುವಾರರ ಮುಸ್ಲಿಂ ಸಂವೇದನೆ ವಿಶಿಷ್ಟವಾದುದು ಎನ್ನಿಸುತ್ತದೆ. ಇವರಲ್ಲಿ ಪ್ರಾದೇಶಿಕತೆ, ಧಾರ್ಮಿಕತೆಗಳು ಜೊತೆ ಜೊತೆಗೇ ಬೆರೆತಿವೆ. ಈ ಧಾರ್ಮಿಕತೆ ಮತ್ತು ಪ್ರಾದೇಶಿಕತೆಗಳು ಆರ್ಥಿಕ – ವರ್ಗೀಯ ನೆಲೆಗೆ ವಿಸ್ತರಣೆಯನ್ನು ಪಡೆಯುತ್ತವೆ.

ಇವರಲ್ಲಿ ಹಿಂದೂ ಮತ್ತು ಮುಸ್ಲಿಂ ಎಂಬ ಎರಡು ವಿರುದ್ಧ ಧ್ರುವಗಳಿಲ್ಲ. ಬದಲಾಗಿ ಮೇಲ್ವರ್ಗ ಮತ್ತು ಕೆಳವರ್ಗ ಎಂಬ ಸ್ಪಷ್ಟ ಬೈನರಿಗಳಿವೆ.

ಭಾರತೀಯ-ಪಾಶ್ಚಾತ್ಯ ಅಥವಾ ತಾನು ಮತ್ತು ಇತರ ಎಂಬ ಕಲ್ಪನೆಗಳು ಸ್ವಾತಂತ್ರ್ಯಾನಂತರದಲ್ಲಿ ಹಿಂದೂ- ಮುಸ್ಲಿಂ ಆಗಿ ಬದಲಾದದ್ದು ಈಗ ಚರಿತ್ರೆ. ೨೦ನೇ ಶತಮಾನದ ರಾಷ್ಟ್ರೀಯ ಚಳವಳಿಯಲ್ಲಿ ದಲಿತ ಸಂಘಟನೆಗಳು ಮುಸ್ಲಿಮರನ್ನು ಸೋದರರಂತೆ ಕಾಣತೊಡಗಿ ದಲಿತ ಮತ್ತು ಮುಸ್ಲಿಮರಿಗೆ ಹಿಂದೂ ಮೇಲ್ವರ್ಣೀಯರು ಸಮಾನ ವೈರಿಗಳಂತೆ ಕಾಣತೊಡಗಿದರು. ಈಗಲೂ ಮೇಲ್ವರ್ಣೀಯ ಹಿಂದೂಗಳು ಒಂದು 'ಅನ್ಯ' ವರ್ಗವಾಗಿಯೂ ದಲಿತ ಮತ್ತು ಮುಸ್ಲಿಮರು ಒಂದು 'ಸ್ವ' ವರ್ಗವಾಗಿಯೂ ಇರುವ ಸ್ಥಿತಿ ಇದೆ. ಆದರೆ ಬೊಳುವಾರರ ಕಥನವಾಸ್ತವದಲ್ಲಿ ಈ ಯಾವ ಸ್ವ-ಅನ್ಯಗಳೂ ಇಲ್ಲ. ಇಲ್ಲಿ ಇರುವ ಸ್ವ ಮತ್ತು ಅನ್ಯಗಳು ಧರ್ಮ-ಜಾತಿ ಮೀರಿದ ಬಡವ ಬಲ್ಲಿದ ಎಂಬ ವರ್ಗಗಳು. ಇವರ ಕತೆಗಳಲ್ಲಿ ಸ್ವ ಮತ್ತು ಅನ್ಯಗಳನ್ನು ನಿರ್ಧರಿಸುವ ಮಾನದಂಡಗಳು ಜಾತಿ, ಧರ್ಮ ಭಾಷೆಗಳಲ್ಲ. ಪ್ರೀತಿ-ಹೊಟ್ಟೆಪಾಡು ಮತ್ತು ಕೀರ್ತಿ, ಶ್ರೀಮಂತಿಕೆ, ಲಾಭ, ಪ್ರತಿಷ್ಠೆಗಳನ್ನು ಒಳಗೊಂಡ ಮೇಲ್ವರ್ಗದವರ ರಾಜಕೀಯ ಆರ್ಥಿಕತೆ.

'ದೇವರುಗಳ ರಾಜ್ಯದಲ್ಲಿ' ಕತೆಯ ಜೋಸೆಫ್, ರಹಮತ್ ಮತ್ತು 'ಅಂಕ' ಕತೆಯ ರಹಮಾನ್, ರಮೇಶ ಇಬ್ಬರೂ ಬಡವರು. ಹೊಟ್ಟೆಪಾಡು ಮತ್ತು ಪ್ರೀತಿಗಾಗಿಯೇ ಧರ್ಮದ ಆಶ್ರಯ ಪಡೆಯಹೋದ ಇವರಿಬ್ಬರೂ ಭ್ರಮನಿರಸನಗೊಳ್ಳುತ್ತಾರೆ. ಇವರ ಕತೆಗಳ ಎಲ್ಲ ಕೆಳವರ್ಗದ ಜನರೂ ಧರ್ಮವನ್ನು ಆಶ್ರಯಿಸುವುದು ಮತ್ತು ನಿರಾಕರಿಸುವುದು ಬರಿ ಒಂದು ತುತ್ತು ಅನ್ನ ಮತ್ತು ಒಂದು ಗುಟುಕು ಪ್ರೀತಿಗಾಗಿ. ಆದರೆ ಶ್ರೀಮಂತರು ಮಾತ್ರ ಬಡವರನ್ನು ತಮ್ಮ ಹಿಡಿತದಲ್ಲಿ ಇಟ್ಟುಕೊಳ್ಳುವ ಸಾಧನವಾಗಿ ಧರ್ಮವನ್ನು ಆಶ್ರಯಿಸುತ್ತಾರೆ. ಹಾಗೇ ತಮ್ಮ ವ್ಯಾಪಾರಕ್ಕೆ ಧರ್ಮಶ್ರದ್ಧೆಯು ತೊಂದರೆ ಕೊಡುವುದಾದರೆ ಅದನ್ನು ತುಂಬಾ ವ್ಯಾವಹಾರಿಕವಾಗಿ ಬಿಟ್ಟುಕೊಡುತ್ತಾರೆ.

ಅದ್ದುವಿನ ವಿಚಾರಕ್ಕೆ ಸಹಾಯ ಕೇಳಿ ಬಂದ ಸಂಜೀವನಿಗೆ ಅಖಿರತ್ ಕತೆಯ ಸೀದಿ ಸಾಹುಕಾರ ''ನನ್ನ ಹತ್ತಿರ ಬಂದು ಯಾಕೆ ಹೇಳುತ್ತಿರುವಿ ? ನಾನೇನು ಸುಪ್ರೀಂ ಕೋರ್ಟಿನ ಜಡ್ಜಾ ?'' ಎಂದು ಉತ್ತರಿಸುತ್ತಾನೆ. ಶ್ರೀಮಂತರು ಯಾವ ಧರ್ಮಕ್ಕೇ ಸೇರಿರಲಿ ಕ್ರೈಸ್ತ, ಇಸ್ಲಾಂ, ಹಿಂದೂ ಯಾರೇ ಆಗಿರಲಿ, ಅವರೆಲ್ಲರದ್ದೂ ಒಂದೇ ಧರ್ಮ. ತೋರಿಕೆಗೆ ಅವರು ತಮ್ಮ ತಮ್ಮ ಧಾರ್ಮಿಕ ಆಚಾರ ವಿಚಾರಗಳಲ್ಲಿ ಶ್ರದ್ಧಾಳುಗಳೂ, ಧರ್ಮ ಪೋಷಕರೂ ಆಗಿ ಕಂಡರೂ ಇವರೆಲ್ಲರೂ ಅಚಲವಾಗಿ ನಂಬಿ ಆಚರಿಸುವ ಧರ್ಮ ಒಂದೇ. ಅದೇ ವ್ಯಾಪಾರ ಧರ್ಮ.

'ಅಂಕ' ಕತೆಯಲ್ಲಿ ರಹಮಾನ್ ರಮೇಶನು ಸತ್ತು ಹೆಣವಾಗಲೆಂದು ಆಸೆಪಡುವ ಸತ್ತಾರ್ ಸಾಹೇಬರ ಮುಸ್ಲಿಂ ಗುಂಪು ಮತ್ತು ರಹಮಾನ ರಮೇಶನು ಬದುಕಿ ಉಳಿಯಲೆಂದು ಆಸೆಪಡುವ ಕೃಷ್ಣ ಸರಳಾಯರ ಹಿಂದೂ ಗುಂಪು ಈ ಎರಡೂ ಗುಂಪಿನವರಲ್ಲಿ ಮೂಲಭೂತವಾಗಿ ಏನೂ ವ್ಯತ್ಯಾಸವಿಲ್ಲ. ಬೇರೆ ಬೇರೆ ಧರ್ಮಕ್ಕೆ ಸೇರಿದ್ದರೂ ಮನೋಧರ್ಮ, ದೃಷ್ಟಿಕೋನ, ವರ್ತನೆಗಳಲ್ಲಿ ಇವರೆಲ್ಲರೂ ಒಂದೇ ಜಾತಿಯ ಜನ. ಸಂಪತ್ತಿಗಷ್ಟೇ ಅಲ್ಲ ಕೀರ್ತಿ, ಪ್ರತಿಷ್ಠೆ, ಮನ್ನಣೆಗಾಗಿ ಸಾಯುವ ಜನ.

ಇಲ್ಲಿ ಬಡವರ ಬಂಡಾಯ ಕೂಡ ಶ್ರೀಮಂತರ ಲಾಭಕ್ಕೆ ಬಳಕೆಯಾಗುವುದು ಕಟುವಾಸ್ತವ ಮತ್ತು ವ್ಯಂಗ್ಯ. ಬಡವರು ಬಂಡಾಯ ಹೂಡುವುದನ್ನು ಶ್ರೀಮಂತರು ಎನ್‌ಕ್ಯಾಶ್ ಮಾಡಿಕೊಳ್ಳುತ್ತಾರೆ. ಈ ರೀತಿಯ ಗಾಢ, ತಲ್ಲಣಪೂರ್ಣ ದುರಂತವನ್ನು ಇವರ ಕತೆಗಳು ಬಹುಶಕ್ತವಾಗಿ ಚಿತ್ರಿಸುತ್ತವೆ. ಇಂಥ ಚಿತ್ರಗಳ ಮೂಲಕವೇ ಒಂದು ವಿವೇಕ ಉಂಟಾಗುವಂತೆ ಕತೆಗಳು ನಮ್ಮನ್ನು ಕಲಕುತ್ತವೆ. ಈ ದುರಂತದ ವಾಸ್ತವವಾದಿ ಚಿತ್ರಣ ನೀಡುವ ಈ ಕತೆಗಳು ಯಾವ ಪರಿಹಾರೋಪಾಯಗಳನ್ನೂ ಸೂಚಿಸುವುದಿಲ್ಲ. ಆದರೆ ಗಾಢವಾದ ವಿಷಾದ ಮತ್ತು ವ್ಯಂಗ್ಯದಿಂದ ಇವು ಎದೆ ಹಿಂಡುವಂತೆ ತಟ್ಟುತ್ತವೆ. ಇದು ಈ ಕತೆಗಳ ಶಕ್ತಿ, ಕೊರತೆ ಅಲ್ಲ.

'ಆಕಾಶಕ್ಕೆ ನೀಲಿ ಪರದೆ' ಯಂತಹ ಕತೆಯಲ್ಲಿ ನಿರಾಡಂಬರವಾದ ಬಂಡಾಯ ಇದೆ. ಇಲ್ಲಿರುವ ಬಂಡಾಯ ಮನೋಧರ್ಮ ಸದ್ದುಗದ್ದಲವಿಲ್ಲದ-ಆಕ್ರೋಶರಹಿತ ಬಂಡಾಯ ಮನೋಧರ್ಮ. ಈ ಕತೆ ನಿಜವಾಗಿಯೂ ಗದ್ದಲವಿಲ್ಲದೆ ತನ್ನದೇ ಪರಿಹಾರೋಪಾಯವನ್ನು ಧರ್ಮದ ಚೌಕಟ್ಟಿನ ಆಚೆ ಹುಡುಕಿಕೊಳ್ಳುತ್ತದೆ. ಇವರ ಕತೆಗಳಲ್ಲಿ ಧರ್ಮದ ಚೌಕಟ್ಟಿನ ಒಳಗೆ ಪರಿಹಾರವನ್ನು ಹುಡುಕಿಕೊಳ್ಳುವ ವರ್ತನೆಯೇ ಜಾಸ್ತಿ. ಧರ್ಮದ ಆಚೆಗೆ ಪರಿಹಾರವನ್ನು ಕಂಡುಕೊಳ್ಳುವ ಚಲನೆಗಳನ್ನು

**ಬಂಡಾಯ ಸಾಹಿತ್ಯ ಸಂಘಟನೆ ಸ್ಥಾಪಿತವಾದದ್ದು ೧೯೭೯ರಲ್ಲಿ. ಬೊಳುವಾರು ತಮ್ಮ ಮೊದಲ ಕಥಾಸಂಕಲನ 'ಅತ್ತ ಇತ್ತಗಳ ಸುತ್ತ ಮುತ್ತ' ಪ್ರಕಟಿಸಿದ್ದು ೧೯೭೯ರಲ್ಲಿ. ಬಂಡಾಯ ಕಾಲಘಟ್ಟ ಮತ್ತು ಚಳವಳಿಯ ಯುಗಧರ್ಮ ಬೊಳುವಾರರ ಕಥನದ ಮೇಲೆ ಸಾಕಷ್ಟು ಪ್ರಭಾವ ಬೀರಿದೆ. ಮನೋಧರ್ಮ ಅಥವಾ ಸಂವೇದನೆಯ ದೃಷ್ಟಿಯಿಂದ ಬೊಳುವಾರರಲ್ಲಿ ಬಂಡಾಯ ಸಾಕಷ್ಟು ಇದೆ. ಆದರೆ ಸಂಘಟನಾತ್ಮಕ ಮುಖ ಇದ್ದ ಬಂಡಾಯ ಚಳವಳಿಯ ಜೊತೆ ಬೊಳುವಾರು ತಮ್ಮನ್ನು ಗುರ್ತಿಸಿಕೊಂಡವರಲ್ಲ.**

ಧರ್ಮದ ದುರ್ಬಳಕೆ ಮತ್ತು ನಿಜವಾದ ಧರ್ಮದ ಎರಡು ಲೋಕಗಳನ್ನು ಒಟ್ಟೊಟ್ಟಿಗೇ ಅನಾವರಣಮಾಡುವ ಮೂಲಕ ಬೊಳುವಾರು ತಾವು ನಿಜವಾದ ಧರ್ಮದ ಪ್ರತಿಪಾದಕ ಎಂಬಂತೆ ಕತೆಗಳ ಮೂಲಕ ಕಾಣಿಸಿಕೊಂಡಿದ್ದಾರೆ. ಸ್ವಾರ್ಥ, ಶ್ರೀಮಂತಿಕೆ ಮತ್ತು ಕೀರ್ತಿಗಳಿಗಾಗಿ ಧರ್ಮವನ್ನು ದುರ್ಬಳಕೆ ಮಾಡುವುದನ್ನು ಹಾಗೂ ಅನ್ಯರ ಶೋಷಣೆಗಾಗಿ ಧರ್ಮವನ್ನು ಬಳಸಿಕೊಳ್ಳುವುದನ್ನು ಇವರ ಕತೆಗಳು ಕಟುವಾಗಿ ಪ್ರತಿರೋಧಿಸುತ್ತವೆ. ಜನರು ಆಚರಣೆಯಲ್ಲಿ ಯಾವ ಧರ್ಮವನ್ನು ಆಚರಿಸುತ್ತಿದ್ದಾರೋ ಆ ಧರ್ಮವು ಧರ್ಮವೇ ಅಲ್ಲ ಎಂದು ಇಲ್ಲಿನ ಎಲ್ಲ ಕತೆಗಳು ಸಾರಿಹೇಳುತ್ತವೆ.

ಅರ್ಥವಿಲ್ಲದವು ಎಂದು ತಳ್ಳಿಹಾಕುವ ಧೋರಣೆ ಬೊಳುವಾರು ಅವರಲ್ಲಿ ಗಾಢವಾಗಿದೆ.

'ಆಕಾಶಕ್ಕೆ ನೀಲಿ ಪರದೆ' ಕತೆಯಲ್ಲಿ ಗಂಡು ನಿರ್ವಚನದ ಹೆಣ್ಣನ್ನು ವೈಭವೀಕರಿಸಲಾಗಿದೆ. ಇಲ್ಲಿನ ಮುಬೀನಾ ತಾನು ಮುಕುಂದಣ್ಣನನ್ನು ಮದುವೆಯಾಗಲು ಇಚ್ಛೆಪಡೆದಿದ್ದರೂ ಇಡೀ ಸಮಾಜ ಅವಳು ಅವನನ್ನೇ ಮದುವೆಯಾಗುವಂತೆ ಮಾಡಿದಾಗ ನಿಜಕ್ಕೂ ಅವಳ ಕಷ್ಟ ಸುಖ ಪರಿಸ್ಥಿತಿ ಏನಾಗಿರಬೇಕು ಎಂಬ ಬಗ್ಗೆ ಕತೆಯಲ್ಲಿ ಕಾಳಜಿಗಳಿಲ್ಲ. ಕತೆಯಲ್ಲಿ ಅವಳ ತ್ಯಾಗ, ನಿಷ್ಠೆ, ನಿಷ್ಕಾಮ ಪ್ರೇಮಗಳನ್ನು ಹೊಗಳಿ ಅವಳನ್ನು ದೇವತೆ ಎನ್ನಲಾಗಿದೆ. ಕತೆಯಾಗಿ ಇದೊಂದು ತುಂಬಾ ಯಶಸ್ವಿ ಕತೆ. ಇಲ್ಲಿ ಒಳ್ಳೆ ಕತೆ ಬರೆಯುವುದು ಮಾತ್ರವೇ ಬೊಳುವಾರರ ಗುರಿ. ಆದರೆ ಅವುಗಳು ಉಂಟುಮಾಡಬಹುದಾದ ಪರಿಣಾಮಗಳ ಬಗ್ಗೆ ಮತ್ತು ಕಥನಗಳಲ್ಲಿ ಅಡಗಬಹುದಾದ ಮೌಲ್ಯ ರಾಜಕಾರಣದ ಬಗ್ಗೆ ಇಲ್ಲವೆ ಲಿಂಗರಾಜ ಕಾರಣದ ಬಗ್ಗೆ ಬೊಳುವಾರರಿಗೆ ಇಲ್ಲಿ ಕಾಳಜಿಯಿಲ್ಲ.

'ಅಂಕ' ಕತೆ ಒಂದನ್ನೇ ನೋಡಿದರೂ ಸಾಕು, ಇವರಿಗೆ ಕತೆಯ ಕಟ್ಟಾಣಿಕೆ, ರಾಜನಿಕತೆ ಮತ್ತು ಅದರೊಳಗೆ ಅಡಗಿಕೊಳ್ಳಬಹುದಾದ ಮೌಲ್ಯ ರಾಜಕಾರಣ ಇವುಗಳ ಬಗ್ಗೆ ಚೆನ್ನಾದ ಅರಿವಿರುವುದು ಕಾಣುತ್ತದೆ. ಆದರೆ 'ನೀಲಿ ಪರದೆ' ಕತೆಯಲ್ಲಿ ಮಾತ್ರ ಹೆಣ್ಣನ್ನು ಗಂಡು ದೃಷ್ಟಿಯಿಂದಲೇ ವೈಭವಿಸಿ ಬರೆಯಲಾಗಿದೆ. ಅಂದರೆ ಈ ಕತೆಯನ್ನು ಬೇರೆ ರೀತಿ ಬರೆಯಬೇಕಿತ್ತೆಂದೇನೂ ಅಲ್ಲ, ಆದರೆ ಈ ಕತೆಯಲ್ಲಿನ ಹೆಣ್ಣಿನ ಪರಿಕಲ್ಪನೆ, ಅವಳನ್ನು ನೋಡುವ ದೃಷ್ಟಿಕೋನ, ನಿಲುವು ಪುರುಷಪ್ರಧಾನವಾದದ್ದು ಅಷ್ಟೆ.

ಇವರ ಕತೆಗಳ ಶ್ರೀಮಂತ ಲೋಕದ ಹೆಣ್ಣು ಮತ್ತು ಗಂಡಿನ ನಡುವಿನ ಸಂಬಂಧಗಳು ಸಹಜ ಮತ್ತು ಮಾಮೂಲಿ ಅಲ್ಲ. ಧರ್ಮ, ಸಹನೆ, ತಾಳ್ಮೆಗಳಿಂದ ಸಾಮಾಜಿಕ ಮೌಲ್ಯಗಳ ಹೊರಲೋಕದಿಂದ ನಿಯಂತ್ರಿತವಾದ ಸಂಬಂಧಗಳಿವು. 'ಇದ್ದತ್' ಕತೆಯ ಮೆಹರುನ್ನೀಸಾ, 'ಜನ್ನತ್' ಕತೆಯ ಸುಲೇಮಾನ್ ಹಾಜಿಯ ಹೆಂಡತಿ, 'ಅಖಿರತ್' ಕತೆಯ ಸೀದಿ ಸಾಹುಕಾರರ ಹೆಂಡತಿ ಈ ಯಾರಿಗೂ ಸ್ವತಂತ್ರವಾಗಿ ಬದುಕುವ ಅವಕಾಶಗಳಿಲ್ಲ. ಇವರಿಗೆ ಸ್ವತಂತ್ರ ಅಭಿಪ್ರಾಯಗಳಿಲ್ಲ ಎಂದೇನೂ ಅಲ್ಲ, ಇವೆ. ಆದರೆ ಅವುಗಳ ಜಾರಿಗೆ ಅವಕಾಶವಿಲ್ಲ. ಹಾಗೆ ನೋಡಿದರೆ ಬಡವರ ಮನೆಯ ಹೆಣ್ಣುಗಳಿಗೆ ಇರುವ ಅವಕಾಶಗಳೇ ಹೆಚ್ಚು. ಶ್ರೀಮಂತರ ಹೆಂಗಸರು ಹೊರಗಿನ ಲೋಕ ನೋಡುವವರಲ್ಲ. ಮನೆಯ ವ್ಯವಹಾರವೂ ಇವರಿಗೆ ತಿಳಿಯುವಂತಿಲ್ಲ. ಉದಾಹರಣೆಗೆ, '''ಜನ್ನತ್ ಮಹಲ್'ನ ಸುಲೇಮಾನ್ ಹಾಜಿಯವರು ಸ್ಪೆಷಲ್ಲಾಗಿ ಕಟ್ಟಿಸಿರುವ ಆಫೀಸು ರೂಮಿನ ಒಳಗೆ ಎಷ್ಟೇ ಗಟ್ಟಿಯಾಗಿ ಮಾತನಾಡಿದರೂ ಹೊರಗೆ ಕೇಳಿಸುವುದಿಲ್ಲ. ಕಾಮತರದ್ದೇ ಪ್ಲಾನು. ಅಷ್ಟೊಂದು ಬಂದೊಬಸ್ತು. ತಮ್ಮ ನೂರು ವಹಿವಾಟುಗಳ ಗುಟ್ಟನ್ನು ತಮ್ಮ ಹೆಂಡತಿಗೂ ಬಿಟ್ಟುಕೊಟ್ಟವರಲ್ಲ ಅವರು. ಹೇಳಿದರೂ ಅರ್ಥಮಾಡಿಕೊಳ್ಳುವ ಜಾತಿ ಅವಳದ್ದಲ್ಲ. ಕಳೆದ ಇಪ್ಪತ್ತು ವರ್ಷಗಳ ಕೆಳಗೆ ಈ ಮನೆಗೆ ಸೊಸೆಯಾಗಿ ಬಂದಿದ್ದ ಅವಳನ್ನು ಮುಸ್ಲಿಯಾರರೂ ಇದುವರೆಗೆ ಕಂಡು ಮಾತನಾಡಿಸಿದ್ದಿಲ್ಲ. ಆಕೆ ಹೊರಗೆ ಬಂದರೆ ಅಲ್ವಾ ಮಾತನಾಡಿಸುವುದು?'' (ಜನ್ನತ್, ಪು. ೫೮, ಬೊಳುವಾರ ಆಯ್ದ ಕತೆಗಳು) ಈ ಶ್ರೀಮಂತರ ಹೆಂಗಸರಿಗೆ ನರಕವೆಂದರೆ ಬಹುಶಃ ಈ ಲೋಕದ ಗಂಡನ ಮನೆಯೇ ಇರಬೇಕು.

''ಅಲ್ಲಾಹು ತನ್ನ ದಾಸರಿಗೆಲ್ಲ ಅವರ ಜೀವನದ ಅವಶ್ಯಕತೆಗಳನ್ನೆಲ್ಲ ಹೆಚ್ಚು ಹೆಚ್ಚಾಗಿ ನೀಡಿರುತ್ತಿದ್ದರೆ ಅವರು ಖಂಡಿತವಾಗಿ ಭೂಮಿಯಲ್ಲಿ ಬಂಡಾಯ ಹೂಡುತ್ತಿದ್ದರು. ಅದರಲ್ಲಿ ಸಂದೇಹವೇನೂ ಇಲ್ಲ'' (ಜನ್ನತ್, ಪು. ೫೭). ಆದರೆ ಅಲ್ಲಾಹು ಅಂತಹ ಅವಶ್ಯಕತೆಗಳನ್ನು ಇವರಿಗೆ ಒದಗಿಸಿಲ್ಲ. ಈ ಹೆಂಗಸರಿಗೆ ಜೀವನದ ನಿಜವಾದ ಅವಶ್ಯಕತೆಯೆಂದರೆ ಪುರುಷರಿಂದ, ಪುರುಷಪಕ್ಷಪಾತಿಯಾದ ಆಚರಣೆಯಲ್ಲಿರುವ ಧರ್ಮದಿಂದ ಬಿಡುಗಡೆ. ಇಂಥ ಬಿಡುಗಡೆಯ ಮೂಲಕ ಒದಗಬಹುದಾದ ವ್ಯಕ್ತಿ ಸ್ವಾತಂತ್ರ್ಯ ಹೆಂಗಸರ ಸ್ವಾತಂತ್ರ್ಯ ಮತ್ತು ಸಂತೋಷಗಳಿಗೆ ಇಲ್ಲಿ ಅವಿನಾಭಾವ ಸಂಬಂಧ ಇದೆ. ಮೆಟೀರಿಯಲಿಸ್ಟಿಕ್ ಶ್ರೀಮಂತಿಕೆ ಮಾತ್ರವೇ ಹೆಣ್ಣಿಗೆ ಸಂತೋಷ ನೀಡುವುದಿಲ್ಲ. ಲೈಂಗಿಕ ತೃಪ್ತಿ-ಅತೃಪ್ತಿಗಳು ಮಾತ್ರವೇ ಹೆಣ್ಣಿನ ಅವಶ್ಯಕತೆಗಳಲ್ಲ. ಹಾಗೆ ತಿಳಿಯುವುದು ಶ್ರೀಮಂತ ಗಂಡಿನ ದುರಹಂಕಾರ. ಅವರ ಆಸೆ ಆಕಾಂಕ್ಷೆಗಳಿಗೆ ಇಲ್ಲಿ ಅವಕಾಶವೇ ಇಲ್ಲ. ಬಡವರ ಕಷ್ಟಕ್ಕಿಂತ ಶ್ರೀಮಂತರ ಹೆಂಗಸರ ಸುಖವೇ ಇಲ್ಲಿ ದಯನೀಯವಾದದ್ದು. ದುರಂತವೆಂದರೆ ಇವರ ಕತೆಗಳ ಶ್ರೀಮಂತರ ಹೆಂಗಸರಿಗೆ ಅವರ ಗಂಡಂದಿರೇ ಪ್ರತ್ಯಕ್ಷ ಅಲ್ಲಾಹು.

ಧರ್ಮದ ದುರ್ಬಳಕೆ ಮತ್ತು ನಿಜವಾದ ಧರ್ಮದ ಎರಡು ಲೋಕಗಳನ್ನು ಒಟ್ಟೊಟ್ಟಿಗೇ ಅನಾವರಣಮಾಡುವ ಮೂಲಕ ಬೊಳುವಾರು ತಾವು ನಿಜವಾದ ಧರ್ಮದ ಪ್ರತಿಪಾದಕ ಎಂಬಂತೆ ಕತೆಗಳ ಮೂಲಕ ಕಾಣಿಸಿಕೊಂಡಿದ್ದಾರೆ. ಸ್ವಾರ್ಥ, ಶ್ರೀಮಂತಿಕೆ ಮತ್ತು ಕೀರ್ತಿಗಳಿಗಾಗಿ ಧರ್ಮವನ್ನು ದುರ್ಬಳಕೆ ಮಾಡುವುದನ್ನು ಹಾಗೂ ಅನ್ಯರ ಶೋಷಣೆಗಾಗಿ ಧರ್ಮವನ್ನು ಬಳಸಿಕೊಳ್ಳುವುದನ್ನು ಇವರ ಕತೆಗಳು ಕಟುವಾಗಿ ಪ್ರತಿರೋಧಿಸುತ್ತವೆ. ಜನರು ಆಚರಣೆಯಲ್ಲಿ ಯಾವ ಧರ್ಮವನ್ನು ಆಚರಿಸುತ್ತಿದ್ದಾರೋ ಆ ಧರ್ಮವು ಧರ್ಮವೇ ಅಲ್ಲ ಎಂದು ಇಲ್ಲಿನ ಎಲ್ಲ ಕತೆಗಳು ಸಾರಿಹೇಳುತ್ತವೆ. ಬೊಳುವಾರು ತಮ್ಮ ಬಹುತೇಕ ಕತೆಗಳಲ್ಲಿ ಕುರಾನಿನ ತಿರುಳೆಂಬಂತಹ ಸಾಲುಗಳನ್ನು ಉಲ್ಲೇಖಿಸುತ್ತಾರೆ. ಹಾಗೆ ಉಲ್ಲೇಖಿಸುವ ಮೂಲಕ ನಿಜವಾದ ಇಸ್ಲಾಂ ಧರ್ಮವು ತುಂಬಾ ಮಾನವೀಯವಾದದ್ದು, ಆದರೆ ಇದನ್ನು ಆಚರಿಸುವ ಶ್ರೀಮಂತರು ತಮ್ಮ ಅನುಕೂಲಕ್ಕೆ ತಕ್ಕಂತೆ ಇದನ್ನು ತಿರುಚಿ ಅಮಾನವೀಯವಾಗಿ ಬಳಸುತ್ತಾರೆ ಎಂದು ಇವರ ಕತೆಗಳು ಬಿಂಬಿಸುತ್ತವೆ. ಧರ್ಮದ ಥಿಯರಿ ಮತ್ತು ಪ್ರಾಕ್ಟೀಸಿನ ನಡುವೆ ದೊಡ್ಡ ಕಂದರ ಇರುವುದನ್ನು ವಾಸ್ತವವಾದಿ ಚಿತ್ರಗಳ ಮೂಲಕವೇ ಬೊಳುವಾರು ಅನಾವರಣಗೊಳಿಸುತ್ತಾರೆ.

ಸಾಂಸ್ಕೃತಿಕ ವ್ಯವಸ್ಥೆಗಳನ್ನು ವಿರೋಧಿಸಿ, ನಿರಾಕರಿಸಿ, ಬಂಡೇಳುವ ಪ್ರವೃತ್ತಿಗಿಂತ ಇವರ ಕತೆಗಳಲ್ಲಿ ಅವುಗಳನ್ನು ಅರ್ಥಮಾಡಿಕೊಳ್ಳುವ ಯತ್ನಗಳೇ ಹೆಚ್ಚು. ಈ ಅರ್ಥಮಾಡಿಕೊಳ್ಳುವ ಪ್ರಯತ್ನವು ಧರ್ಮವನ್ನು ರಿಪೇರಿ ಮಾಡುವ ಯತ್ನವಲ್ಲ, ಸಾಂಸ್ಥಿಕ ವ್ಯವಸ್ಥೆಗಳನ್ನು ರಿಪೇರಿ ಮಾಡುವ ಯತ್ನವಲ್ಲ; ಬದಲಾಗಿ ಧರ್ಮದ ಜನಾಚರಣೆಯನ್ನು ರಿಪೇರಿ ಮಾಡುವ, ಸಾಂಸ್ಥಿಕ ವ್ಯವಸ್ಥೆಗಳ ಬಳಕೆಯ ವಿಧಾನಗಳನ್ನು ರಿಪೇರಿ ಮಾಡುವ ಯತ್ನ.

ಬೊಳುವಾರು ದೋಷವನ್ನು ಕಾಣುವುದು ಧರ್ಮದಲ್ಲಿ ಅಲ್ಲ. ಅದನ್ನು ಆಚರಿಸುವ ಜನರಲ್ಲಿ ಮತ್ತು ಅವರ ದೃಷ್ಟಿಕೋನದಲ್ಲಿ. ನಿಜಕ್ಕೂ ಅಖಿರತ್ – ಎಂದರೆ ನ್ಯಾಯ ತೀರ್ಮಾನ – ಇವರ ಕತೆಗಳ ಒಂದು ಸ್ಥಾಯಿ ಮೋಟಿಫ್ ಆಗಿದೆ. 'ಅಖಿರತ್' ಕತೆ ಧರ್ಮದ ಆಚರಣೀಯ ಮತ್ತು ಅರ್ಥೈಸುವಿಕೆಯ ಬಹು ಸಾಧ್ಯತೆಗಳನ್ನು ಚೆನ್ನಾಗಿ ಅನಾವರಣ ಮಾಡುತ್ತದೆ. ಆಚರಣೆ ಮತ್ತು ಅರ್ಥೈಸುವಿಕೆಯ ನಡುವಿನ ಸಂಬಂಧಗಳನ್ನು ಈ ಕತೆ ನಾಟಕೀಯವಾಗಿ ಉದ್ದಕ್ಕೂ ನಿರ್ವಚಿಸುತ್ತ ಹೋಗುತ್ತದೆ.

ಧರ್ಮದಲ್ಲಿ ಜನಕ್ಕೆ ನೆಮ್ಮದಿಯನ್ನು ಒದಗಿಸುವ ಸಾಮರ್ಥ್ಯ ಇದೆ ಮತ್ತು ಧರ್ಮವನ್ನು ದುರ್ಬಳಕೆ ಮಾಡಿಕೊಳ್ಳುವ ಸಾಧ್ಯತೆಯೂ ಧರ್ಮದೊಳಗೇ ಇದೆ ಎಂಬುದನ್ನು 'ಅಖಿರತ್', 'ಇದ್ದತ್', 'ಜನ್ನತ್' ಕತೆಗಳೆಲ್ಲ ಹೇಳುತ್ತವೆ. ಈ ಕತೆಗಳಲ್ಲಿ ಧರ್ಮದ ಪಾವಿತ್ರ್ಯನಾಶ, ಭಂಜನೆ ಬಂಡಾಯಗಳಿಲ್ಲ. ಬದಲಾಗಿ ಈ ಕತೆಗಳು ಧರ್ಮವನ್ನು ಈ ಬಹುಜನ ಸಮುದಾಯವು ಯಾಕೆ ಹೀಗೆ ಬಿಡದೆ ಆಚರಿಸುತ್ತಿದೆ? ನಂಬುತ್ತಿದೆ? ಇದರ ಸಾಧಕ-ಬಾಧಕಗಳೇನು? ಸಾಧ್ಯತೆಗಳೇನು? ಎಂದು ಪರಿಶೀಲಿಸುವ, ಅರ್ಥಮಾಡಿಕೊಳ್ಳುವ ಯತ್ನವನ್ನು ಮಾಡುತ್ತದೆ.

ಹೇಗೇ ಆದರೂ ಜನರ ಕೆಲವು ವರ್ತನೆಗಳನ್ನು ತರ್ಕದಿಂದ ಹಿಡಿಯಲು ಆಗುವುದಿಲ್ಲ. ಹಾಗೇ ಭಾಷೆಯಿಂದ ಕೂಡ. ತರ್ಕವು ಭಾಷೆಯ ಗುಲಾಮ. ಕೊನೆಗೆ ಒಂದು ಪ್ರಾರ್ಥನೆಯಿಂದ ಈ ಮಾತುಗಳನ್ನು ಮುಗಿಸಬಹುದು.

*ಸರ್ವಶಕ್ತನಾದ ಅಲ್ಲಾಹುವೇ*
*ಮೆಹರುನ್ನಿಸಾಳಂತಹ ಧರ್ಮಶ್ರದ್ಧೆಯ ಹೆಣ್ಣಿಗೆ*
*ಸಮದ್‌ನಂತಹ ಹುಡುಗನನ್ನು ಕರುಣಿಸು.*
*ತಾನು ಬಯಸಿದ್ದನ್ನು ದೊರಕಿಸಿಕೊಳ್ಳುವ ಚೈತನ್ಯವನ್ನು*
*ಎಲ್ಲ ದುರ್ಬಲರಿಗೆ ಒದಗಿಸು.*
*ಆಕಾಶವನ್ನು ಛಾವಣಿಯನ್ನಾಗಿಯೂ*
*ಭೂಮಿಯನ್ನು ಹಾಸಿಗೆಯನ್ನಾಗಿಯೂ*
*ಬಡವರಿಗೆ ಒದಗಿಸಿರುವ ದಯಾಳು ಅಲ್ಲಾಹುವೇ*
*ಮಾತಾಡುವ ಇಂಥ ಬೊಳುವಾರು ಕತೆಗಳನ್ನು*
*ಇಂಚಿಂಚೆ ಕೊಲ್ಲುವ ವಿಮರ್ಶಕರಿಗೆ*
*ಸದಾ ನಿನ್ನ ಜನ್ನತ್‌ನ ಬಾಗಿಲನ್ನು ತೆರೆದಿರು.*

– ಆಮೇನ್

ರಾಮಲಿಂಗಪ್ಪ ಟಿ. ಬೇಗೂರು, ಬಾಲಕರ ಸರ್ಕಾರಿ ಕಾಲೇಜು, ಚಿಂತಾಮಣಿ - ೫೬೩ ೧೨೫



# ಸಿರಿ ಮಹಾಕಾವ್ಯ: ಸ್ತ್ರೀ ಸಂಘರ್ಷದ ನೆಲೆಗಳು

ಸಿರಿ ಜನಪದ ಮಹಾಕಾವ್ಯದಲ್ಲಿ ಸ್ತ್ರೀ ಸಂಘರ್ಷದ ನೆಲೆಗಳು ಎಂಬ ವಿಷಯದ ಕುರಿತು ಟಿಪ್ಪಣಿ ಮಂಡಿಸುವ ಪೂರ್ವದಲ್ಲಿ ಕೆಲವು ವಿಚಾರಗಳನ್ನು ಸ್ಪಷ್ಟಪಡಿಸಬೇಕು. ವೆಂಕಟೇಶ ಇಂದವಾಡಿ ಅವರು ಸಿರಿ ಅಧ್ಯಯನದ ಸಂದರ್ಭದಲ್ಲಿ ಸಿರಿ ಆಚರಣೆ ಮಾಡುವ ಸಮುದಾಯ, ಸಿರಿ ಆರಾಧನೆಯಲ್ಲಿ ತೊಡಗಿಸಿಕೊಂಡ ಸಮುದಾಯ ಮತ್ತು ಸಿರಿ ಆರಾಧನೆಯ ಅಧ್ಯಯನದಲ್ಲಿ ತೊಡಗಿದ ಸಮುದಾಯ ಎಂಬ ಮೂರು ಗುಂಪುಗಳ ಕುರಿತು ಪ್ರಸ್ತಾಪಿಸಿದರು. ನಾನು ಈ ಮೂರರಲ್ಲಿ ಯಾವ ಗುಂಪಿನಲ್ಲಿಯೂ ಬರುವುದಿಲ್ಲ. ಈ ಅರ್ಥದಲ್ಲಿ ಸಿರಿ ಆಚರಣೆ, ಆರಾಧಕರು ಮತ್ತು ಅಧ್ಯಯನಕಾರರ ನೆಲೆಯಲ್ಲಿ ನಾನು 'ಭವಿ'. ಈ ಭವಿತನ ನನಗೆ ತುಳುಭಾಷೆ, ಸಂಸ್ಕೃತಿ ಮತ್ತು ನಂಬಿಕೆಗಳ ಕಾರಣಗಳಿಗಾಗಿಯೂ ಅಂಟಿಕೊಂಡಿದೆ. ಭವಿಗಳಿಗೆ ಭಕ್ತರು ಮತ್ತು ಭಕ್ತಿಯ ಕುರಿತು ನಿರ್ಮಮಕಾರದಿಂದ ಮಾತನಾಡುವ ಅನುಕೂಲತೆ ಇರುವಂತೆ, ಸಂಸ್ಕೃತಿಯ ಒಳಹೊಕ್ಕು ಅರಿಯುವುದಕ್ಕೆ ಮಿತಿಯೂ ಇದೆ. ಇವೆಲ್ಲವೂ ನನ್ನ ಮಾತುಗಳಿಗೆ ಒಂದು ಬಗೆಯ ಒತ್ತಡರಹಿತ ಸನ್ನಿವೇಶವನ್ನು ನಿರ್ಮಿಸಿವೆ, ಅಂತೆಯೇ ಅನುಕೂಲ ಮತ್ತು ಅನನುಕೂಲ ಇವುಗಳ ನಡುವಲ್ಲಿ ನನ್ನ ವಿಚಾರದ ಓಡಾಟ ಇದೆ.

ಒತ್ತಡದ ಪ್ರಶ್ನೆ ಎದುರಾದುದಕ್ಕೂ ಕಾರಣವಿದೆ. ನಿನ್ನೆ ಪ್ರೊ|| ಅಮೃತ ಸೋಮೇಶ್ವರ ಅವರು ಪ್ರಾಸ್ತಾವಿಕ ಭಾಷಣ ಮಾಡುತ್ತ, ಹಲವು ವಿಚಾರಪರ ಒಳನೋಟಗಳನ್ನು ವಸ್ತುನಿಷ್ಠವಾಗಿ ಮಂಡಿಸಿದರು, ಆಗ, "ಯಾವ ಕೃತಿಯೇ ಆಗಲಿ, ವಿಷಯವೇ ಆಗಲಿ ವಿಮರ್ಶಾತೀತ ಅಲ್ಲ; ಯಾವುದನ್ನೇ ಆಗಲಿ ವಸ್ತುನಿಷ್ಠವಾಗಿ ಅಧ್ಯಯನ ಮಾಡಬೇಕಾಗುತ್ತದೆ" ಎಂದು ಮೇಲಿಂದ ಮೇಲೆ ಹೇಳಿದರು. ಎಂದರೆ ತಮ್ಮ ವಿಚಾರಮಂಡನೆಗೆ ಇವುಗಳನ್ನು ಸಮರ್ಥನೆಯ ನೆಲೆಯಲ್ಲಿ ನೀಡುತ್ತ ಬಂದರು. ಹೀಗೆ ಸಮರ್ಥನೆ ನೀಡಬೇಕಾದ ತುರ್ತನ್ನು ಅವರಿಗೆ ನಿರ್ಮಿಸಿದ ಒತ್ತಡ ಯಾವುದು ಎಂಬುದಷ್ಟೆ ನನ್ನ ಪ್ರಶ್ನೆ. ಅದು ನಿರ್ದಿಷ್ಟ ಜಾತಿಯವರಿಂದ ಬಂದುದೋ? ಸಿರಿಯನ್ನು ನಂಬಿದವರ ಕಡೆಯಿಂದ ಬಂದುದೋ? ಸಿರಿಯನ್ನು ಪುರಾಣೀಕರಿಸಿದ್ದರ ಫಲವೋ ಅಥವಾ ಈವರೆಗಿನ ಅಧ್ಯಯನಕಾರರು ಮತ್ತು ಅಧ್ಯಯನಗಳು ಉಂಟುಮಾಡಿದ್ದೋ? ಅಥವಾ ಇವೆಲ್ಲ ಒಟ್ಟಾಗಿ ಉಂಟುಮಾಡಿದ್ದೋ?

ಡಾ|| ಸಬಿಹಾ ಭೂಮೀಗೌಡ

ಸ್ತ್ರೀ ಸಂಘರ್ಷದ ಬಗೆಗೆ ಮಾತನಾಡಲು ಸ್ತ್ರೀಯರಿಗೇ ಹೇಳಿರುವುದು ಕೇವಲ ಆಕಸ್ಮಿಕವೋ ಅಥವಾ ಉದ್ದೇಶಪೂರ್ವಕವೋ ಎಂಬುದೂ ನನ್ನನ್ನು ಕಾಡುವ ಪ್ರಶ್ನೆ. ಸದ್ಯಕ್ಕೆ ಅರ್ಥದ ಬೇರೆ ಸಾಧ್ಯತೆಗಳನ್ನು ಮರೆತು, ಸ್ತ್ರೀ ಸಂಘರ್ಷದ ನೆಲೆಗಳನ್ನು ಸ್ತ್ರೀಯರೇ ಹೇಳಿದರೆ, ಅವರಿಗೆ ಮುಖ್ಯವಾಗುವ ಸಂಘರ್ಷ ಯಾವುದು ಎಂಬುದನ್ನು ಈ 'ಮುಖಾಮುಖಿ'ಯಲ್ಲಿ ನೋಡುವ ಆಶಯ ಸಂಘಟಕರದ್ದು ಆಗಿರಬಹುದು ಎಂದುಕೊಳ್ಳೋಣ. ಆಗ ಸಹಜವಾಗಿಯೇ ಸಾಂಸ್ಕೃತಿಕ ಮುಖಾಮುಖಿಯ ಒಟ್ಟು ಕಾರ್ಯಕ್ರಮ ಸ್ವರೂಪದ ವಿನ್ಯಾಸ ಕಣ್ಣೆದುರು ಬರುತ್ತದೆ. 'ಸಿರಿ'ಯ ಬಗೆಗೆ ಮಾತಾಡುವ, ಸಾಂಸ್ಕೃತಿಕ ಅನುಸಂಧಾನ ನಡೆಸಲು ಉದ್ದೇಶಿಸಿದ ಇದರ 'ಉದ್ಘಾಟನಾ ಸಮಾರಂಭ'ದಲ್ಲಿ ಓರ್ವ ಮಹಿಳೆಯೂ ವೇದಿಕೆಯಲ್ಲಿ ಇಲ್ಲದುದು ಆಕಸ್ಮಿಕವೆ? ಹಾಗಾದರೆ ಮೊದಲ ಗೋಷ್ಠಿಯಲ್ಲಿ ಅಧ್ಯಯನದ ತಾತ್ವಿಕತೆ, ಅಂತರ್‌ಪಠ್ಯೀಯ ಸಂಬಂಧ ಮತ್ತು ಸಂಪಾದನೆಗಳ ಹಿಂದಿನ ತಾತ್ವಿಕತೆಯ ಕುರಿತ ವಿಷಯ ಮಂಡನೆಗಳು ಕೇವಲ ಪುರುಷಮಯವಾದದ್ದೂ ಆಕಸ್ಮಿಕವೆ? ಅಥವಾ ಸೈದ್ಧಾಂತಿಕ ಚರ್ಚೆಗಳಿಗೆ ಮಹಿಳೆ 'ಅನ್ಯ'ಳು ಎಂಬ ನಿಲುವು ಕಾರಣವೆ? ಎರಡನೆಯ ಗೋಷ್ಠಿಯಲ್ಲಿ ಸ್ವಲ್ಪ ಪ್ರವೇಶ ಪಡೆದ ಮಹಿಳೆಯರು ಮೂರನೆಯ ಗೋಷ್ಠಿಯಲ್ಲಿ ಸಿಂಹಪಾಲು ಪಡೆದಿದ್ದಾರೆ! ಕಾರ್ಯಕ್ರಮ ಸಂಯೋಜಕರನ್ನು ಟೀಕಿಸುವುದಕ್ಕಾಗಿ ಈ ಮಾತನ್ನು ಹೇಳುತ್ತಿಲ್ಲ. ಬದಲಾಗಿ ನಮ್ಮ ಕಾರ್ಯಗಳಲ್ಲಿ, ಚಿಂತನೆಗಳಲ್ಲಿ ಲಿಂಗತ್ವದ ನೆಲೆಗಳು ಹೇಗೆ ಸಕ್ರಿಯವಾಗಿ ಅಡಕವಾಗಿರುತ್ತವೆ ಎಂಬುದನ್ನು ಸೂಚಿಸುವುದಷ್ಟೆ ನನ್ನ ಉದ್ದೇಶವಾಗಿದೆ.

ಮೇಲಿನ ವಿಚಾರಗಳ ಹಿನ್ನೆಲೆಯಲ್ಲಿ ನಾನೊಂದು ಪ್ರಮೇಯವನ್ನು ಮಂಡಿಸುತ್ತೇನೆ. 'ಸಿರಿ ಜನಪದ ಮಹಾಕಾವ್ಯದ ಸಾಂಸ್ಕೃತಿಕ ಮುಖಾಮುಖಿ' ಎಂಬ ವಿಷಯ ಕುರಿತ ಈ ವಿಚಾರಸಂಕಿರಣವನ್ನು ಈಗಿನದಕ್ಕಿಂತ ಭಿನ್ನವಾಗಿ ಸಂಯೋಜಿಸಬಹುದಿತ್ತೆ? ಒಂದು ವೇಳೆ ಸಿರಿಯನ್ನು ಓದಿಕೊಂಡ ಮಹಿಳಾ ವರ್ಗವೇ ಅಥವಾ ಸಿರಿ ಪಾಡ್ದನ ಬಲ್ಲಂಥ ಕವಯಿತ್ರಿಯರೇ ಒಟ್ಟು ಸೇರಿ ಈ ಮುಖಾಮುಖಿ ನಡೆಸಿದ್ದರೆ ಆಗ ಬರಬಹುದಾದ, ತಲುಪಬಹುದಾದ ಫಲಿತಗಳು ಇಂದಿಗಿಂತ ಭಿನ್ನವಾಗಿರುತ್ತಿದ್ದವೆ? ಇವೆಲ್ಲಕ್ಕೂ ನನ್ನ ಉತ್ತರ 'ಖಂಡಿತವಾಗಿಯೂ ಹೌದು' ಎಂಬುದೇ ಆಗಿದೆ!

ಸ್ತ್ರೀ ಸಂಘರ್ಷದ ನೆಲೆಗಳು 'ಸಿರಿ'ಯಲ್ಲಿ ಗಾಢವಾಗಿ ಒಡಮೂಡಿವೆ ಎಂಬುದನ್ನು ಇದುವರೆಗಿನ ಅಧ್ಯಯನಕಾರರು (ಅವರಲ್ಲಿ ಬಹುಭಾಗ ಪುರುಷರೇ ಆಗಿದ್ದಾರೆ) ಒಪ್ಪಿದ್ದಾರೆ. ಸಿರಿಯ ಹೋರಾಟದ ನೆಲೆ ಯಾವುದು? ಆಕೆಯ ಹೋರಾಟದ ಯಾವ ಅಂಶಗಳು ಈ ಅಧ್ಯಯನಕಾರರ ಆಸಕ್ತಿ, ಕುತೂಹಲಗಳಿಗೆ ಮೂಲ? ಇಂಥ ಪ್ರತಿರೋಧ

ವನ್ನು ಮತ್ತೆ ಮತ್ತೆ ಮೆಲುಕುಹಾಕುವ, ವೈಭವೀಕರಿಸುವುದರ ಹಿಂದಿನ ಆಸಕ್ತಿಗಳು ಯಾವುವು ? – ಈ ವಿಚಾರಗಳು ನನ್ನ ಆಸಕ್ತಿಯನ್ನು ಹೆಚ್ಚಿಸಿವೆ.

'ಸಿರಿ' ನನ್ನ ಪ್ರಕಾರ ಅತೀವ ಆತ್ಮಪ್ರಜ್ಞೆ ಇರುವ, ಸ್ವಾಭಿಮಾನಿಯಾದ ಹೆಣ್ಣು. ಈ ಗುಣಗಳೇ ಅವಳ ಒಟ್ಟು ಸಂಘರ್ಷದ ಮೂಲ ನೆಲೆ. ಸ್ವಾಭಿಮಾನಿಯೂ ಸ್ವಾವಲಂಬಿಯೂ ಆದ ಹೆಣ್ಣು ಪಿತೃಪ್ರಧಾನ ಸಮಾಜಕ್ಕೆ ಸದಾ ನುಂಗಲಾರದ ತುತ್ತು. ಇಂಥ ಸಮಾಜದಲ್ಲಿ ಆದರ್ಶ ನಾಯಕನ ಲಕ್ಷಣ, ಸ್ವಾಭಿಮಾನಿಯಾದ ಸಿರಿಯಂಥ ಹೆಣ್ಣುಗಳನ್ನು ವಿವಿಧ ರೀತಿಯಲ್ಲಿ ಪಳಗಿಸಿ, ತರಬೇತುಗೊಳಿಸಿ 'ಸಾಧುಪ್ರಾಣಿ'ಯನ್ನಾಗಿ ಮಾಡುವಲ್ಲಿ ಮತ್ತು ಆ ಬಳಿಕ ಆ 'ಸಾಧುಪ್ರಾಣಿ'ಯಿಂದ ಹಲಬಗೆಯ ಅನುಕೂಲಕರ ಕಾರ್ಯಗಳನ್ನು ಮಾಡಿಸುವಲ್ಲಿ ಆಸಕ್ತವಾಗಿರುತ್ತದೆ. ಇಪ್ಪತ್ತೊಂದನೆಯ ಶತಮಾನಕ್ಕೆ ಕಾಲಿಟ್ಟಿರುವ ನಮ್ಮ ಇಂದಿನ ಸಿನಿಮಾಗಳೂ ಇಂಥ ರಿಂಗ್‌ಮಾಸ್ಟರ್‌ನನ್ನು ನಾಯಕನೆಂದು ವೈಭವೀಕರಿಸುತ್ತಿರುವ ಸತ್ಯ ಎಲ್ಲರಿಗೂ ಗೊತ್ತಿರುವಂಥದ್ದು. 'ಸಿರಿ' ಮತ್ತು 'ಕಾಂತುಪೂಂಜ'ನ ನೆಲೆಯ ಸಂಘರ್ಷ ಇದೇ ಬಗೆಯದ್ದಾಗಿದೆ.

## ಬಿಸಿಲ ಹನಿಗಳು

ಹೆರಳೇ...

ನೀ ಬೀಸಣಿಕೆಯಾಗುವ ಮಾತು

ಕೊಟ್ಟರೆ,

ನಾ ಬಿಸಿಲನ್ನೇ

ಕಟ್ಟಿಕೊಳ್ಳುವೆ...!

ವಿಜಯಕಾಂತ ಪಾಟೀಲ

ಚಿಕ್ಕಾಂಶಿ - ಹೊಸೂರು - ೫೮೧ ೧೦೪

ಸಿರಿಯ ಹೋರಾಟದ ಮುಖ್ಯ ಮಜಲುಗಳನ್ನು ಈ ಕೆಳಗಿನಂತೆ ವಿಂಗಡಿಸಿ ಚರ್ಚಿಸಲಾಗಿದೆ:

(ಅ) ಗಂಡನ ಅನ್ಯಸಂಬಂಧದ ಕುರಿತ ಸಿರಿಯ ಪ್ರತಿಭಟನೆ

(ಆ) ತನ್ನನ್ನು ಹತೋಟಿಯಲ್ಲಿರಿಸಲು ಗಂಡ ನಡೆಸುವ ಪಿತೂರಿಯ ವಿರುದ್ಧದ ಹೋರಾಟ

(ಇ) ಆಸ್ತಿಯ ಹಕ್ಕನ್ನು ಹೊಂದಲು ನಡೆಸುವ ಹೋರಾಟ

(ಈ) ಗಂಡು ಜಗತ್ತಿನ ಕುತಂತ್ರ ಮತ್ತು ವಂಚನೆಗೆ ಅದು ಬಳಸಿಕೊಳ್ಳುವ ಸಂಪರ್ಕ ಜಾಲದ ವಿರುದ್ಧದ ಸೆಣಸಾಟ.

ಕಾಂತುಪೂಂಜನು ತನ್ನ ಸೀಮಂತಕ್ಕೆಂದು ತಂದ ಸೀರೆಯು ಸೂಳೆ ಸಿದ್ದುವಿನಿಂದ ಮಲಿನಗೊಂಡ ಕಾರಣಕ್ಕೆ, ಅದನ್ನು ಸ್ವೀಕರಿಸಲು ಸಿದ್ಧಳಿಲ್ಲದ ಸಿರಿಯ ನಿರ್ಧಾರವು, ಅವಳ ಹೋರಾಟದ ಆರಂಭ ಮತ್ತು ನಿರ್ಣಾಯಕ ಸಂದರ್ಭವೂ ಆಗಿದೆ. ಸಿದ್ದುವಿನಿಂದ ಸೀರೆಯ ಮಡಿಕೆ ಹಾಳಾಯಿತು ಎಂದು ಸಂಗ್ರಹವಾಗಿ ಹೇಳಿದರೂ, ಕಾಂತುಪೂಂಜ ಸಿದ್ದುವಿನಲ್ಲಿ ಅನುರಕ್ತನಾಗಿದ್ದ ಎಂದು ಹೇಳಿದರೂ ಅರ್ಥವೇನೂ ಬದಲಾಗಲಾರದು. ತನ್ನ ಗಂಡನ ಅನ್ಯ ಸಂಬಂಧವನ್ನು ಸಿರಿ ಪ್ರತಿಭಟಿಸಿದ್ದು ಖಾಸಗಿ ವಲಯದಲ್ಲಿ ಅಲ್ಲ; ಸಾರ್ವಜನಿಕ ವಲಯದಲ್ಲಿ ಎಂಬುದು ಮುಖ್ಯ. ಇದು ಕಾಂತುಪೂಂಜನ ರೋಷದ ಬೆಂಕಿಗೆ ತುಪ್ಪ ಸುರಿದಂತೆ ಆಗುತ್ತದೆ. ತಂದೆಯ ಸಾವಿನ ಬಳಿಕ ಸಹಜವಾಗಿ ತನಗೆ ಬರಬೇಕಾದ ಆಸ್ತಿಯ ಒಡೆತನದ ಹಕ್ಕನ್ನು ಕಾಂತುಪೂಂಜ ಮತ್ತು ಸೂಡದ ಬೆಮರಾಳ್ವ ಇಬ್ಬರೂ ಸೇರಿಕೊಂಡು ಕಸಿಯುವುದು ಸಿರಿಯ ಹೋರಾಟವನ್ನು ಇನ್ನಷ್ಟು ಮೊನಚಾಗಿಸುತ್ತದೆ. ಸಿರಿ 'ಬರ' (ವಿಚ್ಛೇದನ) ಕೇಳುವುದು, ಕಾಂತುಪೂಂಜ 'ಬರ' ಕೊಡಲು ಅನುಮಾನಿಸುವುದು, ಹಟದಿಂದ ತಾನೇ ವಿಚ್ಛೇದನ ನೀಡಿ ಸಿರಿಯು ಸತ್ಯನಾಪುರ, ಬಸರೂರು ಎರಡನ್ನೂ ತೊರೆದು ಹೊಸ ಬದುಕನ್ನು ಅರಸಿ ಹೋಗುವುದು ಆಕೆಯ ಹೋರಾಟದ ಇನ್ನೊಂದು ನೆಲೆ. ಸಿರಿಗೆ ಹೆಜ್ಜೆ ಹೆಜ್ಜೆಗೆ ಎದುರಾಗುವ ತೊಡಕು ಮತ್ತು ಬಿಕ್ಕಟ್ಟುಗಳು ಪುರುಷ ರಾಜಕಾರಣದ ತಂತ್ರಗಾರಿಕೆಯ ಫಲವಾಗಿವೆ.

ಸಿರಿಯ ಹೋರಾಟದ ಮೊನಚು ಆಕೆ ಬೋಳಬಾರಿ ಕ್ಷತ್ರಿಯ ಸೋದರರನ್ನು ಭೇಟಿಯಾದ ಬಳಿಕದಿಂದ ಕ್ಷೀಣಿಸುತ್ತ ಸಾಗಿ, ಆಕೆ ಕೊಡ್ಸರಾಳ್ವನನ್ನು ವಿವಾಹವಾಗುವ ನಿರ್ಧಾರ ಮಾಡಿದಂದಿನಿಂದ ಪೂರ್ಣವಾಗಿ ಮರೆಯಾಗಿಬಿಡುತ್ತದೆ. ಅನಂತರದ್ದು ಏನಿದ್ದರೂ ಸಿರಿಯದು ಒಂದು ಬಗೆಯ ಒಪ್ಪಂದದ ಬದುಕು. ಬದುಕಲ್ಲಿ ತಾನು ವಿರೋಧಿಸಿದ ಮೌಲ್ಯಗಳನ್ನೇ ಇನ್ನೊಬ್ಬರ ನೆಲೆಯಲ್ಲಿ ಊರ್ಜಿತಕ್ಕೆ ತಂದು, ಅದರಲ್ಲೂ ಹೊಂದಾಣಿಕೆ ನಡೆಸಿ ಸರಿದೂಗಿಸಲು ಎಳಸಿದ ಬದುಕು. ಹೀಗಾಗಿ ಸಿರಿಯದು ಸ್ವಾಭಿಮಾನಿ ಹೆಣ್ಣೊಬ್ಬಳು ಪಿತೃಪ್ರಧಾನ ಚಿಂತನೆಯ ಮೌಲ್ಯಗಳಿಗೆ ತನ್ನನ್ನು ಒಗ್ಗಿಸಿಕೊಂಡು, ಒಪ್ಪಿಸಿಕೊಂಡು, 'ಸಾಧುಪ್ರಾಣಿ'ಯಾಗುತ್ತ ಸಾಗಿದ ಕಥನವಾಗಿದೆ. ಸಿರಿಯಲ್ಲಿ ಸ್ವಾಭಿಮಾನ ಎದ್ದಂತೆ ದುಡುಕುತನ, ಮುಂಗೋಪ, ಹಟಗಳು ಮನೆಮಾಡಿವೆ. ಈ ಗುಣಗಳಿಗೆ ಸಿರಿ ತನ್ನ ಬದುಕಲ್ಲಿ ತೆತ್ತ ಬೆಲೆ ಮಾತ್ರ ಅಪಾರ. ಆದುದರಿಂದಲೇ ಪುರುಷಪ್ರಧಾನ ಚಿಂತನೆಗಳು ಸಿರಿಯ ಕಥನವನ್ನು ಕೀರ್ತಿಸುವುದರ ಹಿಂದೆ, ಪರೋಕ್ಷವಾಗಿ ಅದು ಉಳಿದ ಸ್ತ್ರೀಕುಲಕ್ಕೆ ಎಚ್ಚರದ ದಂಡವನ್ನು ಝಳಪಿಸುತ್ತಿದೆಯೇ, ಎಂಬ ಊಹೆಗೆ ಎಡೆಮಾಡಿಕೊಡುತ್ತದೆ.

ಬಸರೂರನ್ನು ತೊರೆದುಹೋದಾಗ ನಡೆಯುವ ಘಟನೆ ಸಿರಿಯ 'ಆಯ್ಕೆ'ಯ ಕಾರಣಕ್ಕಾಗಿ ನನಗೆ ಮುಖ್ಯವೆನಿಸುತ್ತದೆ. ಹೊಸ ಬದುಕು ಮತ್ತು ಭವಿಷ್ಯವನ್ನು ಹುಡುಕಿ ಹೊರಟ ಸಿರಿಗೆ ಸಹಾಯದ ನೆಪದಲ್ಲಿ ಒದಗಿಬರುವ ಪುರುಷರ ಮಾಯೆ ಮತ್ತು ಕುಮಾರನ ನೆಲೆಯಲ್ಲಿ ದೊರೆಯುವ ಭವಿಷ್ಯದ ಚಿತ್ರಣ ಇಲ್ಲಿ ಗಮನಾರ್ಹ. ಬೋಳಬಾರಿ ಕ್ಷತ್ರಿಯರಿಬ್ಬರ ಕಣ್ಣಲ್ಲಿ ಮೂಡಿದ ಹೆಣ್ಣಿನ ಹಸಿವನ್ನು ಗುರುತಿಸಿ, ಸಿರಿಯು 'ಸೋದರರು' ಎಂಬ ಬಂಧುತ್ವವನ್ನು ಅವರ ಮೇಲೆ ಹೇರಿ ಮೊದಲ ಅಪಾಯವನ್ನು ನೀಗಿಸಿಕೊಂಡಿದ್ದಾಳೆ. ಆದರೆ ''ಹಸುಳೆ ಕುಮಾರ ಇದ್ದಕ್ಕಿದ್ದಂತೆ ಮಾತು ಕಲಿತು, ತಾಯಿಯು ಬೋಳಬಾರಿ ಕ್ಷತ್ರಿಯ ಸೋದರರ ಜೊತೆ ಹೊರಟರೆ, ಅವಳಿಗೆ ಇನ್ನೊಂದು ವಿವಾಹದ ಸಾಧ್ಯತೆಯನ್ನು ಅರುಹಿ, ತಾನು ಅದಕ್ಕೊಪ್ಪದೆ, ತಾಯಿ ಅವರೊಂದಿಗೆ ಹೋಗುವುದೇ ಆದರೆ ತನ್ನನ್ನು ಮಾಯಕ ಮಾಡೆಂದು ಹೇಳಿದ'' ಎನ್ನುವ ಕಥೆ ಚಿಂತನಾರ್ಹವಾಗಿದೆ. ಕುಮಾರನ ಅಸಾಮಾನ್ಯತ್ವವನ್ನು ನಿರಾಕರಿಸಿದರೆ, ಮತ್ತೆ ಉಳಿಯುವುದು ಹೆಣ್ಣಿನ ಮರುವಿವಾಹದ ಕುರಿತ ಗಂಡಿನ ವಿರೋಧ ಮಾತ್ರ; ಅದೂ ಮಗನ ನೆಲೆಯಲಿ !

'ಭವಿ'ಯಾಗಿ ಯೋಚಿಸುವ ನನಗೆ ಇಡೀ ಘಟನೆ ಕೆಲವು ಸಾಧ್ಯತೆಗಳನ್ನು ಊಹಿಸುವಂತೆ ಒತ್ತಾಯಿಸುತ್ತದೆ. ಒಂದೋ, ಮಗ ಮತ್ತು ಅವನ ಜೊತೆಗಿನ ಅಸ್ಪಷ್ಟ ಭವಿಷ್ಯ ಅಥವಾ ಮರುವಿವಾಹದ ಮೂಲಕ ಪುನಃ ಕಟ್ಟಿಕೊಳ್ಳಬಹುದಾದ ತನ್ನದೇ ಬದುಕು – ಇವುಗಳಲ್ಲಿ ಒಂದನ್ನು ಆಯ್ದುಕೊಳ್ಳವುದು ಅನಿವಾರ್ಯ ಎಂದಾದಾಗ ಸಿರಿಯ ಆಯ್ಕೆ ಎರಡನೆಯದಾಗಿದೆ ! ಇಲ್ಲೇ ಅವಳ ವಿಶಿಷ್ಟತೆ ಅಡಗಿದೆ. ''ಮಗನ ಮುಖ ನೋಡಿ ನಾಳೆಯನ್ನು ಕಳೆಯಬೇಕೆನ್ನುವ'' ಪಿತೃಪ್ರಧಾನ ಚಿಂತನೆಗಿಂತ, ತನ್ನ ನೆಲೆಯಲ್ಲಿ ಕಟ್ಟಿಕೊಳ್ಳುವ ಭವಿಷ್ಯ ಅವಳ ಆಯ್ಕೆಯಾಗಿದೆ ! ಇನ್ನು ಮಾಯಕದ ಪ್ರಶ್ನೆ. ಕುಮಾರ ಮತ್ತು ದಾರು ಇಬ್ಬರೂ ಮಾಯಕರಾಗುವುದು ಗಮನಾರ್ಹ. ಮಾಯಕ ಎಂದರೆ ಕೊಲೆಯೂ ಆಗಿರಬಹುದು; ನಾಪತ್ತೆಯೂ ಆಗಿರಬಹುದು. ಇದರರ್ಥ ಸಿರಿಯೇ ಅವರಿಬ್ಬರನ್ನೂ ಸುರಕ್ಷಿತ ಜಾಗವೊಂದಕ್ಕೆ ಯಾಕೆ ಕಳಿಸಿರಬಾರದು ? ಇದಕ್ಕೆ ಪುಷ್ಟಿ ಎಂಬಂತೆ 'ಸೊನ್ನೆ' (ಸಿರಿಗೆ ಕೊಡ್ಸರಾಳ್ವನಿಂದ ಹುಟ್ಟಿದಾಕೆ) ಬೆಳೆಯುವುದೂ ಕೊಡ್ಸರಾಳ್ವ ಮತ್ತು ಸಾಮುವಿನ ಜೊತೆಯಲ್ಲಿ ಆಗಿರದೆ, ಸಿರಿಯ ದೂರದ ಅಜ್ಜಯ್ಯ ಕಾನಬೆಟ್ಟು ಚಂದಣ್ಣ ಪೆರ್ಗಡೆಯ ಬಳಿ ! ಇದು ಯಾಕೆ ಹೀಗೆ ? ಎಂದರೆ ಸಿರಿ ತನ್ನ ಬದುಕನ್ನು ನೇರ್ಪುಗೊಳಿಸಿಕೊಳ್ಳುವ ಹೊತ್ತಿನಲ್ಲೂ ಮಕ್ಕಳ ಅತಂತ್ರತೆಗೆ ಕಾರಣವಾಗದೆ, ಅವರಿಗೆ ಬೇರೆ ವ್ಯವಸ್ಥೆ ಮಾಡಿರಬಹುದು ಎಂಬ ಊಹೆ ಹೆಚ್ಚು ಸಂಭವನೀಯ. (ಅವಳೇ ಮಾಯಕ ಮಾಡಿದಳು ಎಂದರೆ ಅವಳೇ ಹತ್ಯೆ ಮಾಡಿದಳು ಎಂಬುದು ಇವೆಲ್ಲವುಗಳ ಇನ್ನೊಂದು ಅತಿರೇಕದ ಅರ್ಥವೂ ಆದೀತು.) ಕುಮಾರನನ್ನು ಹೀಗೆ ನೀಗಿಕೊಂಡ ಕಾರಣದಿಂದಾಗಿಯೇ ಅವಳಿಗೆ ಇನ್ನೊಂದು ವಿವಾಹದ ಅವಕಾಶದ ಬಾಗಿಲು ತೆರೆದುಕೊಂಡಿತು ಎಂಬುದನ್ನೂ ನಾವು ನೆನಪಿಟ್ಟುಕೊಳ್ಳಬೇಕಾಗುತ್ತದೆ (ಸಂತಾನ ಉಳ್ಳವಳಿಗಿಂತ ಸಂತಾನರಹಿತಳ ವಿವಾಹದ ಸಾಧ್ಯತೆ ಹೆಚ್ಚು. ಇನ್ನು ಎರಡನೆಯ ವಿವಾಹದಿಂದ ಸುಖಕ್ಕಿಂತ ದುಃಖವೇ ಅವಳ ಪಾಲಿಗೆ ಬಂದಿದೆ. ಸೊನ್ನೆಯನ್ನು ಹೆತ್ತು ಅವಳು ಮಾಯಕವಾದಳು ಎಂಬುದು ಅವಳ ದುರಂತ ಸಾವಿನ ಸೂಚಕವಾಗಿದೆ. ಸಿರಿ ಸೊನ್ನೆಯನ್ನು ಹೆತ್ತುದು ಸಾಮುವಿನ ತವರಿನ ಆಸುಪಾಸಿನಲ್ಲಿ ಎಂಬುದನ್ನು ನೆನಪಿಸಿಕೊಂಡರೆ, ಅವಳ ಮಾಯಕಕ್ಕೂ ಸಾಮುವಿನ ಕೈವಾಡಕ್ಕೂ ಸಂಬಂಧ ಕಲ್ಪಿಸಿದರೆ ಅದರಲ್ಲಿ ಅಸಹಜತೆ ಇರಲಾರದು. ಕೊನೆಗೂ ಇದು ಊಹೆಯೇ.

ಎಚ್. ನಾಗವೇಣಿಯವರು ಚರ್ಚಿಸಿದಂತೆ 'ಸಿರಿ' ಪಾಡ್ದನದ ಸೃಜನಾತ್ಮಕತೆಗೆ ಸಂಬಂಧಿಸಿದಂತೆ, ಕೆಲವು ಸೂಚನೆಗಳನ್ನು ನಾನು ನೀಡಬಯಸುತ್ತೇನೆ. ಇಡೀ ಪಾಡ್ದನದಲ್ಲಿ ಅಲ್ಲಲ್ಲಿ ಹೇಳದೆ ಉಳಿದ, ಅಥವಾ ಹೇಳದೆ ನುಂಗಿಬಿಟ್ಟ ಸನ್ನಿವೇಶಗಳು ಇವೆ. ಈ ಸನ್ನಿವೇಶಗಳನ್ನು ಪಾಡ್ದನಕಾರರು ಮತ್ತು ಪಾಡ್ದನಕಾರ್ತಿಯರು ಭಿನ್ನವಾಗಿ ಚಿತ್ರಸುತ್ತಾರೋ ಒಂದೇ ಬಗೆಯಾಗಿಯೊ ?

ಭಿನ್ನತೆ ಇದ್ದಲ್ಲಿ ಎಲ್ಲಿ ? ಒಂದೇ ಬಗೆ ಆಗಿದ್ದಲ್ಲಿ ಅದರಲ್ಲಿ ಸ್ವನಿಯಂತ್ರಣದ ಪಾತ್ರ ಕೆಲಸ ಮಾಡಿದೆಯೆ ? ಅಥವಾ ಈಗ ಪಾಡ್ದನಕಾರ್ತಿಯರನ್ನು ಮತ್ತೆ ಹೀಗೆ ಖಾಲಿ ಬಿಟ್ಟ ಸಂದರ್ಭಗಳನ್ನು ತುಂಬಿಸಲು ಹೇಳಿದರೆ ಹೇಗೆ ತುಂಬಿಸಿಯಾರು ಎಂಬ ಕುತೂಹಲವಿದೆ. ಬೆಳಿಗ್ಗೆ ಎ. ವಿ. ನಾವಡ ಅವರು ಮಾತಾಡುತ್ತಾ, 'ಬರ' ಕೊಡುವ ಸನ್ನಿವೇಶವನ್ನು ಪಾಡ್ದನಕಾರ್ತಿ ಗಿಡಿಗೆರೆ ರಾಮಕ್ಕ ಮುಗೇರ್ತಿ ಚುಟುಕಾಗಿ ವಿವರಿಸಿದಾಗ, ನಾವಡ ಅವರು ''ನಿಮಗೇ ಬರ ಕೊಡುವ ಸಂದರ್ಭ ಎದುರಾಗಿದ್ದರೆ'' ಎಂದು ಭಾವನಾತ್ಮಕವಾಗಿ ಮೀಟಿದಾಗ, ಮುಗೇರ್ತಿ ಅದೇ ಸನ್ನಿವೇಶವನ್ನು ಅರ್ಧ ಗಂಟೆಗೆ ವಿಸ್ತರಿಸಿದ್ದನ್ನು ಹೇಳಿದರು. ನನ್ನ ಕುತೂಹಲ ಈ

ಬಗೆಯದು. ತವರನ್ನು ತೊರೆಯಬೇಕಾದಾಗ, ಗಂಡನ ಕುತಂತ್ರವನ್ನು ಒಡೆಯಬೇಕಾದಾಗ, ಮಗನಿಂದ ಮತ್ತು ದಾರುವಿನಿಂದ ಅಗಲಬೇಕಾದಾಗ, ಸಾಮುವಿನೊಂದಿಗೆ ರಾಜಿ ಮಾಡಿಕೊಳ್ಳಬೇಕಾದಾಗ ಸಿರಿಯ ಮನಃಸ್ಥಿತಿ ಏನಾಗಿತ್ತು? ತನ್ನ ಗಂಡ 'ಸಿರಿ'ಯನ್ನು ವಿವಾಹ ಮಾಡಿಕೊಂಡದ್ದು ತಿಳಿದಾಗ ಸಾಮುವಿನ ಅಂತರಂಗದ ಹೊಯ್ದಾಟ ಏನು? ಸವತಿಯರು ಒಂದೇ ಮನೆಯಲ್ಲಿ ಜೀವಿಸಬೇಕಾದಾಗ ಅವರೊಳಗಿನ ಸಂಘರ್ಷ-ಒಪ್ಪಂದ ಯಾವ ಬಗೆಯವು? ಇವುಗಳ ಕುರಿತು ಪಾಡ್ದನಕಾರ್ತಿಯರ ಭಾವನೆಗಳನ್ನು ಮೀಟುವ ಕೆಲಸ ಮಾಡಿದರೆ, ಸಿರಿಯ ಕಥನಕ್ಕೆ ಇನ್ನೊಂದು ಆಯಾಮ ದೊರೆತೀತೆ?

ಮೇಲಿನ ಊಹೆಗೆ ಸಣ್ಣ ನಿದರ್ಶನ ನೀಡುತ್ತೇನೆ. ಅಮೃತ ಸೋಮೇಶ್ವರರು ಬರೆದ 'ಸತ್ಯನಾಪುರದ ಸಿರಿ' ಕಥನದಲ್ಲಿ ಕಾಂತುಪೂಂಜ ಮೂಡಿರುವುದಕ್ಕೂ ನಾಗವೇಣಿಯವರ 'ಸಿರಿ ತೋರಿದ ದಾರಿ' ಕಥೆಯಲ್ಲಿ ಆತ ಮೂಡಿರುವುದಕ್ಕೂ ವ್ಯತ್ಯಾಸವಿದೆ. ಅಮೃತರ ಕೃತಿಯಲ್ಲಿ 'ಕಾಂತುಪೂಂಜ ಸೂಳೆ ಸಿದ್ದುವಿನ ವೈಯಾರಕ್ಕೆ ಮರುಳಾದವ; ತಪ್ಪೆಲ್ಲ ಅವಳದೇ, ಅವನದಲ್ಲ. ಅಂದಿನದು ಆಕಸ್ಮಿಕ ಬೆಳವಣಿಗೆ, ಮತ್ತು ಅವನ ಅರಿವಿಗೆ ಬರುವ ಮೊದಲೇ ಸಿದ್ದು ಸೀಮಂತದ ಸೀರೆ ಎಗರಿಸಿ, ಗಳಿಗೆ ಮುರಿದಳು' ಎಂಬ ಅರ್ಥದ ಛಾಯೆ ಇದೆ. ನಾಗವೇಣಿಯವರ ಕಥನದಲ್ಲಿ ''ಕಾಂತುಪೂಂಜನ ಕಚ್ಚೆಹರುಕತನ ಮೊದಲೇ ಎಲ್ಲರಿಗೂ ತಿಳಿದಿದೆ. ಅಷ್ಟೇ ಅಲ್ಲ, ಕಾಂತುಪೂಂಜ ಸಿದ್ದುವಿನ ಮನೆಗೆ ಹೋಗಲು ಹಾತೊರೆಯುತ್ತಾ, ಸಮಯದ ಹುಡುಕಾಟದಲ್ಲಿ ಇದ್ದ'' ಎಂಬ ಸೂಚನೆಗಳು ಸ್ಪಷ್ಟವಾಗಿವೆ. ಆ ಮೂಲಕ ಸೀಮಂತದ ಸೀರೆಯ ಮಡಿಕೆ ಮಾತ್ರ ತಪ್ಪಿದ್ದಲ್ಲ ದಾಂಪತ್ಯದ ಕಟ್ಟುಪಾಡುಗಳೂ ತಪ್ಪಿವೆ ಎಂಬ ನಿಖರ ಸೂಚನೆ ಸಿಗುತ್ತದೆ.

ಕುಮಾರ ಮತ್ತು ದಾರುವಿನ 'ಮಾಯಕ'ದ ಸಂದರ್ಭಗಳ ನಿರ್ವಹಣೆಯೂ ಭಿನ್ನಸ್ವರೂಪಗಳಲ್ಲಿದೆ. ಎಂದರೆ ಒಟ್ಟಾಗಿ ಹೇಳಬಯಸುವುದೆಂದರೆ, ಪಾಡ್ದನಕಾರ್ತಿಯರು ಹೀಗೆ ಖಾಲಿ ಬಿಟ್ಟ ಸನ್ನಿವೇಶಗಳಿಗೆ ಸ್ತ್ರೀ ಸಂವೇದನೆಯ ಎಳೆಗಳನ್ನು ತುಂಬಿಸಲು ಸಾಧ್ಯವಾದೀತೆ? ಅದಕ್ಕೆ ಎದುರಾಗಬಹುದಾದ ಸಿರಿಯ ಪೌರಾಣೀಕರಣ, ಪಿತೃಪ್ರಧಾನ ಚಿಂತನೆಯ ಮೌಲ್ಯಗಳು, ಆಚರಣೆಯಲ್ಲಿರುವ ಸಮುದಾಯದ ಆತಂಕಗಳನ್ನು ನಿವಾರಿಸುವ ಪ್ರಯತ್ನವೂ ಜರುಗಬೇಕಾದೀತು.

ಇದುವರೆಗಿನ ಪ್ರಬಂಧ ಮಂಡನೆಗಳಲ್ಲಿ ಸಿರಿಯು ಸ್ತ್ರೀವಾದಕ್ಕೆ ಉತ್ತಮ ನಿದರ್ಶನ ಎಂಬ ನಿಲುವು ಮತ್ತೆ ಮತ್ತೆ ಮೂಡಿಬಂದಿತು. ಸಿರಿಯ ಹೋರಾಟವನ್ನು ಸಮಗ್ರವಾಗಿ ಸ್ತ್ರೀವಾದಿ ಹೋರಾಟ ಎಂದು ಒಪ್ಪುವುದು ಹೇಗೆ? ಎಂಬುದೇ ನನ್ನ ಪ್ರಶ್ನೆ. ಆಸ್ತಿಯ ಹಕ್ಕಿಗಾಗಿ ಆಕೆ ನಡೆಸಿದ ಹೋರಾಟ, ಅಥವಾ ಗಂಡನ ಅನ್ಯಸಂಬಂಧದ ಕುರಿತ ಪ್ರತಿರೋಧ, ತಾನೇ ವಿಚ್ಛೇದನ ಹೇಳುವ ಕ್ರಮ, ಅಥವಾ ಮರುವಿವಾಹವನ್ನು ಆಯ್ದುಕೊಂಡ ನೆಲೆ – ಹೀಗೆ ಯಾವುದನ್ನು ಸ್ತ್ರೀವಾದಿ ಎಂದು ವಿದ್ವಾಂಸರು ಗುರುತಿಸಿದರೋ, ಅವುಗಳನ್ನು ಮಾತೃಮೂಲೀಯ ಕುಟುಂಬದಲ್ಲಿ ಹೆಣ್ಣಿಗಿರುವ ಮೂಲಭೂತ ಹಕ್ಕು ಮತ್ತು ಅವಕಾಶಗಳೆಂದು ಆಯಾ ಸಮುದಾಯದವರು ಪ್ರತಿಪಾದಿಸುತ್ತಿದ್ದಾರೆ. ಅಮೃತ ಸೋಮೇಶ್ವರ ಅವರು ಸರಿಯಾಗಿಯೇ ಗುರುತಿಸಿರುವಂತೆ ಸಿರಿ ಬಂಡಾಯಗಾರ್ತಿ ಎಂಬುವುದಕ್ಕಿಂತ ಓರ್ವ ಹತಾಶ ಮತ್ತು ಅಸಹಾಯಕ ಹೆಣ್ಣು. ತನಗೆ ತವರಿನ ಆಸ್ತಿಯ ಒಡೆತನ ಸಿಗುವುದಿಲ್ಲ ಎಂದಾದಾಗ, ಸತ್ಯನಾಪುರದ ವಿನಾಶವನ್ನು ಬಯಸುವ, ಕಾಂತುಪೂಂಜನ ದ್ರೋಹಕ್ಕೆ ಬಸರೂರ ಅರಮನೆ ಮತ್ತು ಒಟ್ಟು ಜನ ಮಾನಸಕ್ಕೆ ಕೇಡನ್ನು ಬಯಸುವ ಸಿರಿ – ಸ್ತ್ರೀವಾದಕ್ಕೆ ಹೇಗೆ ಪ್ರತಿನಿಧಿ ಅಥವಾ ಪ್ರತೀಕವಾಗುತ್ತಾಳೆ ಎಂಬುದೇ ಅರ್ಥವಾಗುವುದಿಲ್ಲ. ಇಲ್ಲಿ ಕಾಣಿಸಿಕೊಳ್ಳುವ ಸಿರಿಯ ಚಿಂತನೆಗಳು ತೀವ್ರವಾದಿ ಸ್ತ್ರೀವಾದಿಗಳ ಚಿಂತನೆ ಗಳಿಗೆ ಹತ್ತಿರವಾಗಿವೆ. ತೀವ್ರವಾದಿ ಸ್ತ್ರೀವಾದ ಎಂಬುದು ಸ್ತ್ರೀವಾದದ ಒಂದು ಶಾಖೆಯೇ ಹೊರತು, ಅದೇ ಎಲ್ಲವೂ ಅಲ್ಲ. ಹೀಗಾಗಿ ಅವಳನ್ನು ಸ್ತ್ರೀವಾದಿ ಎನ್ನುತ್ತ ಅವಳದು ಸ್ತ್ರೀವಾದಕ್ಕೆ ಮಾದರಿ ಎಂದು ಹೇಳುವವರೆಲ್ಲ ಈಗಾಗಲೇ ಸ್ತ್ರೀವಾದದ ಕುರಿತು ಇರುವ ಅಪಕಲ್ಪನೆಗಳ ಭಾರವನ್ನು ಇನ್ನಿಷ್ಟು ಹೆಚ್ಚಿಸುತ್ತಿದ್ದಾರೆ ಎಂದೇ ಹೇಳಬೇಕಾಗುತ್ತದೆ. ಆದುದರಿಂದಲೇ ಪುರುಷರು ಸಿರಿಯನ್ನು ಅವಳ ಬಂಡಾಯಕ್ಕಾಗಿ ವೈಭವೀಕರಿಸಿದಾಗಲೆಲ್ಲ ನನಗೆ ಅಪಾಯದ ಗಂಟೆ ಮೊಳಗಿದ ಅರಿವು ಉಂಟಾಗುತ್ತದೆ.

ಕೊನೆಯದಾಗಿ, ಸಿರಿ ಆರಾಧನೆಯಲ್ಲಿ ಪಾಲ್ಗೊಳ್ಳುವವರ ನೆಲೆಯಿಂದ ಚರ್ಚೆಯನ್ನು ಬೆಳೆಸಬೇಕಾಗಿದೆ. ''ಕೆಳವರ್ಗದ ಸಮುದಾಯಗಳಲ್ಲಿ ಇರುವ ಅಸಂಖ್ಯ ಮಹಿಳೆಯರು ತಾವು ಎದುರಿಸುವ ಮನೋದೈಹಿಕ, ಆರ್ಥಿಕ, ಕೌಟುಂಬಿಕ ಇತ್ಯಾದಿ ಬಿಕ್ಕಟ್ಟುಗಳನ್ನು ಬಿಡಿಸಿಕೊಳ್ಳಲು ಅಸಮರ್ಥರಾಗಿದ್ದು, ಅವರಿಗೆಲ್ಲ 'ಸಿರಿ' ಅವರ ಬಿಡುಗಡೆಗೆ ದಾರಿ ಆಗಿದ್ದಾಳೆ'' ಎಂದು ಗಾಯತ್ರಿ ನಾವಡ ಹೇಳಿದರು. ಇದರಲ್ಲಿ ಸಾಕಷ್ಟು ವಾಸ್ತವಾಂಶವಿದೆ ಎಂಬುದನ್ನು ಒಪ್ಪಿಕೊಳ್ಳಲೇಬೇಕು, ಆದಾಗ್ಯೂ ಅದನ್ನೇ 'ಮಹಿಳಾ ಸಬಲೀಕರಣ', 'ಮಹಿಳಾ ಸಶಕ್ತೀಕರಣ', 'ಮಹಿಳಾ ಪ್ರತಿಭಟನೆಯ ಮಾದರಿ' ಎಂದು ಅವರು ಹೇಳುವುದನ್ನೂ ಪ್ರಶ್ನಿಸಬೇಕಾಗಿದೆ. ಡಾ|| ಉಪಾಧ್ಯಾಯರಂತೂ ''ಬಡ ಮಹಿಳೆಯರಿಗೆ ಕಡಿಮೆ ಖರ್ಚಿನಲ್ಲಿ ಮಾನಸಿಕ ಸ್ವಾಸ್ಥ್ಯ ಉಳಿಸಿಕೊಳ್ಳುವ ಬಗೆ ಸಿರಿ ಆರಾಧನೆಯಲ್ಲಿ ಸಾಧ್ಯವಾಗುವುದಾದರೆ ಅದು ಇರಲಿ'' ಎಂದೂ ಹೇಳಿದರು. ವೈಯಕ್ತಿಕ ನೆಲೆಯಲ್ಲಿ ಪ್ರತಿರೋಧ ವ್ಯಕ್ತಪಡಿಸಲಾರದ ಮಹಿಳೆಯರು 'ಸಿರಿ'ಯ ದುಃಖ ಹೇಳುವ ಮೂಲಕ, ತಮ್ಮೊಳಗನ್ನು ಹೊರಹಾಕುತ್ತಿದ್ದಾರೆ. ಇದು ಒಂದು ಬಗೆಯ 'ಕೆಥಾರ್ಸಿಸ್' ಎಂಬುದನ್ನು ಒಪ್ಪಿಕೊಳ್ಳೋಣ. ಹಾಗಾದರೆ, ಇದರ ಅನೂಚಾನ ಮುಂದುವರಿಕೆಯು ಮಹಿಳೆಯರ ಬಂಡಾಯದ ಸಾಧ್ಯತೆಯನ್ನೇ ಇಲ್ಲವಾಗಿಸುವ ಅಪಾಯಕಾರಿ ಮಾಧ್ಯಮ ಆಗಬಹುದಲ್ಲವೆ? ಎಂದರೆ, ಮಹಿಳೆಯರ ಮನೋವೈಕಲ್ಯಕ್ಕೆ ಕಾರಣವಾದ ವ್ಯವಸ್ಥೆಯೇ, ಅವರ ಬಂಡಾಯವನ್ನು ನಿರಸನಗೊಳಿಸಲು ಸಿರಿ ಆಚರಣೆಯನ್ನು ಒಂದು ಬಗೆಯ ರಕ್ಷಣಾ ಕವಚ ಎಂದು ಕೀರ್ತಿಸುತ್ತಿದೆಯೆ? ಪೋಷಿಸುತ್ತಿದೆಯೆ? ಅಥವಾ ಈ ಹೆಣ್ಣುಗಳು ಸಿರಿಯ ಮೂಲಕವೇ ತಮ್ಮ ಶೋಷಿತ ಸ್ತರಗಳನ್ನು ಹೊರಹಾಕುತ್ತ, ತಮ್ಮ ವರ್ತಮಾನದ ಬದುಕನ್ನು ಸಹನೀಯಗೊಳಿಸುತ್ತಿರಬೇಕೆ? ಇಲ್ಲವೆ ಸಿರಿಯನ್ನು ಮಹಿಳೆಯರು ಆವಾಹಿಸಿಕೊಳ್ಳಬೇಕಾಗಿ ಬಂದ ಪರಿಸ್ಥಿತಿಗಳ ನಿರ್ನಾಮದತ್ತ ಕಾರ್ಯಪ್ರವೃತ್ತವಾಗುವುದು ನಮಗೆ ಮುಖ್ಯವಾಗಬೇಕೆ? ಮತ್ತು ಪುರಾಣದ ಹೊದಿಕೆಯನ್ನು ಕಳಚಿ, ಸಿರಿ ಪಠ್ಯದ ಕಳಕೊಂಡ ಕೊಂಡಿಗಳನ್ನು ಅಥವಾ ಅರೆವಿಕಸಿತ ಸಂದರ್ಭಗಳ ಒಳಗನ್ನು ಬಗೆವ, ಅರಿಯುವ ಸಾಧ್ಯತೆಯತ್ತ ಸಾಗುವುದು ನಮಗೆ ಸಾಧ್ಯವಾದೀತೆ? ಇಂತಹ ರಚನಾತ್ಮಕ ಕಾರ್ಯಗಳು ಜರುಗಲಿ ಎಂದು ಆಶಿಸುವೆ.



ಡಾ|| ಸಬಿಹಾ ಭೂಮಿಗೌಡ
ಪ್ರಾಧ್ಯಾಪಕರು
ಕನ್ನಡ ಅಧ್ಯಯನ ವಿಭಾಗ
ಮಂಗಳೂರು ವಿಶ್ವವಿದ್ಯಾನಿಲಯ
ಮಂಗಳಗಂಗೋತ್ರಿ - ೫೭೪೧೯೯

---

ಮಾನ್ಯ ಓದುಗರೇ,

ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಕುರಿತಂತೆ ಅನೇಕ ಅಭಿಪ್ರಾಯಗಳನ್ನು ನಾವು ಗಮನಿಸುತ್ತಿರುತ್ತೇವೆ. ಸ್ವಾತಂತ್ರ್ಯಕ್ಕೆ ಮಿತಿ ಇರುವುದು ಸಹಜ; ಇತರರ ಸ್ವಾತಂತ್ರ್ಯಕ್ಕೆ ಚ್ಯುತಿ ಬಾರದಂತೆ ಸ್ವಾತಂತ್ರ್ಯವನ್ನು ಮಿತಿಗೊಳಿಸಿಕೊಳ್ಳುವುದು ಅವಶ್ಯಕ. ಆದರೆ ಈಚಿನ ಕೆಲವು ಸಂದರ್ಭಗಳಲ್ಲಿ ಸ್ವಾತಂತ್ರ್ಯಕ್ಕೆ ಕಡಿವಾಣ ಹಾಕುವ ಕೆಲಸವನ್ನು ಸ್ವಯಂಘೋಷಿತ ನಿಯಂತ್ರಕರು ವಹಿಸಿಕೊಂಡುಬಿಟ್ಟಿದ್ದಾರೆ. ಯಾವುದೋ ಭಾವನೆಗಳಿಗೆ ಆಘಾತವಾಗಿದೆ ಎಂದು ಹೇಳುತ್ತಾ ಕಲಾವಿದರ, ಸಂಶೋಧಕರ, ಸಾಹಿತಿಗಳ, ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಮೊಟಕುಗೊಳಿಸಲು ರಾಜಕೀಯ ಕ್ಷೇತ್ರದ ಮಧ್ಯಪ್ರವೇಶವಾಗಿದೆ, ಜಾತೀಯ ಹಾಗೂ ಮತಧರ್ಮೀಯ ಶಕ್ತಿಗಳು ದಾಂಧಲೆ ನಡೆಸಿವೆ. ಸಂಶೋಧನೆ, ಇತಿಹಾಸ ಗ್ರಂಥಗಳ ರಚನೆ ಇತ್ಯಾದಿಗಳ ಮೇಲೆ ಸಹ ಪ್ರಹಾರ ನಡೆದಿದೆ. ಕಾನೂನಿನ ರಕ್ಷಕರಾಗಿ ಇವರನ್ನು ಯಾರೂ ನೇಮಿಸಿಲ್ಲದಿದ್ದರೂ ತಾವೇ ರಕ್ಷಕರೆಂಬಂತೆ ನಡೆದುಕೊಳ್ಳುವ ಪ್ರವೃತ್ತಿಯೂ ಕಂಡುಬಂದಿದೆ. ಸರ್ಕಾರ ಮತ್ತು ನ್ಯಾಯಾಲಯ ಇಂಥವರ ಪರವಾಗಿ ತೀರ್ಮಾನ ಕೊಟ್ಟಿರುವುದೂ ಉಂಟು. ಅಷ್ಟಕ್ಕೂ 'ಆಘಾತ' ಎಂದರೇನು? ಯಾವ ವಿಚಾರದಲ್ಲೂ ಮುಕ್ತ ಚರ್ಚೆ ಇಲ್ಲದಂತೆ ಮಾಡಲು ಇದೊಂದು ಆಯುಧವಾಗುತ್ತಿದೆಯೇ? ಇದೆಲ್ಲದರ ಬಗ್ಗೆ ನಿಮಗೇನನಿಸುತ್ತದೆ?

'ಹೊಸತು' ಜನವರಿ ೨೦೦೮ರ ವಾರ್ಷಿಕ ಸಂಚಿಕೆಯಲ್ಲಿ ಈ ವಿಷಯವನ್ನು ಕುರಿತಂತೆ ನಮ್ಮ ಓದುಗರ ಅನಿಸಿಕೆಗಳನ್ನು ಪ್ರಕಟಿಸುವ ಉದ್ದೇಶವಿದೆ. ನಿಮ್ಮ ಅಭಿಪ್ರಾಯವನ್ನು ನವೆಂಬರ್ ೧೫ರೊಳಗೆ ಕಳಿಸಿಕೊಡಿ. ಆಯ್ದ ಕೆಲವು ಲೇಖನಗಳನ್ನು ಪ್ರಕಟಿಸಲಾಗುತ್ತದೆ. ನಿಮ್ಮ ಲೇಖನವು ೨೫೦ ಪದಗಳನ್ನು ಮೀರಬಾರದು.

– ಸಂಪಾದಕ

# ಇರಾಕ್ : ಅಧ್ಯಕ್ಷ ಬುಷ್ ಹಠಮಾರಿತನ ಅಪಾಯಕಾರಿ

ಇಪ್ಪತ್ತನೇ ಶತಮಾನದ ಎರಡು ಮಹಾಯುದ್ಧಗಳಿಂದ ಅತಿ ಹೆಚ್ಚು ಲಾಭವಾದದ್ದು ಅಮೆರಿಕಾಗೆ. ಬ್ರಿಟನ್ ಮತ್ತು ಐರೋಪ್ಯ ಸಾಮ್ರಾಜ್ಯಶಾಹಿ ದೇಶಗಳು ಶಕ್ತಿಗುಂದಿ ಅಮೆರಿಕಾದ ಕೃಪಾಶ್ರಯಕ್ಕೆ ಬಿದ್ದವು. ಈ ರಾಷ್ಟ್ರಗಳ ಮೇಲೆ ನಾಯಕತ್ವ ಸ್ಥಾಪಿಸಿದ ಅಮೆರಿಕಾ ಬಲಿಷ್ಠ ರಾಷ್ಟ್ರವಾಗಿ ಬೆಳೆದು ಇಡೀ ಜಗತ್ತಿನ ಮೇಲೆ ತನ್ನ ಅಧಿನಾಯಕತ್ವ ಸ್ಥಾಪಿಸುವ ಕನಸು ಕಾಣತೊಡಗಿತು. ಅಮೆರಿಕಾದ ಈ ಬಯಕೆಗೆ ಆಗ ಅಡ್ಡಿ ಇದ್ದುದು ಸೋವಿಯತ್ ಒಕ್ಕೂಟ. ಕಮ್ಯುನಿಸಂ ವಿಸ್ತರಣೆಯನ್ನು ತಡೆಗಟ್ಟುವ ಹೆಸರಿನಲ್ಲಿ ಅದು ರಾಷ್ಟ್ರೀಯ ವಿಮೋಚನಾ ಚಳವಳಿಯನ್ನು ಹತ್ತಿಕ್ಕಲು ಮತ್ತು ಹೊಸದಾಗಿ ಸ್ವತಂತ್ರಗೊಂಡ ದೇಶಗಳನ್ನು ಅಧೀನಗೊಳಿಸಲು ತನ್ನ ಹಣಬಲ ಮತ್ತು ಸೈನ್ಯಬಲವನ್ನು ಬಳಸಿಕೊಂಡಿತು. ಈಗ ಈ ಇಪ್ಪತ್ತೊಂದನೇ ಶತಮಾನದಲ್ಲಿ ಅಧಿನಾಯಕತ್ವ ಸ್ಥಾಪಿಸುವ ಗುರಿಯನ್ನು ಸಾಕಾರಗೊಳಿಸಲು ನೋಡುತ್ತಿದೆ. ಅದು ನೆರವೇರುವ ಸಾಧ್ಯತೆಗಳು ಕಡಿಮೆ ಇದ್ದರೂ, ಅಮೆರಿಕಾದ ಈ ಹೆಬ್ಬಯಕೆಯಿಂದ ನಾಗರಿಕ ಜಗತ್ತಿನ ಜನತೆಗೆ ತೊಂದರೆಯಾಗುತ್ತಿರುವುದಂತೂ ದಿಟ. ಸೋವಿಯತ್ ಒಕ್ಕೂಟದ ವಿಘಟನೆಯ ನಂತರ ಏಕಶಕ್ತಿ ಕೇಂದ್ರವಾದ ಮೇಲೆ ಅಮೆರಿಕಾ ನಿರಂಕುಶವಾಗಿ ವರ್ತಿಸುತ್ತಿದೆ. ತನ್ನ ಅಧಿನಾಯಕತ್ವ ಹೇರಲು ಅದು ದುರಾಕ್ರಮಣದಲ್ಲಿ ತೊಡಗುತ್ತಿದೆ. ಇರಾಕಿನ ದುರಾಕ್ರಮಣ ಅದಕ್ಕೊಂದು ನಿದರ್ಶನ.




ಮಧ್ಯಪ್ರಾಚ್ಯದ ತೈಲ ಸಂಪತ್ತಿನ ಮೇಲೆ ಯಾಜಮಾನ್ಯ ಸ್ಥಾಪಿಸಿಕೊಂಡರೆ ಇಡೀ ಜಗತ್ತಿನ ಮೇಲೆ ನಿಯಂತ್ರಣ ಸಾಧಿಸಬಹುದು ಎನ್ನುವುದು ಒಂದು ನಂಬಿಕೆ. ಈ ಆಧಾರದ ಮೇಲೇ ಅಮೆರಿಕಾ ಇರಾಕಿನ ಸರ್ವಾಧಿಕಾರಿ ಸದ್ದಾಂ ಹುಸೇನ್ ಆಡಳಿತವು ಮಾರಕಾಸ್ತ್ರಗಳನ್ನು ಕಲೆಹಾಕುತ್ತಿದೆ, ನ್ಯೂಕ್ಲಿಯರ್ ಅಸ್ತ್ರ ತಯಾರಿಸಹೊರಟಿದೆ ಎಂದು ಪೊಳ್ಳು ಆರೋಪ ಹೊರಿಸಿ ದಾಳಿ ನಡೆಸಿದ್ದು. ಮಧ್ಯಪ್ರಾಚ್ಯದಲ್ಲಿ ಅಮೆರಿಕಾಗೆ ವಿರೋಧವಾಗಿದ್ದ ರಾಷ್ಟ್ರಗಳಲ್ಲಿ ಇರಾಕ್ ಒಂದು, ಇನ್ನೊಂದು ಇರಾನ್. ಇರಾಕ್ ಆಕ್ರಮಣವಾದ ಮೇಲೆ ಅಮೆರಿಕಾದ ಕೆಂಗಣ್ಣು ಈಗ ಇರಾನಿನ ಮೇಲೆ. ಈ ಪ್ರದೇಶದಲ್ಲಿ ಉಳಿದೆಲ್ಲ ರಾಷ್ಟ್ರಗಳೂ ಅಮೆರಿಕಾದ ಹಿತಾಸಕ್ತಿಗಳಿಗೆ ಅನುಕೂಲಕರವಾಗಿಯೇ ನಡೆದುಕೊಳ್ಳುತ್ತಿವೆ. ಇರಾಕನ್ನು ಆಕ್ರಮಿಸಿಕೊಂಡು ಆರು ವರ್ಷಗಳಾಗುತ್ತ ಬಂದರೂ ಅಮೆರಿಕಾಗೆ ಅದು ಇನ್ನೂ ಹಿಡಿತಕ್ಕೆ ಸಿಕ್ಕಿಲ್ಲ. ಅದರ ಸೇನೆಗೆ ಪ್ರತಿರೋಧವನ್ನು ನಿಯಂತ್ರಿಸಲು ಸಾಧ್ಯವಾಗಿಲ್ಲ. ಇರಾಕಿನ ದುರಾಕ್ರಮಣದ ವಿಷಯದಲ್ಲಿ ಪ್ರಪಂಚದ ಬಹುತೇಕ ರಾಷ್ಟ್ರಗಳ ಜನತೆಯ ವಿರೋಧವನ್ನು ಕಟ್ಟಿಕೊಂಡಿರುವ ಅಮೆರಿಕಾ ಅಲ್ಲಿಂದ ತನ್ನ ಸೇನೆಯನ್ನು ವಾಪಸು ಕರೆಸಿಕೊಳ್ಳಲು ಸಿದ್ಧವಿಲ್ಲ. ಅಮೆರಿಕಾದ ಜನರೇ ಪ್ರತಿಭಟನೆ ತೋರಿಸಿ, ಇರಾಕಿನಿಂದ ಸೇನೆಯನ್ನು ಹಿಂತೆಗೆದುಕೊಳ್ಳಬೇಕೆಂದು ಒತ್ತಾಯಪಡಿಸುತ್ತಿದ್ದರೂ ಬುಷ್ ಆಡಳಿತ ಅದಕ್ಕೆ ಸಿದ್ಧವಿಲ್ಲ. ಅಮೆರಿಕಾಗೆ ಈ ಹಿಂದೆ ಇರಾಕ್ ದುರಾಕ್ರಮಣಕ್ಕೆ ಬೆಂಬಲ ಸೂಚಿಸಿ ಸೇನೆಯನ್ನು ಕಳಿಸಿದ್ದ ಕೆಲವೇ ದೇಶಗಳ ಪೈಕಿ ಬ್ರಿಟನ್ ಒಂದನ್ನು ಬಿಟ್ಟು ಉಳಿದವು ಸೇನೆಯನ್ನು ಹಿಂತೆಗೆದುಕೊಂಡಿವೆ. ಈಗ ಬ್ರಿಟನ್ ಕೂಡ ತನ್ನ ಸೇನೆಯನ್ನು ವಾಪಸು ಕರೆಸಿಕೊಳ್ಳಲಾರಂಭಿಸಿದೆ. ಇರಾಕಿನಲ್ಲಿ ಷಿಯಾ ಮುಸಲ್ಮಾನರೇ ಅಧಿಕವಾಗಿರುವ ಭಾಷಾ ಪ್ರಾಂತದ ಉಸ್ತುವಾರಿ ನೋಡಿಕೊಳ್ಳುತ್ತಿರುವ ೫,೫೦೦ ಮಂದಿ ಬ್ರಿಟಿಷ್ ಸೈನಿಕರಲ್ಲಿ ಮೊದಲ ಕಂತಿನಲ್ಲಿ ೫೫೦ ಯೋಧರನ್ನು ವಾಪಸು ಕರೆಸಿಕೊಳ್ಳಲಾಗಿದೆ. ಇದು ಬುಷ್ ಆಡಳಿತೆಗೆ ಕಿರಿಕಿರಿ ಉಂಟುಮಾಡಿದೆ. ಬಹಿರಂಗವಾಗಿ ಬುಷ್ ಬ್ರಿಟನ್ನನ್ನು ಕಟುವಾಗಿ ಟೀಕಿಸಿ, ಈ ಕ್ರಮವನ್ನು ಪ್ರತಿರೋಧದ ಇದಿರಿನಲ್ಲಿ ತೋರಿರುವ ಹೇಡಿತನ ಎಂದಿದ್ದಾರೆ. ಇದು ಎರಡು ಮಿತ್ರ ರಾಷ್ಟ್ರಗಳ ನಡುವೆ ವಾದವಿವಾದಕ್ಕೆ ಎಡೆ ಮಾಡಿಕೊಟ್ಟಿದೆ. ಇರಾಕ್ ಯುದ್ಧದಲ್ಲಿ ಅಮೆರಿಕಾಗೆ ಬೆಂಬಲವಾಗಿ ಭುಜಕೊಟ್ಟು ನಿಂತದ್ದಕ್ಕೆ ಬ್ರಿಟನ್ನಿನ ಪ್ರಧಾನಿ ಟೋನಿ ಬ್ಲೇರ್ ತೆತ್ತ ಬೆಲೆ ಅಧಿಕಾರ ತ್ಯಾಗ.



ಅಧಿಕಾರದಲ್ಲಿ ಮುಂದುವರಿಯಲು ಅಧ್ಯಕ್ಷ ಜಾರ್ಜ್ ಬುಷ್ ಇರಾಕಿನ ವಿಚಾರದಲ್ಲಿ ಅಮೆರಿಕಾದ ಜನತೆಯ ಬೆಂಬಲ ಕಳೆದುಕೊಂಡಿದ್ದಾನೆ. ಆದರೂ ಆತ ತನ್ನ ಹಠಮಾರಿ ಧೋರಣೆಯನ್ನು ತ್ಯಜಿಸಿಲ್ಲ. ಇರಾಕಿನಲ್ಲಿ ದಿನೇ ದಿನೇ ಪರಿಸ್ಥಿತಿ ಹದಗೆಡುತ್ತಿದೆ. ಕಳೆದ ಮೂರು ತಿಂಗಳಲ್ಲಿ ೩೩೧ ಮಂದಿ ಅಮೆರಿಕನ್ ಯೋಧರು ಸಾವನ್ನಪ್ಪಿದ್ದಾರೆ, ೨೦೦೦ಕ್ಕೂ ಹೆಚ್ಚು ಮಂದಿ ಯೋಧರು ಗಾಯಗೊಂಡಿದ್ದಾರೆ. ಅಮೆರಿಕಾದ ಆಕ್ರಮಣದ ಆರು ವರ್ಷಗಳ ಅವಧಿಯಲ್ಲಿ ಇರಾಕಿ ನಾಗರಿಕರ ಸಾವಿನ ಸಂಖ್ಯೆ ಆರು ಲಕ್ಷವನ್ನು ಮೀರಿದೆ. ಪ್ರತಿನಿತ್ಯ ಬಾಂಬು ಆಸ್ಫೋಟನೆಗಳಿಂದ ದೇಶದ ಯಾವುದಾದರೂ ಭಾಗದಲ್ಲಿ ಸಾವು ನೋವುಗಳ ವರದಿಯಾಗುತ್ತಿದೆ. ಇರಾಕಿನಲ್ಲಿ ಅಮೆರಿಕಾದ ಸೇನೆಯ ಜೊತೆಗೆ ಕೈಜೋಡಿಸಲು ೧೮೦,೦೦೦ ಮಂದಿ ಕೂಲಿ ಸಿಪಾಯಿಗಳಿದ್ದಾರೆ. ದಕ್ಷಿಣ ಆಫ್ರಿಕಾ ಆಸ್ಟ್ರೇಲಿಯಾ, ಬ್ರೆಜಿಲ್, ಭಾರತ, ಪಾಕಿಸ್ತಾನ ಮತ್ತು ನೇಪಾಳೀಯರೇ ಅಧಿಕವಾಗಿರುವ ಈ ಕೂಲಿ ಸಿಪಾಯಿಗಳು ಕಂಟ್ರ್ಯಾಕ್ಟ್ ಮೇಲೆ ಇದ್ದಾರೆ. ಅಮೆರಿಕಾದ ಕಾರ್ಮಿಕ ಇಲಾಖೆಯ ವರದಿಯ ಪ್ರಕಾರ ಇವರ ಪೈಕಿ ೯೧೦ ಮಂದಿ ಮಡಿದಿದ್ದಾರೆ ಮತ್ತು ೧೨೦೦೦ ಮಂದಿ ಗಾಯಗೊಂಡಿದ್ದಾರೆ. ಮತ್ತೆ ಅಧ್ಯಕ್ಷ ಜಾರ್ಜ್ ಬುಷ್ ಇರಾಕಿನಲ್ಲಿ ಸ್ಥಾಪಿಸಿರುವ ಕೈಗೊಂಬೆ ಸರಕಾರ ನೆಪಮಾತ್ರಕ್ಕೆ ಅಧಿಕಾರದಲ್ಲಿದೆ ಅಷ್ಟೆ. ಆರು ವರ್ಷಗಳ ಅವಧಿಯಲ್ಲಿ ಇರಾಕ್ ಮತ್ತು ಆಫ್ಘಾನಿಸ್ತಾನದ ದುರಾಕ್ರಮಣದಿಂದಾಗಿ ಅಮೆರಿಕಾ ಸರಕಾರಕ್ಕೆ ಸುಮಾರು ೬೧೦ ಬಿಲಿಯನ್ ಡಾಲರುಗಳು ಖರ್ಚಾಗಿವೆ ಎಂಧು ಅಂದಾಜು. ಈ ಆಕ್ರಮಣ ಅಮೆರಿಕಾಗೆ ವಿಪರೀತ ದುಬಾರಿಯಾಗಿ ಪರಿಣಮಿಸುತ್ತಿದೆ. ಇರಾಕಿನ ಆರ್ಥಿಕ ಸ್ಥಿತಿ ತೀವ್ರವಾಗಿ ಕುಸಿದಿದೆ, ಜನಜೀವನ ದುಸ್ತರವಾಗಿದೆ. ದೇಶದ ತೈಲ ಉತ್ಪಾದನೆಯ ಮೇಲೆ ಅಮೆರಿಕಾದ ಕಂಪನಿಗಳ ಹತೋಟಿಯಲ್ಲಿದ್ದರೂ, ವಿಧ್ವಂಸಕರ ಮತ್ತು ಕಳ್ಳಕಾಕರ ಹಾವಳಿಗೀಡಾಗಿದೆ.

ಪರಿಸ್ಥಿತಿ ಈ ಬಗೆಯಲ್ಲಿದ್ದರೂ ಅಧ್ಯಕ್ಷ ಬುಷ್ ಸೇನೆಯನ್ನು ಹಿಂತೆಗೆದುಕೊಳ್ಳಲು ಸಿದ್ಧವಿಲ್ಲ. ಅಮೆರಿಕಾದ ಶಾಸಕಾಂಗ ೨೦೦೮ರ ವೇಳೆಗೆ ಇರಾಕಿನಿಂದ ಎಲ್ಲ ಸೇನೆಯನ್ನು ವಾಪಸು ಕರೆಸಿಕೊಳ್ಳಬೇಕು ಎಂದು ಸೂಚಿಸಿದೆ. ಆದರೆ ಬುಷ್ ಅದನ್ನು ತಿರಸ್ಕರಿಸಿ, ವೇಳೆಯನ್ನು ನಿಗದಿಪಡಿಸಲಾಗುವುದಿಲ್ಲ ಎಂದಿದ್ದಾನೆ. ಕನಿಷ್ಠ ಇನ್ನೂ ಹತ್ತು ವರ್ಷವಾದರೂ ಅಮೆರಿಕನ್ ಸೇನೆ ಇರಾಕಿನಲ್ಲಿರಬೇಕು ಎನ್ನುವುದು ಸೇನಾನಿಗಳ ವಿಚಾರ. 'ಗುರಿ ಮುಟ್ಟುವವರೆಗೆ ಇರಬೇಕು' ಇದು ಬುಷ್ ವಾದ. ಅಂದರೆ ಅಷ್ಟರಲ್ಲಿ ಇರಾಕಿನಲ್ಲಿ ಏನೂ ಉಳಿಯದು. ಇರಾನಿನ ಮೇಲೆ ದಾಳಿ ನಡೆಸಲು ಹುನ್ನಾರ ನಡೆಸಿರುವ ಬುಷ್ ಏನೇ ಆದರೂ ಇರಾಕಿನಿಂದ ಕಾಲ್ತೆಗೆಯುವುದಿಲ್ಲ ಎನ್ನುವುದು ಖಚಿತ. ಅಲ್ಲಿಗೆ ಬುಷ್ 'ಗುರಿ' ಮುಟ್ಟಿದ ಹಾಗಾಗುತ್ತದೆ. ಈ ಗುರಿ ಸಾಧನೆಯೇ ಅಧಿನಾಯಕತ್ವದ ಮಹತ್ವಾಕಾಂಕ್ಷೆ. ಯೂರೋಪಿನಲ್ಲಿ 'ನ್ಯಾಟೊ'ದ ವಿಸ್ತರಣೆಯೂ ಇದರ ಒಂದು ಭಾಗ. ಇಂಥ ಅಪಾಯವನ್ನು ಎದುರಿಸುವುದು, ಹಿಮ್ಮೆಟ್ಟಿಸುವುದು ಎಲ್ಲ ಸ್ವಾತಂತ್ರ್ಯಪ್ರೇಮಿಗಳ, ಪ್ರಜಾಪ್ರಭುತ್ವವಾದಿಗಳ ಕರ್ತವ್ಯ, ಇಲ್ಲದಿದ್ದರೆ ಅನಾಹುತ ಜರುಗುವುದು ಶತಃಸಿದ್ಧ.

ಸೀಯಾರ್ಕೆ
'ಚೌಬೀನ', ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು - ೮೫

# ಅಂಡಮಾನ್ ಕುರಿತ ಮೂರು ಕನ್ನಡ ಪ್ರವಾಸ ಕಥನಗಳು

## ಒಂದು ನೋಟ

ಹಾಲಾಡಿ ಮಾರುತಿ ರಾವ್

ಕನ್ನಡದಲ್ಲಿ ತುಲನಾತ್ಮಕ ವಿಮರ್ಶೆ ಇಲ್ಲವೆಂದಲ್ಲ, ಸಾಲದು ಎನ್ನುವುದು ನನ್ನ ಅಭಿಪ್ರಾಯ. ಕನ್ನಡ ಪ್ರವಾಸ ಕಥನಗಳಲ್ಲಿ ಚಿರಾಯುವಾಗಿ ಉಳಿಯುವ ಕೆ. ಪಿ. ಪೂರ್ಣಚಂದ್ರ ತೇಜಸ್ವಿಯವರ 'ಅಲೆಮಾರಿಯ ಅಂಡಮಾನ್' (೧೯೯೦), ಕೆ. ಟಿ. ಗಟ್ಟಿಯವರ 'ನಿಸರ್ಗ ಕನ್ಯೆ ಅಂಡಮಾನ್' (೧೯೯೬) ಮತ್ತು ಡಾ|| ರಹಮತ್ ತರೀಕೆರೆಯವರ 'ಅಂಡಮಾನ್ ಕನಸು' (೨೦೦೧) – ಈ ಮೂರು ಕೃತಿಗಳ ತುಲನಾತ್ಮಕ ಅಧ್ಯಯನದ ಒಂದು ಪುಟ್ಟ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

'ಅಲೆಮಾರಿಯ ಅಂಡಮಾನ್'ದ ಆರನೆಯ ಮುದ್ರಣವನ್ನು ೧೯೯೮ರಲ್ಲಿ ಅಂದವಾಗಿ ಹೊರತಂದ (ಅದರಲ್ಲಿ ನೈಲ್ ನದಿಯ ಕಥೆಯೂ ಸೇರಿಕೊಂಡಿದೆ) 'ಪುಸ್ತಕ ಪ್ರಕಾಶನ'ದ ಪ್ರಕಾಶಕರು ಈ ಪ್ರವಾಸ ಕಥನ ''ಕನ್ನಡ ಸಾಹಿತ್ಯದಲ್ಲಿ ಈವರೆಗೂ ಬಂದಿಲ್ಲದ ಹೊಸ ರೀತಿಯ ಅಸಾಧಾರಣ ಪ್ರವಾಸ ಕಥನ''ವೆಂದು ಹೊಗಳಿದ್ದಾರೆ. ೧೯೨೭ರಲ್ಲಿ ಪ್ರಕಟವಾದ – ಈವರೆಗೆ ಆರು ಆವೃತ್ತಿಗಳನ್ನು ಕಂಡ – ವಿ.ಸೀ.ಯವರ 'ಪಂಪಾ ಯಾತ್ರೆ'ಯನ್ನು ಓದಿದ ನನಗೆ innovative (ಹೊಸತನ ತರುವ) ಎಂಬ ಹೆಗ್ಗಳಿಕೆ ತೇಜಸ್ವಿಯವರ ಕಥನಕ್ಕೆ




ನೀಡುವುದು ಅನುಚಿತವೆಂದು ಕಾಣುತ್ತದೆ. 'ಪಂಪಾಯಾತ್ರೆ' ಕೇವಲ ಅರವತ್ತೇ ಪುಟದ ಒಂದೇ ದಿನದ ಹತ್ತಿರದ ಊರಿನ ಕಥನವಾಗಿರಬಹುದು. ಆದರೆ ನಾವೀನ್ಯತೆಯಲ್ಲಿ, ಸೊಗಸಲ್ಲಿ, ಭಾಷಾಶೈಲಿಯಲ್ಲಿ ಅವರಿಗೆ ಪ್ರಥಮ ವೀಳ್ಯ ನೀಡುವುದು ಉಚಿತವೆಂದು ನನಗೆ ತೋರುತ್ತದೆ. ದೊಡ್ಡ ಕ್ಯಾನ್‌ವಾಸ್‌ನಲ್ಲಿ ಪ್ರಥಮವಾಗಿ ಕಾಣಿಸಿಕೊಂಡ ಮಾತ್ರಕ್ಕೆ ತೇಜಸ್ವಿಯವರ ಪ್ರವಾಸ ಕಥನಕ್ಕೆ ಅಗ್ರಪೂಜೆ ಮಾಡಬೇಕಾಗಿಲ್ಲ.

ಹಾಗೆಂದ ಮಾತ್ರಕ್ಕೆ ತೇಜಸ್ವಿಯವರ ಪ್ರವಾಸ ಕಥನದ ಹಿರಿಮೆಯನ್ನು ನಾನು ಅಲ್ಲಗಳೆದಂತಾಗುವುದಿಲ್ಲ. ಇವರ ಕಥನದಲ್ಲಿ ''ಏಕಮುಖ ಏಕತಾನವಿಲ್ಲ'', ''ಕಾಲ ಮತ್ತು ದೇಶಗಳಲ್ಲಿ ಒಮ್ಮೆಲೇ ಚಲಿಸುವ ಬರಹಗಾರರ ಪ್ರಜ್ಞೆ, ಅನುಭವಗಳ ಅನೇಕ ಆಯಾಮಗಳನ್ನು ಒಟ್ಟೊಟ್ಟಿಗೇ ಸೃಷ್ಟಿಸಿರುವುದನ್ನು ಈ ಕೃತಿಯಲ್ಲಿ ಎಲ್ಲೆಂದರಲ್ಲಿ ಕಾಣಬಹುದು'' – ಪ್ರಕಾಶಕರ ಈ ಮಾತನ್ನು ನಾವು ಒಪ್ಪಿಕೊಳ್ಳಲೇಬೇಕು. ಆದರೆ ಇದು ಅವರ ಪುಸ್ತಕ ಹೊರಬಂದನಂತರ ಬಂದ ನಮ್ಮ ಮುಂದಿರುವ ಇನ್ನೆರಡು ಕೃತಿಗಳಿಗೂ ಅನ್ವಯಿಸುತ್ತದೆ. ಈ ಮೂರು ಕೃತಿಗಳಲ್ಲಿ ಯಾವುದು ಮೊದಲು, ಯಾವುದು ಎರಡನೆಯದು, ಯಾವುದು ಮೂರನೆಯದು ಎಂದು ಹೇಳಲು ನಾನು ಹೊರಟಿಲ್ಲ. ಮೂರೂ ಚೆನ್ನಾಗಿವೆ. ಒಂದರಿಂದ ಇನ್ನೊಂದು ಹೇಗೆ ಭಿನ್ನವಾಗಿದೆ ಎಂದು ಗುರುತಿಸುವುದಷ್ಟೇ ನನ್ನ ಇಲ್ಲಿಯ ಉದ್ದೇಶ.

ಈ ಮೂರೂ ಪುಸ್ತಕಗಳ ಗಾತ್ರವಾಗಲೀ, ಬೆಲೆಯಾಗಲೀ ಹೆಚ್ಚುಕಡಿಮೆ ಒಂದೇ. ಓದುಗರಿಗೆ ಎಟಕುವಂತಹ ಸರಳ ಶೈಲಿ, ಅವರಿಗೆ ಎಟಕುವಂತಹ ಸುಲಭ ಬೆಲೆ.

ಶೀರ್ಷಿಕೆಗಳನ್ನು ಗಮನಿಸಿದಾಗ, ಮುಖಪುಟ ವಿನ್ಯಾಸ ಗಮನಿಸಿದಾಗ ತೇಜಸ್ವಿಯವರ ಮತ್ತು ತರೀಕೆರೆಯವರ ಪುಸ್ತಕಗಳು ಗಟ್ಟಿಯವರ ಪುಸ್ತಕಕ್ಕಿಂತ ಹೆಚ್ಚು ಆಕರ್ಷಕವಾಗಿವೆ ಎನ್ನಿಸದೆ ಇರಲಾರದು. ಅಂಡಮಾನಿನಂತಹ ದಟ್ಟ ಅರಣ್ಯದ ಪ್ರದೇಶವನ್ನು ಒಂದು 'ಕನ್ಯೆ'ಯಾಗಿ ಊಹಿಸಿಕೊಳ್ಳುವುದು ಕಷ್ಟ. 'ಅಲೆಮಾರಿಯ ಜಾಗ' ಎನ್ನಬಹುದು. 'ಕನಸು' ಎಂದರೂ ನಡೆಯುತ್ತದೆ.

ಕೆ. ಟಿ. ಗಟ್ಟಿಯವರು ತಮ್ಮ ಪುಸ್ತಕಕ್ಕೆ ತಾವೇ ಬರೆದುಕೊಂಡ ಮುನ್ನುಡಿ ತುಂಬಾ ಚೆನ್ನಾಗಿದೆ. ಕ್ಷೌರದ ಅಂಗಡಿಯಲ್ಲಿ ತಾವು ಕಾಣುತ್ತಿದ್ದ ನಿಸರ್ಗ ದೃಶ್ಯಗಳನ್ನು ಅವರು ಪ್ರಸ್ತಾಪಿಸಿ ಕಲಾವಿದನ ಕಲಾಸೃಷ್ಟಿ ಹೇಗಿರುತ್ತದೆ ಎಂಬುದನ್ನು ಸುಂದರವಾಗಿ ವಿವರಿಸಿದ್ದಾರೆ. ಆದರೆ ಅವರು ಪುಸ್ತಕದಲ್ಲಿ ನೀಡಿದ ಎಂಟು ಕಪ್ಪು ಬಿಳುಪಿನ ಅಂಡಮಾನಿನ ಚಿತ್ರಗಳು ತೀರಾ ಪುಟ್ಟದಾಗಿವೆ. ತರೀಕೆರೆಯವರ ಪುಸ್ತಕದೊಳಗಿನ ಛಾಯಾಚಿತ್ರಗಳೂ ಕಪ್ಪು ಬಿಳುಪೇ. ಆದರೆ ಅವುಗಳ ಸಂಖ್ಯೆ ಜಾಸ್ತಿ, ಇಪ್ಪತ್ತು ಇವೆ. ಚಿಕ್ಕದಾಗಿಲ್ಲ, ಪುಟಪೂರ್ತಿ ತುಂಬಿಕೊಂಡು ಚೆನ್ನಾಗಿ ಕಾಣುತ್ತವೆ. ತೇಜಸ್ವಿಯವರ ಪುಸ್ತಕದಲ್ಲಿ ಪ್ರತಿಯೊಂದು ಅಧ್ಯಾಯದ ಪ್ರಾರಂಭದಲ್ಲಿ ಒಂದು ಚಿತ್ರ. ಅಧ್ಯಾಯದ ಮುಕ್ತಾಯದ ನಂತರ ಆ ಪುಟದಲ್ಲಿ ಜಾಗವಿದ್ದರೆ ಅಲ್ಲೊಂದು ಚಿಕ್ಕ ಚಿತ್ರ. ಎಲ್ಲಾ ಕಲಾವಿದನ ಚಿತ್ರಗಳು. ಅವರೊಬ್ಬ ಶ್ರೇಷ್ಠ ಛಾಯಾಗ್ರಾಹಕ ರಾಗಿಯೂ ಅವರ ಪುಸ್ತಕದಲ್ಲಿ ನಮಗೇಕೆ ಅಂಡಮಾನಿನ ಛಾಯಾಚಿತ್ರಗಳು ಲಭ್ಯವಾಗದಂತಾಯ್ತು ಎಂಬುದು ನನಗೆ ಅರ್ಥವಾಗುತ್ತಿಲ್ಲ. ತೇಜಸ್ವಿಯವರ ಮತ್ತು ತರೀಕೆರೆ ಯವರ ಪುಸ್ತಕಗಳಲ್ಲಿ ಮುನ್ನುಡಿ ಇಲ್ಲ, ಮುನ್ನುಡಿ ಬೇಕಿಲ್ಲ ಕೂಡ. ಮೂರೂ ಪುಸ್ತಕಗಳಿಗೆ ಬೆನ್ನುಡಿ ಇದೆ. ತೇಜಸ್ವಿ ಯವರ ಪುಸ್ತಕದಲ್ಲಿ ಬೆನ್ನುಡಿ ಜೊತೆಗೆ ಆದಿವಾಸಿ ಹೆಣ್ಣಿನ ಅರೆನಗ್ನ ಬಣ್ಣದ ಛಾಯಾಚಿತ್ರವಿದೆ. ಒಟ್ಟಿನಲ್ಲಿ ಇವರ ಪುಸ್ತಕ ಉಳಿದೆರಡು ಪುಸ್ತಕಗಳಿಗಿಂತ ಹೆಚ್ಚು ಕಲಾತ್ಮಕ ವಾಗಿಯೂ ಸುಂದರವಾಗಿಯೂ ಇದೆ.

ಹದಿನೇಳರ ಹರಯದಲ್ಲೇ ಅಧ್ಯಾಪಕ ವೃತ್ತಿಗೆ ಪ್ರವೇಶಿಸಿದ, ಪ್ರಾಥಮಿಕ ಶಾಲೆಯ ಶಿಕ್ಷಕರಾಗಿ ಕೆಲಸದ ಮೇಲಿದ್ದುಕೊಂಡೇ ಡಿಗ್ರಿ ಡಿಪ್ಲೋಮ ಗಳಿಸಿ ಮೇಲೇರಿದ ಗಟ್ಟಿಯವರ ಅಧ್ಯಯನ ರೀತಿ ಒಂದು ಬಗೆಯ ಸಮಗ್ರತೆಯ (ಯಾವುದನ್ನೂ ಉಪೇಕ್ಷಿಸದ) ಥರದ್ದು ಎಂದು ಹೇಳಬಹುದು. ತಮ್ಮ ಪುಸ್ತಕದ ಕೊನೆಯಲ್ಲಿ ಹೆಚ್ಚಿನ ಓದಿಗಾಗಿ ಅವರು ನೀಡಿದ ಇಂಗ್ಲಿಷ್ ಗ್ರಂಥಗಳ ಪಟ್ಟಿಯ ಉದ್ದ ನೋಡಿದರೇ ಗೊತ್ತಾಗುತ್ತದೆ ಅವರ ಅಧ್ಯಯನಶೀಲತೆಯ ಶ್ರದ್ಧೆ ಮತ್ತು ವ್ಯಾಪ್ತಿ. ಏಳೆಂಟು ವರ್ಷಗಳ ಅವಧಿಯಲ್ಲಿ ಹಲವು ಬಾರಿ ಸಂಚರಿಸಿದ ತಮ್ಮ ರಾಜೀವನ ಅನುಭವ ಮತ್ತು ಜ್ಞಾನವನ್ನು ತಮ್ಮ ಈ ಬರವಣಿಗೆಯಲ್ಲಿ ಸೇರಿಸಿಕೊಂಡಿರುವುದಾಗಿ ಅವರೇ ಹೇಳಿಕೊಂಡಿದ್ದಾರೆ. ಕಥೆ ಕಾದಂಬರಿಕಾರರಾಗಿ ಅವರು ಗಳಿಸಿದ ಕಥನ ಕಲೆಯ ಜೊತೆಗೆ ಅಧ್ಯಾಪಕರಾಗಿ ವಿದ್ಯಾರ್ಥಿಗಳಿಗೆ ನೀಡುವ ನೋಟ್ಸಿನ ಕಲೆಯೂ ಇಲ್ಲಿ ಸೇರಿಕೊಂಡಿದೆ. ಮಾಹಿತಿಗಾಗಿ ಓದುವುದಾದರೆ ಅಂಡಮಾನ್ ಬಗ್ಗೆ ತಿಳಿದುಕೊಳ್ಳಲು ಇವರ ಈ ಪುಸ್ತಕ ಒಂದೇ ಸಾಕು.

ರಹಮತ್ ತರೀಕೆರೆಯವರೂ ಅಧ್ಯಾಪಕರೇ. ಆದರೆ ಇವರದು ಉನ್ನತಮಟ್ಟದ ಸಂಶೋಧನಾ ಕ್ರಮದ್ದು. ''ಹತ್ತು ವರ್ಷ ಸಾಹಿತ್ಯ ವಿಮರ್ಶೆಯ ಸಿಬುರು'' ಕೆತ್ತಿ ಒಂದು ಬದಲಾವಣೆಗಾಗಿ ಸಾಮಾನ್ಯ ಓದುಗರಿಗಾಗಿ ಬರೆದ ಕೃತಿ ಇದು. ಇವರು ಕಥೆಗಾರರಲ್ಲ, ವಿಮರ್ಶಕರು; ಚಿತ್ರಗಾರರಲ್ಲ, ಚಿಂತಕರು, ಉಪನ್ಯಾಸಕರು. ಇವರಲ್ಲಿ ಕಥನಕಲೆ ಇಲ್ಲವೆಂದಲ್ಲ, ಚಿತ್ರಕಲೆ ಇಲ್ಲವೆಂದಲ್ಲ, ಹಾಗಿದ್ದಲ್ಲಿ ಅವರಿಗೆ ಜನಪ್ರಿಯತೆಯ ರುಚಿ ಕಾಣಲು ಸಾಧ್ಯವಾಗುತ್ತಿರಲಿಲ್ಲ. ಆದರೆ ಇದನ್ನೆಲ್ಲಾ ಸ್ವಲ್ಪ ಬದಿಗೊತ್ತಿ ನಮ್ಮನ್ನು ಎಲ್ಲೆಲ್ಲೋ ಗಂಭೀರವಾಗಿ ಎಳೆದುಕೊಂಡು ಹೋಗುವ ಗುಣ ಅಲ್ಲಲ್ಲಿ ಕಂಡುಬರುತ್ತದೆ. ''ಕೊಡಲಿ ಯಾವುದಾದರೇನು ?'' ಎನ್ನುವ ಅಧ್ಯಾಯವಂತೂ ಪಕ್ಕಾ ಉಪನ್ಯಾಸ! ಆದರೆ ಅದು ಬೇಸರ ತರಿಸುವ ಉಪನ್ಯಾಸವಲ್ಲ, ನಮ್ಮನ್ನು ಎಚ್ಚರಗೊಳಿಸಿ ನಾವು ಆತ್ಮ ವಿಮರ್ಶೆಮಾಡಿಕೊಳ್ಳುವಂತೆ ಪ್ರೇರೇಪಿಸುವ ಉಪನ್ಯಾಸ. ಅಂಡಮಾನಿನಿಂದ ನಮ್ಮನ್ನು ಹೊರತಂದು ಅಮೇರಿಕನ್ನರು

ಏನು ಮಾಡುತ್ತಿದ್ದಾರೆ ನೋಡಿ ಎಂದು ನಮ್ಮನ್ನು ಬೆಚ್ಚಿ ಬೀಳಿಸುತ್ತಾರೆ. ಆಗಿಹೋದ ಬ್ರಿಟಿಷ್ ಕಾಲದ ಬದಿಯಲ್ಲಿ ಈಗ ನಮ್ಮ ಕಣ್ಣ ಮುಂದಿರುವ ಅಮೆರಿಕಾ ದಬಾವಣೆಯ ಕಾಲವನ್ನು ಇಟ್ಟು ನಾವು ಮುಂದೇನಾಗಲಿದ್ದೇವೆಯೋ ಎಂದು ಪ್ರಶ್ನಿಸುತ್ತಾರೆ. ಹಾಗಾಗಿ ಅವರ ಪ್ರವಾಸ ಕಥನದಲ್ಲಿ ಐತಿಹಾಸಿಕ ಪ್ರಜ್ಞೆಯ ಜೊತೆಗೆ ದಾರ್ಶನಿಕ ಪ್ರಜ್ಞೆಯೂ ಸೇರಿಕೊಂಡಿದೆ. ಅಂಡಮಾನ್ ಬೇರೆ ಅಲ್ಲ, ನಾವಿರುವ ಜಗತ್ತು ಬೇರೆ ಅಲ್ಲ. ಅಂಡಮಾನಿನ ಆದಿವಾಸಿಗಳ ಪಾಡು ಬೇರೆ ಅಲ್ಲ, ನಮ್ಮ ಪಾಡು ಬೇರೆ ಅಲ್ಲ. ನಾವು ಅಂಡಮಾನಿನ ಆದಿವಾಸಿಗಳನ್ನು ನಾಗರಿಕರಾಗಿ ಮಾಡಲು ಹೊರಟಂತೆ ಅಮೆರಿಕಾ ನಮ್ಮನ್ನು 'ನಾಗರಿಕ'ರಾಗಿ ಮಾಡಲು ಹೊರಟಿದೆ! ಬ್ರಿಟಿಷರು ನಮ್ಮ ದೇಶವನ್ನು ಲೂಟಿ ಮಾಡಿದಂತೆ ಈಗ ನಮ್ಮ ಜನಪ್ರತಿನಿಧಿಗಳೇ ನಮ್ಮ ದೇಶವನ್ನು ಲೂಟಿ ಮಾಡುತ್ತಿದ್ದಾರೆ!

ಅಭಿವೃದ್ಧಿಯ ಹೆಸರಿನಲ್ಲಿ ನಾವು ಮಾಡುತ್ತಿರುವುದು ಸರಿಯಲ್ಲ ಎಂಬ ಸೂಚನೆ ತೇಜಸ್ವಿಯವರು ನೀಡುತ್ತಾರಾದರೂ ಅವರ ಆಸಕ್ತಿ ಇರುವುದು ಕಾಡುಮೇಡುಗಳಲ್ಲಿ, ಪ್ರಾಣಿ ಪಕ್ಷಿಗಳಲ್ಲಿ, ಜಲಚರಗಳ ಜಗತ್ತಿನಲ್ಲಿ, ಅವರು ಅಂಡಮಾನಿನಲ್ಲಿ ನಿಂತ ಕ್ಷಣದಲ್ಲಿ, ವರ್ತಮಾನದಲ್ಲಿ. ಅವರಿಗೆ ಹಿಂದಿನ ಮುಂದಿನ ಕ್ಷಣಕ್ಕಿಂತ ಇಂದಿನ ಕ್ಷಣವೇ ಸರ್ವಸ್ವ. ಮಗುವಿನ ಆಟದಲ್ಲಿರುವ ತಲ್ಲೀನತೆ, ಹಳ್ಳಿಯ ಕೋವಿಕಾರನ ಹಾಗೂ ಮೀನು ಹಿಡಿಯುವವನ ಕುಶಲತೆ, ಕುತೂಹಲತೆ ನಮ್ಮನ್ನು ಸೆರೆಹಿಡಿದುಬಿಡುತ್ತದೆ. "ಜೈಲು ತೋರಿಸ್ತೀನಿ ಬಾರೋ" ಎಂದು ಕರೆದರೂ ಅದಕ್ಕೆ ಕಿವಿಕೊಡದೆ ರಾಡು ರೀಲು ಹಿಡಿದುಕೊಂಡು ಕೂರಲು ಇಚ್ಛಿಸುವ ಹುಚ್ಚು ಹುಡುಗನ ಹಚ್ಚಮನಸ್ಸು ತೇಜಸ್ವಿಯವರದು. ಹಾಗಾಗಿ ಅವರು ಗಟ್ಟಿಯವರಿಗಿಂತ, ರಹಮತ್ ತರೀಕೆರೆಯವರಿಗಿಂತ ನಮಗೆ ಹತ್ತಿರದವರಾಗಿ ಬಿಡುತ್ತಾರೆ. ಅವರ ಪ್ರವಾಸ ಕಥನ ಓದುವಾಗ ನಮಗೆ ಅಂಡಮಾನ್ ಮುಖ್ಯವಾಗಿ ಕಾಣಿಸುವುದಿಲ್ಲ, ತೇಜಸ್ವಿಯವರು ಮತ್ತು ಅವರ ಹವ್ಯಾಸ



ನಮಗೆ ಮುಖ್ಯವಾಗಿಬಿಡುತ್ತದೆ. ಅವರೊಡನೆ ನಾವು ಸೇರಿಕೊಂಡು ಹಗುರಾಗಿ ಬಿಡುತ್ತೇವೆ, ಬದುಕನ್ನು ಪ್ರೀತಿಸಲು ಕಲಿಯುತ್ತೇವೆ. ನಾವಿರುವ ಸುತ್ತಮುತ್ತಲಿನ ಪ್ರದೇಶವನ್ನೇ ಅಂಡಮಾನ್ ಆಗಿಸುವ ಉತ್ಸಾಹ ನಮ್ಮಲ್ಲಿ ಮೂಡುತ್ತದೆ. ಜಗತ್ತಿನ ವಿಸ್ಮಯಕ್ಕೆ ನಮ್ಮನ್ನು ನಾವು ತೆರೆದುಕೊಳ್ಳುವುದನ್ನು ಅವರಿಂದ ಕಲಿಯುತ್ತೇವೆ.

ತೇಜಸ್ವಿ, ಗಟ್ಟಿ ಮತ್ತು ತರೀಕೆರೆ ಮೂವರೂ ಅಂಡಮಾನಿಗೆ ಹೋಗುವಾಗ ಚೆನ್ನೈನಿಂದ ಹಡಗಿನಲ್ಲಿ ಹೋಗುತ್ತಾರೆ. ಹಿಂತಿರುಗುವಾಗ ಸಾಮಾನ್ಯವಾಗಿ ಆಯ್ಕೆ ಮಾಡುವ ವಿಮಾನಮಾರ್ಗವನ್ನು ಬಿಟ್ಟು ರಹಮತ್ ತರೀಕೆರೆಯವರು ಮಾತ್ರ ಸಮುದ್ರಮಾರ್ಗವಾಗಿ ವಿಶಾಖಪಟ್ಟಣಕ್ಕೆ ಹೋಗಿ ಒಂದು ದೊಡ್ಡ ಸುತ್ತುಹಾಕಿಕೊಂಡು ಹಿಂತಿರುಗುತ್ತಾರೆ. ತೇಜಸ್ವಿಯವರು ಮತ್ತು ರಹಮತ್ ತರೀಕೆರೆ ಅವರು ಪತ್ನಿ ಸಮೇತ ಗೆಳೆಯರೊಡಗೂಡಿ ಒಂದು ಗುಂಪಾಗಿ ಪ್ರವಾಸ ಮಾಡಿದರೆ, ಗಟ್ಟಿಯವರು ಏಕಾಂಗಿಯಾಗಿ ಸುತ್ತುತ್ತಾರೆ. ಗಟ್ಟಿಯವರ ತಮ್ಮ ಅಂಡಮಾನಿನಲ್ಲಿ ಕೇಂದ್ರ ಸರಕಾರದ ಆಡಳಿತ ಇಲಾಖೆಯಲ್ಲಿ ಒಬ್ಬ ಅಧಿಕಾರಿಯಾಗಿರುವುದು ಅವರಿಗೆ ಬೇಕೆಂದಲ್ಲಿ ಹೋಗಿಬರುವ ಸೌಲಭ್ಯ ಹಾಗೂ ಸಮಯ ಸಿಗುತ್ತದೆ. ಇದರಿಂದಾಗಿ ಗಟ್ಟಿಯವರ ಪ್ರವಾಸ ಕಥನದಲ್ಲಿ ಸಂದರ್ಶನಗಳಿವೆ, ಸಂಭಾಷಣೆಗಳಿವೆ. ಆದರೆ ಗುಂಪಿನಲ್ಲಿ ಹೋದಾಗಿನ ಗಮ್ಮತ್ತು ಇಲ್ಲಿಲ್ಲ. ಹಾಗಾಗಿ ಹಾಸ್ಯದ ಎಳೆಗೆ ಅವಕಾಶವಿಲ್ಲ, ಸರಸ ಸಲ್ಲಾಪಗಳಿಲ್ಲ, ಉಪಕಥೆಗಳಿಲ್ಲ. ತೇಜಸ್ವಿಯವರ ಮತ್ತು ತರೀಕೆರೆಯವರ ಕಥನಗಳಲ್ಲಿ ಇರುವಂತೆ ಇವರ ಕಥನದಲ್ಲಿಯೂ ಪಾತ್ರಗಳು ಕಾಣಿಸಿಕೊಳ್ಳುತ್ತಾರೆ ನಿಜ. ಆದರೆ ಕಾಳಗನಿರತ ಪರಶುರಾಮ, ಮನುಷ್ಯ ಮಾಂಸದ ರುಚಿ ನೋಡಿದ ಮಹಮದ್ ಸೌದಾಗರ್ – ಇಂತಹ ನರಕ ಕಂಡ ಕಾಠಿಣ್ಯದ ಅಪರೂಪ ವ್ಯಕ್ತಿಗಳ ಕಥೆಗಳೇ ಹೆಚ್ಚಾಗಿ ನಮ್ಮ ಗಮನ ಸೆಳೆಯುತ್ತವೆ.

ಸಾಹಸಪ್ರಿಯರಿಗೆ ತೇಜಸ್ವಿ, ಅನ್ವೇಷಣೆ ಪ್ರಿಯ ಆದವರಿಗೆ ಗಟ್ಟಿ, ಅವಲೋಕನೆಯಲ್ಲಿ ಮುಳುಗಲು ಇಚ್ಛಿಸುವವರಿಗೆ ರಹಮತ್ ತರೀಕೆರೆ – ತಮ್ಮ ಪ್ರವಾಸ ಕಥನಗಳಲ್ಲಿ ಹೆಚ್ಚಿನ ಆನಂದ ನೀಡಬಲ್ಲರೆಂದು ನನಗೆ ತೋರುತ್ತದೆ. ಈ ಮೂರೂ ಕಥನಗಳನ್ನು ಓದಿ ಆನಂದಿಸುವುದೇ ಹೆಚ್ಚು ಶ್ರೇಷ್ಠ.




**ಹಾಲಾಡಿ ಮಾರುತಿ ರಾವ್**
೧೮೦/೨೮, 'ಇಂಚರ', ೧೫ನೇ ಮುಖ್ಯರಸ್ತೆ
ಕುರುಬರಹಳ್ಳಿ, ಬೆಂಗಳೂರು - ೫೬೦ ೦೮೬


# ಸಾದರ ಸ್ವೀಕಾರ

**ಬಾಳಿಗೊಂದು ಬೆಳಕು - ರಾಮಾಯಣ ದೃಷ್ಟಿ**
*ಸಂ: ಪ್ರೊ|| ಜಿ. ವೆಂಕಟಸುಬ್ಬಯ್ಯ*
**ಪುಟ :** ೪೫೬ **ಬೆಲೆ : ರೂ.** ೨೫೦
**ಶ್ರೀ ಜಯರಾಮ ಸೇವಾ ಮಂಡಳಿ (ರಿ)** ನಂ. ೪೯೨/ಎ, ಶ್ರೀ ಜಯರಾಮ ಸೇವಾ ಮಂಡಳಿ ರಸ್ತೆ, ೮ನೇ ಬಡಾವಣೆ, ಜಯನಗರ, ಬೆಂಗಳೂರು - ೫೬೦ ೦೭೦

**ಸುವರ್ಣ ಕಾವ್ಯ** (ಕವನ ಸಂಕಲನ) ಸಂ. ಎಸ್ಕೆ. ಕೊನೆಸಾಗರ
**ಪುಟ :** ೯೨ **ಬೆಲೆ : ರೂ.** ೪೫
**ಸಾಹಿತ್ಯ ಸಮಾವೇಶ,** 'ಸಾಧನೆ', ನವನಗರ, ಹುನಗುಂದ - ೫೮೭ ೧೧೮

**ದುಬೈ ಎಂಬ ಮಾಯಾನಗರಿ** *ಸಂಗಮೇಶ ಕೋಟಿ*
**ಪುಟ :** ೧೧೮ **ಬೆಲೆ : ರೂ.** ೬೦
**ಸಂಗಮ ಪ್ರಕಾಶನ,** ನವನಗರ, ಹುನಗುಂದ - ೫೮೭ ೧೧೮

**ನನ್ನೊಳಗಿನ ನಾನು** (ಕವನ ಸಂಕಲನ) ವಿಜಯಲಕ್ಷ್ಮಿ ಎಂ. ಕೆ.
**ಪುಟ :** ೮೦ **ಬೆಲೆ : ರೂ.** ೩೫

**ಬೆಕ್ಕಣ್ಣನ ಉಪಾಯ** (ಮಕ್ಕಳ ಕಥೆಗಳು) ಅರುಣಾ ನರೇಂದ್ರ
**ಪುಟ :** ೫೨ **ಬೆಲೆ : ರೂ.** ೨೦
ಈ ಎರಡು ಕೃತಿಗಳ ಪ್ರಕಾಶಕರು
**ಸಿದ್ಧಾರ್ಥ ಪ್ರಕಾಶನ,** ನಂದಿನಗರ, ಕೊಪ್ಪಳ - ೫೮೩ ೨೩೧

**ರೈತರ ಆತ್ಮಹತ್ಯೆ: ತಡೆ ಹೇಗೆ ?** *ಜೆ. ಎಂ. ವೀರಸಂಗಯ್ಯ*
**ಪುಟ :** ೩೨ **ಬೆಲೆ : ರೂ.** ೧೦
**ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆ,** ಹಗರಿ ಬೊಮ್ಮನಹಳ್ಳಿ - ೫೮೩೨೧೨, ಬಳ್ಳಾರಿ ಜಿಲ್ಲೆ

**ಚರ್ಮ ರೋಗಗಳು** *ಡಾ|| ಎಚ್. ಹನುಮಂತಪ್ಪ*
**ಪುಟ :** ೧೪೨ **ಬೆಲೆ : ರೂ.** ೧೦೦
**ವೈದ್ಯ ವಾರ್ತಾ ಪ್ರಕಾಶನ,** ವಿದ್ಯಾರಣ್ಯಪುರಂ, ಮೈಸೂರು-೮

**ನೀರು** (ನಾಟಕ) ಮಹಾಶ್ವೇತಾದೇವಿ
*ಕನ್ನಡಕ್ಕೆ : ನಗರಗೆರೆ ರಮೇಶ್*
**ಪುಟ :** ೮೮ **ಬೆಲೆ : ರೂ.** ೪೫
ಸಿರಿವರ ಪ್ರಕಾಶನ, ನಂ. ೩೭/ಬಿ, ೮ನೇ ಅಡ್ಡರಸ್ತೆ, ಲಕ್ಷ್ಮೀನಾರಾಯಣಪುರ, ಬೆಂಗಳೂರು - ೨೧

**ಒಂದೇ ಕಾಂಡದ ಕುರ್ಚಿ** (ಕತೆಗಳು) ಕಸ್ತೂರಿ ಬಾಯಿ
**ಪುಟ :** ೧೩೬ **ಬೆಲೆ : ರೂ.** ೮೦
**ಮನೋಹರ ಗ್ರಂಥ ಮಾಲಾ,** ಲಕ್ಷ್ಮೀಭವನ, ಸುಭಾಸ ರಸ್ತೆ, ಧಾರವಾಡ - ೫೮೦ ೦೦೧

**ಬೆಳಗು** (ಪ್ರಶಸ್ತಿ ಪುರಸ್ಕೃತರ ಪರಿಚಯ)
*ಡಾ|| ಗವಿಸಿದ್ದಪ್ಪ ಎಚ್. ಪಾಟೀಲ*
**ಪುಟ :** ೬೪ **ಬೆಲೆ : ರೂ.** ೨೫
**ಕಲಾ ವಿಕಾಸ ಪರಿಷತ್ತು (ರಿ),** ಕೊಪ್ಪಳ - ೫೮೩ ೨೩೧

**ಮೆಲುಕು** (ಚಿಂತನ ಬರಹಗಳು)
*ಡಾ|| ಆರ್. ರಾಮಚಂದ್ರ*
**ಪುಟ :** ೭೨ **ಬೆಲೆ : ರೂ.** ೪೦
**ಹೊನ್ನು ಪ್ರಕಾಶನ,** ನಂ. ೧೨೩, 'ಹೊನ್ನು', ಶ್ರೀಕಂಠೇಶ್ವರ ಡಿಪಾರ್ಟ್‌ಮೆಂಟಲ್ ಸ್ಟೋರ್ಸ್ ಹಿಂಭಾಗ, ವಿದ್ಯಾನಗರ, ಹಾಸನ - ೫೭೩ ೨೦೧

**ವಿಠ್ಠಲನ ದಿಟ್ಟ ಹೆಜ್ಜೆಗಳು**
*ಮರಾಠಿ ಮೂಲ : ದಾಮೋದರ ಗಂಗಾಧರ ಬೇಡೇಕರ*
*ಅನು : ವಿರೂಪಾಕ್ಷ ಕುಲಕರ್ಣಿ, ಉಮಾ ಕುಲಕರ್ಣಿ*
**ಪುಟ :** ೧೧೮ **ಬೆಲೆ : ರೂ.** ೭೦
**ನೂತನ ವಿದ್ಯಾಲಯ ಸಂಸ್ಥೆಯ ಶತಮಾನೋತ್ಸವ ಆಚರಣಾ ಸಮಿತಿ,** ಕಲ್ಬುರ್ಗಿ - ೫೮೫ ೧೦೩

# ವಿಚಾರ ಪ್ರಚೋದಕ ಕೃತಿ

ದೇವರು, ಧರ್ಮ, ಸಾಕ್ಷಾತ್ಕಾರ, ಚಾತುರ್ವರ್ಣ ... ಕುರಿತ ಪ್ರಗತಿಪರ ವಿಚಾರಧಾರೆಯ ಪ್ರಬಂಧಗಳ ಸಂಕಲನ 'ಚಾತುರ್ವರ್ಣ ಧರ್ಮದರ್ಶನ'ದ ಲೇಖಕರು ವಿಚಾರವಾದಿ ಕುಮಾರ ಕಕ್ಕಯ್ಯ ಪೋಳ (ಭೀಮರಾಯ ಸಾಯಬಣ್ಣ ಪೋಳ್). ದಯೆಯ ಅಡಿಪಾಯದ ಮೇಲೆ ಕಟ್ಟಬೇಕಾದ ಧರ್ಮ ಬದುಕಿಗೆ, ಸಕಾರಾತ್ಮಕ, ಇತ್ಯಾತ್ಮಕ ಕ್ರಿಯೆಗಳಿಗೆ ಪೂರಕವಾಗಬೇಕಾದ ದೇವರು, ಹೇಗೆ ದಬ್ಬಾಳಿಕೆಗೆ, ಶೋಷಣೆಗೆ, ರಾಕ್ಷಸೀಯ ಮನೋಧರ್ಮಗಳಿಗೆ ಕಾರಣವಾಗಬಲ್ಲದು ಎಂಬುದರ ವಿಶಿಷ್ಟ ವಿಶ್ಲೇಷಣೆಯ, ವಿಚಾರ ಪ್ರಚೋದಕ ಪುಸ್ತಕವಿದು.

ರಾಮಚಂದ್ರ ಎಸ್. ಕುಲಕರ್ಣಿ




ದೇವರು, ಧರ್ಮ, ಸಾಕ್ಷಾತ್ಕಾರ, ಚಾತುರ್ವರ್ಣ... ಕುರಿತ ಪ್ರಗತಿಪರ ವಿಚಾರ ಧಾರೆಯ ಪ್ರಬಂಧಗಳ ಸಂಕಲನ 'ಚಾತುರ್ವರ್ಣ ಧರ್ಮ ದರ್ಶನ'ದ ಲೇಖಕರು ವಿಚಾರವಾದಿ ಕುಮಾರ ಕಕ್ಕಯ್ಯ ಪೋಳ (ಭೀಮರಾಯ ಸಾಯಬಣ್ಣ ಪೋಳ್).

ದಯೆಯ ಅಡಿಪಾಯದ ಮೇಲೆ ಕಟ್ಟಬೇಕಾದ ಧರ್ಮ ಬದುಕಿಗೆ, ಸಕಾರಾತ್ಮಕ, ಇತ್ಯಾತ್ಮಕ ಕ್ರಿಯೆಗಳಿಗೆ ಪೂರಕವಾಗಬೇಕಾದ ದೇವರು, ಹೇಗೆ ದಬ್ಬಾಳಿಕೆಗೆ, ಶೋಷಣೆಗೆ, ರಾಕ್ಷಸೀಯ ಮನೋಧರ್ಮಗಳಿಗೆ ಕಾರಣವಾಗಬಲ್ಲದು ಎಂಬುದರ ವಿಶಿಷ್ಟ ವಿಶ್ಲೇಷಣೆಯ, ವಿಚಾರ ಪ್ರಚೋದಕ ಪುಸ್ತಕವಿದು.

ಆತ್ಮ, ಮೋಕ್ಷ, ದೇವರು, ಪುನರ್ಜನ್ಮ, ಪುಣ್ಯ, ಸ್ವರ್ಗ... ಇತ್ಯಾದಿಗಳ ಆಸೆ ಹಾಗೂ ಬೆದರಿಕೆಗಳ ಹಿನ್ನೆಲೆಯಲ್ಲಿ ಹೇಗೆ ವಿಧ ವಿಧ ಮೋಸ ಶೋಷಣೆಗಳು ಬಾಯ್ದೆರೆದು ನಿಂತಿವೆ; ಶ್ರಮಜೀವಿಯ ಒಂದೇ ತಾಸಿನ ಕಾಯಕ ಯೋಗಿಯೊಬ್ಬನ ಇಪ್ಪತ್ನಾಲ್ಕು ತಾಸಿನ ಧ್ಯಾನಕ್ಕಿಂತ ಮಿಗಿಲು; ಶೂನ್ಯದಿಂದ ಏನನ್ನೂ ಸಂಪಾದಿಸುವುದು ಅಸಾಧ್ಯ; ಇದು ಶತಸ್ಸಿದ್ಧ. ಈ ದೇವ ದೇವತೆಗಳ ಎಡವಟ್ಟತನ ಮನುಷ್ಯನ ಎಡವಟ್ಟುಗಳನ್ನು ಹೋಲುತ್ತವೆ. ಯಾಕೆಂದರೆ, ದೇವರನ್ನು ಸೃಷ್ಟಿಸಿದ್ದೇ ಮನುಷ್ಯ. ಆಯಾಯ ಪ್ರದೇಶದ ಮಾನವರು ತಮ್ಮಂತೆಯೇ ತಮ್ಮ ದೇವರನ್ನು ಸೃಷ್ಟಿಕೊಂಡಿದ್ದಾರೆ. ಭಾವುಕರನ್ನು ಮೂರ್ಖರನ್ನಾಗಿ ಮಾಡಿ, ಮೋಕ್ಷವೆಂಬ ಸಮ್ಮೋಹನ ಬೀಸಿ ಸದಾ ಯಶಸ್ವಿಯಾಗುವ ಕೆಲ ಧೂರ್ತರು ತಮ್ಮ ಬೇಳೆ ಬೇಯಿಸಿಕೊಳ್ಳುತ್ತಿರುತ್ತಾರೆ.

ಬ್ರಹ್ಮಾನಂದ, ಸಾಕ್ಷಾತ್ಕಾರ ಅವರವರ ಮಾನಸಿಕ ಹಿನ್ನೆಲೆಯ ಆವಿರ್ಭಾವೇ ಹೊರತು ಅಂಥ ಯಾವುದೇ ವಿಶಿಷ್ಟ ಅರ್ಥ ಅಥವಾ ಫಲ ಇಲ್ಲವೇ ಇಲ್ಲ. ನಾಸ್ತಿಕರು, ಸಾಂಖ್ಯರು, ನಿರೀಶ್ವರವಾದಿಗಳು, ಬೌದ್ಧರೂ ಸಮಾಧಿ ಸಾಧಿಸಿದ್ದುಂಟು !

ಯೋಗ ಎಂದರೆ ಒಂದಾಗಿಸು, ಒಂದುಗೂಡಿಸು, ನಿಗ್ರಹಿಸು, ಕೇಂದ್ರೀಕರಿಸು ಎಂಬ ಅರ್ಥವಿದೆ. ವ್ಯಾಸ 'ಭಗವದ್ಗೀತೆ' ರಚಿಸುವ ಮೊದಲೇ ನಿರೀಶ್ವರವಾದಿಗಳಾದ ಸಾಂಖ್ಯರ ಸಿದ್ಧಾಂತಗಳಾದ ಅಹಿಂಸೆ, ನಾಸ್ತಿಕತೆ, ಯೋಗ ಬಳಕೆಯಲ್ಲಿದ್ದವು. ಆಮೇಲೆ ವ್ಯಾಸ, ಪತಂಜಲಿ ಯಂಥವರು ತಮ್ಮ ಪರಮಾತ್ಮ ಆತ್ಮಗಳ ಸಿದ್ಧಾಂತವನ್ನು ಅದರಲ್ಲಿ ಕಲಬೆರಕೆ ಮಾಡಿದ್ದಾರೆ. 'ಸಂಭೋಗ' ಕೂಡ ಒಂದು ಯೋಗವೇ. ಶಿವಶಕ್ತಿಯರ ಜನನೇಂದ್ರಿಯಗಳ ಪ್ರತೀಕವಾದ ಸ್ಥಾವರಲಿಂಗ ಜೋತಿರ್ಲಿಂಗಗಳನ್ನು ತಮ್ಮ ಪವಿತ್ರ ಆರಾಧ್ಯದೈವಗಳನ್ನಾಗಿ ಮಾಡಿಕೊಂಡರು (ಈ ಕುರಿತು ಸ್ವಾರಸ್ಯಕರ ಕತೆಯೊಂದು ಪುಸ್ತಕದಲ್ಲಿದೆ).

ದೇವರು ಧರ್ಮದ ಹೆಸರಿನಲ್ಲಿ ಚಾತುರ್ವರ್ಣ್ಯ ಧರ್ಮವನ್ನು ಹುಟ್ಟುಹಾಕಿದ ನಿಜವಾದ ದೈತ್ಯರೆಂದರೆ ಆರ್ಯರು. ಸ್ವಪ್ರತಿಷ್ಠೆಯಿಂದ ಉನ್ಮತ್ತರಾದ ಈ ದೇವ ದೇವತೆಗಳು ಬೇರೊಬ್ಬರ ಹೆಂಡಿರನ್ನು ಓಡಿಸಿಕೊಂಡುಹೋದವರು, ನರಮಾನವರೂ ಹೇಸಿಕೊಳ್ಳಬೇಕಾದ, ಹೀನಕೃತ್ಯಗಳನ್ನು ಎಸಗಿದವರು... ಹೀಗೆ ಪಡ್ಡೆ ಹುಡುಗರೂ ಚಪ್ಪರಿಸಿಕೊಂಡು ಓದಬಹುದಾದಷ್ಟು ಬಾಲಿಶತನಗಳನ್ನು ಮೈಗೂಡಿಸಿಕೊಂಡ ದೇವರುಗಳ ಸವಿವರವಿದೆ. ದಶಾವತಾರಗಳ ನಿಜಾವತಾರ ಅರಿಯಲು ಅದೇ ಹೆಸರಿನ ವಿಭಾಗವೊಂದಿದೆ.

ಬೌದ್ಧ ಧರ್ಮದ ತದ್ವಿರುದ್ಧ ವಿಷಬೀಜ ಬಿತ್ತಿದ ಶಂಕರಾಚಾರ್ಯರಿಗೆ 'ಅಭಿನವ ಬುದ್ಧ' ಎಂದೇ ಕರೆದರು. ಅಷ್ಟೇಕೆ ಹಿಂದೂ ಧರ್ಮದ ಅಮಾನವೀಯ ಅಂಶಗಳನ್ನು ಹೆಕ್ಕಿ ವಿರೋಧಿಸಿದ ಬುದ್ಧನನ್ನು ಅರಗಿಸಿಕೊಳ್ಳಲಾಗದೆ, ಎದುರಿಸಲಾಗದೆ, ಸಮರ್ಥಿಸಿಕೊಳ್ಳಲಾಗದೆ... ಕೊನೆಗೆ ಅವನನ್ನೇ 'ವಿಷ್ಣುವಿನ ಒಂಭತ್ತನೆಯ ಅವತಾರ' ಎಂದವರ ಧೂರ್ತತನವಾದರೂ ಎಂಥದ್ದು?! ನಮ್ಮ ಕಲ್ಪನೆಗೂ ಸಿಗದ ವ್ಯಾಪ್ತಿ, ವಿಸ್ತಾರಗಳನ್ನು ಪಡೆದ ವಿಶ್ವದಲ್ಲಿ, ಭಗವಂತನ 'ಬರೀ ನಮ್ಮ ಭರತಖಂಡದಲ್ಲಿ ಮಾತ್ರವೇ ಅವತರಿಸುವ' ವಾಗ್ದಾನ ಎಷ್ಟು ಹಾಸ್ಯಾಸ್ಪದವಲ್ಲವೆ ?

ಧರ್ಮಗುರುಗಳು ದೇವರ ದಲ್ಲಾಳಿಗಳಾಗಿ ಭಾವುಕರನ್ನು 'ಖೆಡ್ಡಾ'ದಲ್ಲಿ ಕೆಡವಿಕೊಂಡು, ಪಳಗಿಸಿಕೊಂಡು, ತಾವೇ ಸೃಷ್ಟಿಕರ್ತರೆಂದು, ಕೈಯೆತ್ತಿ ಆಶೀರ್ವಾದ

'ಯೋಗಿಗಳ ಸಮಾಧಿಸ್ಥಿತಿಯಲ್ಲಿ ಪರಮಾತ್ಮನ ಸಾಕ್ಷಾತ್ಕಾರ' ಬರೀ ಒಂದು ನಂಬಿಕೆ ಅಷ್ಟೆ ! ನಿರಂತರ ಸಾಧನೆಯಿಂದ ಕೇಂದ್ರೀಕೃತ ಅವರವರ ಮನಸ್ಸಿನ ಆವಿರ್ಭಾವವಷ್ಟೆ! ಅಷ್ಟೇಕೆ, ಔಷಧಿಗಳಿಂದ ಸಮಾಧಿ ಸ್ಥಿತಿ ದೊರಕಲು ಸಾಧ್ಯವೆ ? ಸಂಸಾರದಲ್ಲಿ ಭ್ರಮನಿರಸನರಾದವರು ಮಾತ್ರವೆ ಆಧ್ಯಾತ್ಮಿಗಳು, ಭಕ್ತೋನ್ಮಾದಿಗಳು. ಕೆಲವರು ಬರೀ ನೇಮ ನಿತ್ಯಪೂಜೆ ಪುನಸ್ಕಾರಗಳಲ್ಲಿ ಕಾಲಹರಣ ಮಾಡಿಕೊಂಡು ದೇವರ ಸಾನ್ನಿಧ್ಯಕ್ಕೆ ಹತ್ತಿರವಾಗುತ್ತಿದ್ದೇವೆ ಎಂದುಕೊಳ್ಳುವವರೆಲ್ಲ 'ಸ್ಕಿಜೋಫ್ರೀನಿಯಾ' ರೋಗಿಗಳೇ. ಮೋಕ್ಷಪೂಜೆ ಎಂದರೆ ಸರಳಾರ್ಥದಲ್ಲಿ ಮೃತ್ಯುಪೂಜೆಯೆ.

'ದೇವತೆಗಳ ಗದ್ದಲ' ಎಂಬ ವಿಭಾಗವಂತೂ ಓದಿಯೇ ತಿಳಿಯಬೇಕಾದ್ದು. (ಪುಟ ೩೭ರಿಂದ ೪೪ರ ವರೆಗಿನ 'ದೇವರ ಗದ್ದಲ' ಬೇಡಪ್ಪೋ ಬೇಡ !) ಮಂತ್ರಾಧೀನರಾದ ಹಿಂದೂಗಳ ದೇವತೆಗಳು ಬ್ರಾಹ್ಮಣರ ಕೈಯಲ್ಲಿವೆಯೇ ಹೊರತು ಬ್ರಾಹ್ಮಣರು ದೇವತೆಗಳ ಕೈಯಲ್ಲಿ ಇಲ್ಲ! ಯಾಕೆಂದರೆ ತ್ರಿಮೂರ್ತಿಗಳೂ ಬ್ರಾಹ್ಮಣ ಸೃಷ್ಟಿ! ಈ ದೇವತೆಗಳಾದರೂ ಎಷ್ಟು? ಅಸಂಖ್ಯ ಕೋಟಿ ಕೋಟಿ! ಈ ದೇವತೆಗಳು ಎಂಥವು ? ಅನಾಗರಿಕ ವಿಚಾರಗಳ ಋಗ್ವೇದ; ಅಂಶತಃ ಅವಿವೇಕತನದ ಯಜುರ್ವೇದ; ಮೂಢನಂಬಿಕೆಗಳು ಹಾಗೂ ಜಾನಪದ ಗೀತೆಗಳ ಸಂಕಲನ ಅಥರ್ವಣವೇದ; ಕುಡಿದು ಅಮಲೇರಿ ದ್ರಾವಿಡರ ಸಂಹಾರಕ್ಕೆ ಇಂದ್ರನಿಗೆ ಪ್ರಚೋದಿಸುವ ಸಾಮವೇದ. 'ಭಗವದ್ಗೀತೆ' ಒಂದು ಮೋಸದ ಕೃತಿ.




ಲೇಖಕರು
**ಕುಮಾರ ಕಕ್ಕಯ್ಯ ಪೋಳ**

**ಪುಟ : XII + 164** **ಬೆಲೆ : ರೂ. 75**

ಪ್ರಕಟಣೆ
**ಲೋಹಿಯಾ ಪ್ರಕಾಶನ**
'ಕ್ಷಿತಿಜ', ಕಪ್ಪಗಲ್ಲು ರಸ್ತೆ, ಗಾಂಧಿನಗರ,
ಬಳ್ಳಾರಿ - ೫೮೩ ೧೦೩

ಮಾಡುತ್ತಾರೆ ! ಯಾವುದೇ ಗುರು ಶಿಕ್ಷಕನೇ ಹೊರತು ಯಜಮಾನನಲ್ಲ. ದೇವರ ಅಸ್ತಿತ್ವದ ಹೂರಣ ಹೊರಬಿದ್ದರೆ ತಮ್ಮ ಅಸ್ತಿತ್ವಕ್ಕೆ ಸಂಚಕಾರ ಬರುತ್ತೋ ಎಂಬ ಅಳುಕು ಇವರಿಗೆ. ಇವರುಗಳ ದೇವರು 'ಬರೀ ಗುಟ್ಟು'... ಆದಿರೇಣುಕಾಚಾರ್ಯ, ರೇಣುಕಾಚಾರ್ಯ ಪಂಚಾಚಾರ್ಯರುಗಳ ಗೊಂದಲದಲ್ಲಿ ಬಸವಣ್ಣನವರ ತತ್ವಗಳೇ ತಬ್ಬಲಿ ! ಅವರ ಹಾಗೂ ಬಸವಣ್ಣನಲ್ಲಿ ಅಂತರ ಅಡಿಗೂ ಆನೆಗೂ ಇರುವಷ್ಟೇ ! ವೀರಶೈವ ಧರ್ಮ ಸಂಸ್ಥಾಪಕ ಯಾರು ? ಸುದೀರ್ಘ ಜಿಜ್ಞಾಸೆಯೇ ಇಲ್ಲಿದೆ. ಆದರೆ ಬಸವಣ್ಣನೇ ವೀರಶೈವ ಧರ್ಮ ಸ್ಥಾಪಕನೆಂಬ ಆಧಾರಪೂರ್ಣ ಹಾಗೂ ತಾರ್ಕಿಕ, ಅಷ್ಟೇ ಅಪೇಕ್ಷಾರ್ಹ ನಿರ್ಧಾರವೂ ಇಲ್ಲಿದೆ.

ಸಮಾಗಮದಿಂದಲೇ ಸೃಷ್ಟಿ. ನೆಮ್ಮದಿಯುಕ್ತ ಸಂಸಾರ ಮಾಡಿ. ಸಂಸಾರದಲ್ಲಿ ಜುಗುಪ್ಸೆಗೊಂಡವರು ತತ್ವಜ್ಞಾನಿಗಳ ರೂಪದಲ್ಲಿ ನಿಮಗೆ ಆದರ್ಶವಾಗದಿರಲಿ. 'ಬ್ರಹ್ಮಸತ್ಯ; ಜಗನ್ಮಿಥ್ಯ' ಎಂಬುದನ್ನು ನಂಬಿದವರು ಸೋಮಾರಿಗಳಾಗಿಯೂ ಹೇಡಿಗಳಾಗಿಯೂ ಪರಿವರ್ತಿತಗೊಳ್ಳುತ್ತಾರೆ. ಬಾಬಾಗಳ ಪವಾಡ; ಅವರ ಸ್ವಾರ್ಥ. ಅಲ್ಲಿ ದೇವರಿಲ್ಲ; ಧರ್ಮವಿಲ್ಲ. 'ಆತ್ಮ' ಇದೊಂದು ಅಂಧವಿಶ್ವಾಸಕ್ಕೆ ದೈವೀಕತೆಯ ಮೆರುಗು ಕೊಟ್ಟ ಸುಂದರ ಕಾಲ್ಪನಿಕ ವಸ್ತು. ಆತ್ಮಸಾಕ್ಷಾತ್ಕಾರ ಎಂಬುದು ಒಂದು ತತ್ವವಿಕಲ್ಪ; ನರಗಳ ದೌರ್ಬಲ್ಯ. ಪುನರ್ಜನ್ಮ ಒಂದು ಮೂಢನಂಬಿಕೆ. ಸ್ವರ್ಗ ನರಕ ಬರೀ ಶಾಸ್ತ್ರಜಾಲ; ಪುರಾಣದ ಬದನೆಕಾಯಿ. ಅದರಲ್ಲೂ ಪುನರ್ಜನ್ಮ, ಅಜ್ಞಾನದ ಪ್ರದರ್ಶನ. ಇಂದು ಪ್ರನಾಳಶಿಶುಗಳು ಹುಟ್ಟಿ ಬರುತ್ತಿರುವಾಗ, ಪಾನ್‌ಶಾಪ್‌ಗಳಲ್ಲೂ ಗರ್ಭ ನಿರೋಧಕಗಳು ಮಾರಾಟಗೊಳ್ಳುತ್ತಿರುವಾಗ, ಸತ್ತವರ ಆತ್ಮಕ್ಕೆ ಪುನರ್ಜನ್ಮ ಇದೆ ಎಂದರೆ ನಗು ಬರದೇ ಇದ್ದೀತೆ ? ಸಂಸಾರ ಹೇಯ ಸ್ಥಳವಲ್ಲ; ಸನ್ಯಾಸತ್ವವೇ ಜೀವ ವಿರೋಧಿ, ಪ್ರಕೃತಿವಿರೋಧಿ, ಅಷ್ಟೇ ಅಲ್ಲ ಜೀವಾವಧಿ ಕಠಿಣ ಶಿಕ್ಷೆ. ಧರ್ಮಗುರುಗಳು ಜೀವಿಸಿದ್ದಾಗ ಮನುಷ್ಯರು ಸತ್ತಕೂಡಲೆ ದೇವರೆ? ಗುರುಗಳು ಪ್ರಶ್ನಾತೀತರಲ್ಲ! ಧರ್ಮಗುರುಗಳು ಗುಣವಂತರಲ್ಲ. ಅವರ ಆಡಂಬರ, ವೈಭವ... ಎಲ್ಲವೂ ಪ್ರಶ್ನಾರ್ಹಗಳೇ! ಈ ಗುರುಗಳೇ ಒಂದು ಜಟಿಲ ಸಮಸ್ಯೆ. ವಿಕಾಸವಾದವು, ಧರ್ಮ ವಿಧಿಸುವ ಯಾವುದೇ ನಂಬಿಕೆಗಳನ್ನು ದೃಢೀಕರಿಸಿಲ್ಲ. ತಾರ್ಕಿಕವಾಗಿ, ಸೈದ್ಧಾಂತಿಕವಾಗಿ, ವಾಸ್ತವವಾಗಿ ವಿಕಾಸವಾದ ಗೆಲ್ಲುತ್ತದೆ; ಧರ್ಮ ಸೋಲುತ್ತದೆ. (ಗ್ರಂಥದಲ್ಲಿ ಇದರ ಬಗ್ಗೆ ಸಮೃದ್ಧ ವಿವರಣೆ ಇದೆ.) ದೇವರ ಹೆಸರಿನಲ್ಲಿ ಶೋಷಣೆ ಮಾಡುವವರಿಗೆಲ್ಲ, ಹಾಗೆ ಬೋಧಿಸುವ ನಯವಂಚಕರಿಗೆಲ್ಲ ಗೊತ್ತು, 'ದೇವರಿಲ್ಲ ಎಂಬ ಸತ್ಯ' ! ಇಲ್ಲಿ ಚಾರ್ವಾಕ ಸಿದ್ಧಾಂತ, ಸಾಂಖ್ಯರ ಸಿದ್ಧಾಂತ ಹಾಗೂ ಹಿಂದೂ ಸಿದ್ಧಾಂತಗಳ ಸಮೀಕ್ಷೆ, ಮೀಮಾಂಸೆ ಇದೆ (ವಿವರಣೆಗಾಗಿ ಗ್ರಂಥ ನೋಡಿ).

ಇಂದಿನ ಅಸ್ಪೃಶ್ಯರು, ಗತಕಾಲದಲ್ಲಿ ಭಾರತವನ್ನಾಳಿದ ಆದಿಕ್ಷತ್ರಿಯರು ಅಂದಿನ ರಾಜ-ಮಹಾರಾಜರುಗಳ ವಂಶಜರು – ಪರಕೀಯರಾದ ಆರ್ಯರು, ಸ್ವದೇಶಿಗಳಾದ ದ್ರಾವಿಡರನ್ನು ತಮಗಿಂತ ಕೀಳೆಂದು ಪರಿಗಣಿಸಲು ತಮ್ಮ ಧರ್ಮಗ್ರಂಥಗಳನ್ನು (ದೇವರೇ ಹೇಳಿದ್ದಾನೆಂದು!) ಅನೇಕ ಅಮಾನವೀಯ ಕಟ್ಟಳೆಗಳನ್ನು ವಿಧಿಸಿದರು. ಇದರ ಹಿಂದೆ ಕಡುವೈರತ್ವದ ಸೇಡಿನ ಸಂಚಿದೆ. ಸಾರ್ವಜನಿಕ ಕೆರೆ ಬಾವಿಗಳ ನೀರಿಗೂ ಬಹಿಷ್ಕಾರಗಳಂಥ ಅದೆಷ್ಟೋ ವಿಧಿಗಳನ್ನು ರೂಪಿಸಿ, ಪ್ರಾಣಿಗಳಿಗಿಂತಲೂ ಕಡೆಯಾದ ಕೀಳುಮಟ್ಟಕ್ಕೆ ತಳ್ಳುತ್ತಾ ಬಂದರು... ಇಂಥದೇ ಆಸಕ್ತಿಪೂರ್ಣ, ಸಾತ್ವಿಕ ಪ್ರತಿರೋಧವುಳ್ಳ ಅಧ್ಯಾಯಗಳಾದ 'ಶೂದ್ರರ ಕರ್ಮ; ಸವರ್ಣೀಯರ ಧರ್ಮ; ಆರ್ಯರು ಮಾಂಸಭಕ್ಷಕರು', 'ಕೌರವ ಪಾಂಡವರ ಜಾತಿ ಯಾವುದು ?' ಎಂಬ ವಿಷಯಗಳಿಗಾಗಿ ಗ್ರಂಥವನ್ನೇ ಅವಲೋಕಿಸಬಹುದಾಗಿದೆ.

ಜಾತಿಗೆ ಒರೆಗಲ್ಲು ಯಾವುದು ? ರಕ್ತವೇ ? ಜನನವೇ ? ಶರೀರವೇ ? ಬಣ್ಣವೇ ? ನೀತಿ ಅಥವಾ ಜ್ಞಾನವೇ ? ತಂದೆಯೇ ? ತಾಯಿಯೇ ?... ಓದಿಸಿಕೊಳ್ಳುವ ಪ್ರೌಢ ವೈಚಾರಿಕತೆಯಲ್ಲದೆ 'ಇದಮಿತ್ಥಂ' ಎನ್ನುವ ನಿರ್ಧಾರ ಕೊಡುವ ವಿರಳ, ಮೌಲಿಕ ಇಲ್ಲಿನ ಎಲ್ಲ ಪ್ರಬಂಧಗಳ ಸಾರದಲ್ಲಿದೆ.

'ಪಂಡಿತರೆಲ್ಲ ಪಾಖಂಡಿಗಳು' ಎಂಬ ವಿಭಾಗದಲ್ಲಿ ಜಾತಿ ತಾರತಮ್ಯವೇ ಪುಷ್ಟೀಕರಿಸಿ, ಕಲಾತ್ಮಕ ಹಾಗೂ ಹುನ್ನಾರದ ಧೂರ್ತತನವೇ ಜೀವಾಳವಾಗಿದೆ. ಮನುಸ್ಮೃತಿಯ ಅಧ್ವಾನಗಳೆಲ್ಲ 'ದೇವನುಡಿ' ಎಂದೆನ್ನುತ್ತ ನಂಬಿಸುತ್ತಾರೆ ಈ ಧೂರ್ತರು. ಶೂದ್ರ ಎನ್ನುವ ಶಬ್ದ ವೇದ ಪೂರ್ವದ ಮೂಲಶಬ್ದ ಅಲ್ಲವೇ ಅಲ್ಲ. ಅದು ಪರ್ಶಿಯಾ ಭಾಷೆಯ ಹುದ್ರ (hudra) ಎಂಬ ಶಬ್ದವನ್ನು 'ಶೂದ್ರ' ಎಂದು ಸಂಸ್ಕೃತದಲ್ಲಿ 'ಕಲಬೆರಕೆ' ಮಾಡಿದ್ದಾರೆ. ಲೇಖಕರು ಇನ್ನೂ ವಿಶದೀಕರಿಸುತ್ತ, ಪಾಶ್ಚಿಮಾತ್ಯರಾದ ಆರ್ಯರ 'ಮದರ್' 'ಮಾತೃ'ವಾಯ್ತು. 'ಫಾದರ್' 'ಪಿತೃ'ವಾಯ್ತು, ಬ್ರದರ್ ಭ್ರಾತೃ, ಸಿಸ್ಟರ್ ಸಹೋದರಿ, ಮಾತೃಬೀಜವಾದ 'ಓವಮ್',ಧಾರ್ಮಿಕ ಮೂಲ 'ಓಂ' ಅಂತಲ್ಲ ಎನ್ನುತ್ತಾರೆ. ಹೀಗೆ ಸಂಸ್ಕೃತ ಭಾಷೆಯ ಹುಟ್ಟಿನ ಮೂಲವನ್ನೇ ಲೇಖಕರು ಜಾಲಾಡಿಸಿದ್ದಾರೆ. ಇಲ್ಲಿ ದೇವಿಯ ಮುಂದೆ ಕೋಣ ಕಡಿಯುವ ಸಂಪ್ರದಾಯದ ಹಿಂದಿನ ಕತೆಯ ಮೂಲಕ, 'ಧರ್ಮೋ ರಕ್ಷತಿ ರಕ್ಷಿತಃ' ಎಂಬ ಘೋಷಣೆಯ ಮೂಲಕ, ಚಾತುರ್ವರ್ಣದ ಜಾತಿಪದ್ಧತಿ, ಧರ್ಮ (ಹಿಂದು)ವನ್ನು ಹಿಂದಿನಂತೆ ಮುಂದೆಯೂ ರಕ್ಷಿಸುತ್ತ ಬರಲಿ ಎಂಬ ಹುನ್ನಾರವಿದೆ. ಅದೇ ರೀತಿ ಆಸಕ್ತಿ ಕೆರಳಿಸುವ 'ಬ್ರಾಹ್ಮಣರ ಒಳಜಾತಿಗಳು', 'ಕುಲಜರ ಕಾಮದಾಹ'! 'ದಲಿತೋದ್ಧಾರದ ನಾಟಕ' ! 'ಯಾವ ಜಾತಿ ಪರಿಶುದ್ಧ ?'... ಇತ್ಯಾದಿ ಪ್ರಶ್ನೆಗಳಿಗೆ ಉತ್ತರಗಳಿವೆ.

ರಾಮಚಂದ್ರ ಎಸ್. ಕುಲಕರ್ಣಿ
ಎಫ್-೩, ಲಕ್ಷ್ಮೀ ಅಪಾರ್ಟ್‌ಮೆಂಟ್, ಸಾರಸ್ವತಪುರ, ಧಾರವಾಡ - ೫೮೦ ೦೦೨



# ನವ ವೈದ್ಯಕೀಯ ಸಂಶೋಧನೆಗಳಲ್ಲಿ ನೈತಿಕ ಪ್ರಶ್ನೆಗಳು

ಫ್ರಾನ್ಸ್‌ನಲ್ಲಿ ಜೀವನಿರೋಧಕಶಕ್ತಿರಹಿತ ಹುಟ್ಟಿದ ಮಕ್ಕಳ ಒಂದು ಬಗೆಯ ಕಾಯಿಲೆಯನ್ನು ಗುಣಪಡಿಸುವಲ್ಲಿ ಸಫಲರಾಗಿ, ೫ ಮಕ್ಕಳಿಗೆ ಚಿಕಿತ್ಸೆ ನೀಡಿ ಬದುಕುಳಿಯುವಂತೆ ಮಾಡಿದ್ದಾರೆ. ಆದರೆ ಈ ಚಿಕಿತ್ಸೆ ನಿಯಮಿತವಾಗಿ ರೂಢಿಯಲ್ಲಿ ಬಂದಾಗ ಇದು ಎಷ್ಟರಮಟ್ಟಿಗೆ ಉಪಯೋಗವಾಗುತ್ತದೆ ಎಂದು ಕಾದುನೋಡಬೇಕು. ಈ ಪದ್ಧತಿಯನ್ನು ಪಾಲಿಸುವ ದಿಶೆಯಲ್ಲಿ ಹಲವಾರು ತಾಂತ್ರಿಕ ತೊಡಕುಗಳಿವೆಯಂತೆ, ವೈದ್ಯವಿಜ್ಞಾನಿಗಳು ಹಂತಹಂತವಾಗಿ ಈ ತೊಡಕುಗಳನ್ನು ಗೆದ್ದುಬರುವಲ್ಲಿ ಸಫಲರಾಗುತ್ತಾರೆಂದು ನಿರೀಕ್ಷಿಸಬಹುದಾಗಿದೆ. ಆದರೆ ಈ ರೀತಿಯ ಚಿಕಿತ್ಸೆ ಮಾಡಬೇಕೇ ಅಥವಾ ಮಾಡಬೇಡವೇ ಎಂಬ ನೈತಿಕ ಪ್ರಶ್ನೆ ಮಾತ್ರ ಹಾಗೆಯೇ ಉಳಿದಿದೆ.

**ಡಾ।। ಎಚ್. ಎಸ್. ಮೋಹನ್**

ಇತ್ತೀಚಿನ ಆಧುನಿಕ ವೈದ್ಯಕೀಯ ತಂತ್ರಜ್ಞಾನ ಬಹಳಷ್ಟು ಮುಂದುವರಿದಿದೆ. ಹುಟ್ಟಿನಿಂದಲೇ ಬಂದ ಹಲವು ಕಾಯಿಲೆಗಳು – ಊನಗಳು, ಡೌನ್ ಸಿಂಡ್ರೋಮ್, ಕೈಕಾಲು ಮುರುಟಿ ಮಗು ಹುಟ್ಟಬಹುದಾದ ಊನಗಳು ಮುಂತಾದುವು ಇರುವ ಸಂದೇಹ ಬಂದಾಗ ಗರ್ಭದಲ್ಲಿರುವ ಭ್ರೂಣವನ್ನು ತೆಗೆಸುವುದು ಈಗೀಗ ಸಾಮಾನ್ಯವಾಗಿಬಿಟ್ಟಿದೆ. ಈ ಕುರಿತ ಸಂಶೋಧನೆಯು ಮುಂದುವರೆಯುತ್ತಿದೆ. ಮೊಗ್ಗಿಗೇ ಲಗ್ಗೆಯಿಟ್ಟು ಮುಂದೆ ಸಂಭವಿಸಬಹುದಾದ ಊನ ಅಥವಾ ಕಾಯಿಲೆ ಇರುವ ಬಗ್ಗೆ ಪ್ರಾರಂಭದಲ್ಲೇ ತಿಳಿದುಕೊಳ್ಳುವುದು ಈ ಸಂಶೋಧನೆಯ ಉದ್ದೇಶ.

ಇತ್ತೀಚೆಗೆ, ನ್ಯೂಯಾರ್ಕ್‌ನಲ್ಲಿ ಅನೇಕ ದಂಪತಿಗಳು – ತಮ್ಮ ಭ್ರೂಣಗಳಲ್ಲಿ 'ಲೀ ಫ್ರಮೇನಿ ಸಿಂಡ್ರೋಮ್' ಎಂಬ ಕಾಯಿಲೆ ಇದೆಯೇ ಎಂಬುದರ ಬಗ್ಗೆ ಪರೀಕ್ಷೆ ಮಾಡಿಸಿ ಕೊಂಡರು. ಈ ಕಾಯಿಲೆಯಿಂದಾಗಿ ಭವಿಷ್ಯದಲ್ಲಿ ಹಲವು ರೀತಿಯ ಕ್ಯಾನ್ಸರ್ ಬರಬಹುದಾಗಿದೆ. ಇದರ ಸುಳುವನ್ನು ಬಾಲ್ಯದಲ್ಲೇ ಕಿರಿವಯಸ್ಸಿನಲ್ಲೇ ಮುಂಗಾಣಬಹುದು.

ಇತ್ತೀಚೆಗೆ 'ಮಾನವ ವಂಶವಾಹಿ ಯೋಜನೆ' ಎಂಬ ಸಂಶೋಧನಾ ಕಾರ್ಯಕ್ರಮ ಫಲಪ್ರದವಾಗಿ ನಡೆಯಿತು. ಆದರಂತೆ ಯಾವ ಯಾವ ವಂಶವಾಹಿಯಲ್ಲಿ ಈ ತೊಂದರೆ ಪೂರ್ವಭಾವಿಯಾಗಿಯೇ ಕಂಡುಬರುತ್ತದೆ ಎಂಬುದು ಪ್ರಾರಂಭದಲ್ಲೇ ಸ್ಪಷ್ಟವಾಗುತ್ತದೆ. ಆ ಮೂಲಕ ವೈದ್ಯವಿಜ್ಞಾನಿಗಳು ವಂಶವಾಹಿಗಳನ್ನು ಶೋಧಿಸಿ ಈ ಕಾಯಿಲೆಯ ಅಂಶವೂ ಇಲ್ಲದ ವಂಶವಾಹಿಗಳನ್ನು ಪತ್ತೆಹಚ್ಚಿ ಅವುಗಳನ್ನು ತಾಯಿಯ ಗರ್ಭಕೋಶಕ್ಕೆ ವರ್ಗಾಯಿಸಿ, ಕಾಯಿಲೆಯಿಲ್ಲದ ಮಗು ಹುಟ್ಟುವಂತೆ ನೋಡಿಕೊಳ್ಳುವಲ್ಲಿ ಯಶಸ್ವಿಯಾಗಿದ್ದಾರೆ.

ಇವುಗಳ ಬಗ್ಗೆ ಚಿಕಿತ್ಸೆ ನಡೆಸಿದ ಶಿಕಾಗೋದ ಜೆನೆಟಿಕ್ಸ್ ಸಂಸ್ಥೆಯ ಯೂರಿ ವೆರ್ಲಿನ್‌ಸ್ಕಿ ಯವರ ಪ್ರಕಾರ, 'ಲೀ ಫ್ರಮೇನಿ ಸಿಂಡ್ರೋಮ್' ಸೂಚನೆ ಇರುವ ವ್ಯಕ್ತಿಗೆ ೬೦ ವರ್ಷವಾಗುವ ಹೊತ್ತಿಗೆ ಕ್ಯಾನ್ಸರ್ ಬರುವ ಸಾಧ್ಯತೆ ಶೇಕಡ ೯೦ರಷ್ಟು ಇರುವುದಾಗಿಯೂ, ೪೦ ವರ್ಷವಾಗುವ ಹೊತ್ತಿಗೆ ಶೇಕಡ ೫೦ರಷ್ಟು ಸಾಧ್ಯತೆ ಇರುವುದಾಗಿಯೂ ಹೇಳುತ್ತಾರೆ. ಈ ತಿಳಿವಳಿಕೆಯಿದ್ದರೆ, ಇಂತಹ ಕಾಯಿಲೆ ಇರುವ ಯಾರಾದರೂ ತಮ್ಮ ಮುಂದಿನ ಪೀಳಿಗೆಗೆ ಇದನ್ನು ವರ್ಗಾಯಿಸಲು ಇಷ್ಟಪಡುವುದಿಲ್ಲ ಎಂದು ಅಭಿಪ್ರಾಯಪಡುತ್ತಾರೆ.

ಈ ಕಾಯಿಲೆಯನ್ನು ಪತ್ತೆಹಚ್ಚಲು ನಡೆಸಿದ ಪರೀಕ್ಷೆ ಎಂದರೆ ಪ್ರಿ-ಇಂಪ್ಲಾಂಟೇಷನ್ ಜೆನೆಟಿಕ್ ಪರೀಕ್ಷೆಯನ್ನು ಈ ಪರೀಕ್ಷಾ ಮಾರ್ಗವನ್ನು ಹಿಮೋಫೀಲಿಯ, ಸಿಸ್ಟಿಕ್ ಫೈಬ್ರೋಸಿಸ್, ಸಿಕ್ಲ್-ಸೆಲ್ ಅನೀಮಿಯಾ – ಹೀಗೆ ೬೦ಕ್ಕೂ ಹೆಚ್ಚು ಕಾಯಿಲೆಗಳ ಬಗ್ಗೆ ಮೊದಲೇ ತಿಳಿಯಲು ಈಗಾಗಲೇ ಉಪಯೋಗಿಸಲಾಗುತ್ತಿದೆ. ಆದರೆ, ಮೇಲೆ ತಿಳಿಸಿದ ಉದಾಹರಣೆಯಲ್ಲಿ – ಕಾಯಿಲೆ ಬರದಂತೆ ತಡೆಯಲು ನಡೆಸಿದ ಪ್ರಯೋಗ ಇದೇ ಮೊದಲಿನದು.

ಆದರೆ, ಜೆಫ್ರಿಕಾಹ್ನ್ ಮೊದಲಾದ ನೈತಿಕ ತಜ್ಞರು ಈ ತಂತ್ರಜ್ಞಾನ ದುರುಪಯೋಗ ವಾಗುವ ಬಗ್ಗೆ ಎಚ್ಚರಿಸುತ್ತಾರೆ. ಯಾವುದೋ ನಿರ್ದಿಷ್ಟ ಕಾಯಿಲೆ ಇದೆಯೆ ಇಲ್ಲವೆ ಎಂಬುದನ್ನು ಪರೀಕ್ಷಿಸಲು ಆರಂಭವಾಗುವ ಈ ಪ್ರಯತ್ನವು 'ಭ್ರೂಣಗಳನ್ನು' ಉತ್ತಮ, ಮಧ್ಯಮ, ನೀಚ ಎಂಬುದಾಗಿ ವಿಂಗಡಿಸುವ ಹಂತಕ್ಕೆ ಹೋಗುವುದು ಸರಿಯೆ ಎಂಬುದು ಅವರ ಸಂಶಯ. ನಮಗೆ ವಂಶವಾಹಿಗಳ ಬಗ್ಗೆ ಹೆಚ್ಚು ಹೆಚ್ಚು ಮಾಹಿತಿ ದೊರಕಿದ ಹಾಗೆ ''ನೀವು ಯಾವ ತೊಂದರೆಗಳನ್ನು ತಪ್ಪಿಸಲು ಒಪ್ಪುತ್ತೀರಿ, ಹಾಗೂ ಯಾವ ತೊಂದರೆಗಳನ್ನು ಒಪ್ಪುತ್ತೀರಿ, ನಿಮಗೆ ಯಾವುದೋ ಒಂದು ಬಗೆಯ ಕ್ಯಾನ್ಸರ್‌ನ (ಶೇಕಡ ೫೦ರಷ್ಟು) ತೊಂದರೆ ಇರುವುದು ಒಪ್ಪಿಗೆಯೆ ಅಥವಾ ಇನ್ನೊಂದು ಬಗೆಯ ಕ್ಯಾನ್ಸರ್‌ನ ಶೇಕಡ ೩೦ರಷ್ಟು ಇರುವುದು ಒಪ್ಪಿಗೆಯೆ ಎಂಬುದರ ಬಗ್ಗೆ ಖಚಿತವಾಗಿ ನಿರ್ಧಾರ ತೆಗೆದು ಕೊಳ್ಳುವುದು ತುಂಬಾ ಕಷ್ಟವಾಗುತ್ತದೆ. ನಾವು ಭವಿಷ್ಯದಲ್ಲಿ ಕಾಯಿಲೆಗಳನ್ನು ಮಾತ್ರವಲ್ಲ, ಅವುಗಳ ಗುಣಾವಗುಣಗಳನ್ನು ಆರಿಸಲು ಅಥವಾ ಹುಡುಕಲೂ ತೊಡಗುತ್ತೇವೆ'' ಎಂಬುದು ಅವರ ಅಂಬೋಣ. ಆದರೆ ಮೊದಲು ಇದನ್ನು ಬಳಸಿದ ವೈದ್ಯವಿಜ್ಞಾನಿ ವೆರ್ಲಿನ್‌ಸ್ಕಿ – ''ನಾವು ಕಾಯಿಲೆ ಕಂಡುಹಿಡಿಯುತ್ತಿದ್ದೇವೆ. ಮಗುವನ್ನು ನಮಗೆ ಬೇಕಾದ ಹಾಗೆ ರೂಪುಗೊಳಿಸುತ್ತಿಲ್ಲ'' ಎಂದು ವಾದಿಸಿ – ಜೆಫ್ರಿಕಾಹ್ನ್ ಅವರ ವಾದವನ್ನು ಅಲ್ಲಗಳೆಯುತ್ತಾರೆ.

''ಈ ಮೇಲಿನ ಪರೀಕ್ಷೆಯಲ್ಲಿ ನಾವು ಭ್ರೂಣವನ್ನು ಪರೀಕ್ಷಿಸುತ್ತೇವೆಯೇ ಹೊರತು,

ಫಲಿತಗೊಂಡ ಮಗುವನ್ನಲ್ಲ; ಹಾಗಾಗಿ ತಾಯಿಯ ಗರ್ಭವನ್ನು ನಿಲ್ಲಿಸುವ ಪ್ರಶ್ನೆಯೇ ಇಲ್ಲ; ತಾಯಿ-ತಂದೆಯರಿಗೆ ಮಾನಸಿಕ ಆಘಾತ ಆಗುವ ಪ್ರಶ್ನೆಯೇ ಇಲ್ಲ; ಒಂದು ವೇಳೆ ಈ ಪರೀಕ್ಷೆಯಲ್ಲಿ ಅನುಮಾನಾಸ್ಪದವಾದ ತೊಂದರೆ ಏನಾದರೂ ಕಂಡುಬಂದರೆ – ಭ್ರೂಣವನ್ನು ತೆಗಿಸಿಬಿಡಬಹುದು ಹಾಗೂ ದಂಪತಿಗಳು ಇನ್ನೊಮ್ಮೆ ಆರೋಗ್ಯಕರ ಭ್ರೂಣಗಳನ್ನು ಉತ್ಪಾದನೆ ಮಾಡುವಂತೆ ನೋಡಿಕೊಳ್ಳಬಹುದು'' – ಈ ವಾದವನ್ನು ಒಪ್ಪದ ಕಾಹ್ನ್ ಅವರು ಈ ವಾದವು ಇನ್ನೊಂದು ನೈತಿಕ ಪ್ರಶ್ನೆಯನ್ನು ಮುಂದೊಡ್ಡುತ್ತದೆ ಎಂದು ಅಭಿಪ್ರಾಯ ಪಡುತ್ತಾರೆ. ಈ ಪ್ರಯೋಗಗಳಲ್ಲಿ ಅನವಶ್ಯಕವಾಗಿ ಹಲವಾರು ಭ್ರೂಣಗಳನ್ನು ನಾಶಪಡಿಸುವ ಪರಿಸ್ಥಿತಿ ಬರುತ್ತದೆ. ಹಾಗಾದಾಗ ಈ ಭ್ರೂಣಹತ್ಯೆ ಒಂದು ಅನೈತಿಕ ಕೃತ್ಯವೇ ಅಲ್ಲದೆ, ಇದಕ್ಕೆ ಯಾರು ಹೊಣೆ, ಇದು ಅಗತ್ಯವೆ ? – ಎಂಬ ಮೂಲಭೂತ ಪ್ರಶ್ನೆಗಳು ಉದ್ಭವವಾಗುತ್ತವೆ.

ವೈಜ್ಞಾನಿಕ ಕ್ಷೇತ್ರಗಳಲ್ಲಿ ಜರುಗುತ್ತಿರುವ ಸಂಶೋಧನೆ ಹಾಗೂ ಪ್ರಗತಿಗಳ ಬಗ್ಗೆ ವೈಜ್ಞಾನಿಕ ಕ್ಷೇತ್ರದಲ್ಲಿ ಪ್ರಗತಿ ಆಗುತ್ತಿದ್ದಂತೆಯೆ, ಈ ರೀತಿಯ ವಾದ-ವಿವಾದಗಳೂ ನಡೆಯುತ್ತಲೇ ಇವೆ. 'ಮಾನವ ವಂಶವಾಹಿ ಯೋಜನೆ'ಯ ಫಲವಾಗಿ ಹುಟ್ಟಿದ ವಿವಾದ ಮುಂದಿನ ದಿನಗಳಲ್ಲಿ ಯಾವ ದಿಕ್ಕನ್ನು ತೆಗೆದುಕೊಳ್ಳುತ್ತದೆ ಎಂದು ಸದ್ಯಕ್ಕೆ ಹೇಳಲಾಗದು.



## ಬೆಳಗು

ಮರೆತು ಬಿಡಲಿ ಹೇಗೆ ?
ಎಲ್ಲವನ್ನು ಆ ಎಲ್ಲವನ್ನು
ಕಳೆದ ದಿನಗಳ ಸ್ಮೃತಿಗಳನ್ನು

ಕಸಕಡ್ಡಿಗಳ ರಾಶಿಯಲ್ಲಿ ನೀರು ನುಗ್ಗಿ ಬಂದಂತೆ
ಉಳಿದ ನೆನಪುಗಳನ್ನೆಲ್ಲಾ ಅತ್ತಿತ್ತ ಸರಿಸಿ
ಬೇಡವೆಂದರೂ ಬಂದು ಕಾಡುವುದು.

ಜಗಳವಾಡಲೇ ನೆನಪುಗಳ ಜೊತೆಗೆ ?
ಮುದ್ದಿಸಿ ಸಾಕಲೇ ಜೊತೆಯಿದ್ದ ಸಮಯದ ನೆನಪುಗಳ ?
ಕಾವುಕೊಟ್ಟು ಬೆಚ್ಚಗಿಟ್ಟುಕೊಳ್ಳಲೇ ?

ಕಾಡುವುದು ಆಡುವಂತಾಗಿ
ಕಳೆದದ್ದು ಹಾಡುವಂತಾಗಿ
ಮುಂದೆಂಬುದು ಮುಟ್ಟಲು ಸಿಗಬಾರದೇ ?
ಕತ್ತಲು ಕಳೆದು ಬೆಳಕು ತುಂಬಿದಂತೆ ?
ಬೆಳಕಿನಲ್ಲೇ ಮಿಂದಂತೆ ?
ಬದುಕು ಸಂದಂತೆ ?

ಬಂದಗದ್ದೆ ರಾಧಾಕೃಷ್ಣ
ಕೆಳದಿ - ೫೭೭ ೪೦೧, ಸಾಗರ, ಶಿವಮೊಗ್ಗ ಜಿಲ್ಲೆ

ಇದೇ ರೀತಿಯ ಇನ್ನೊಂದು ಸಂಶೋಧನೆಯ ಬಗೆಗಿನ ವಾದವಿವಾದವನ್ನು ಗಮನಿಸಿ.

ಕೆಲವರಿಗೆ ತಮ್ಮಲ್ಲಿಲ್ಲದ ಕೆಲವು ಲಕ್ಷಣಗಳು/ಗುಣಗಳು ನಿಜಕ್ಕೂ ಇದ್ದಿದ್ದರೆ ತುಂಬಾ ಉತ್ತಮವಾಗಿತ್ತು ಎಂದೆನಿಸುವುದಿದೆ. ಉದಾಹರಣೆಗೆ, ಈಗಿರುವುದಕ್ಕಿಂತ ೨ ಇಂಚು ಉದ್ದವಿದ್ದಿದ್ದರೆ, ಈಗಿರುವ ಕಂದುಬಣ್ಣದ ಕಣ್ಣಿನ ಬದಲು ನೀಲಿಬಣ್ಣದ ಕಣ್ಣುಗಳು ಇದ್ದಿದ್ದರೆ, ಸಂಗೀತದಲ್ಲಿ ತನಗೆ ಇನ್ನೂ ಹೆಚ್ಚು ಪರಿಶ್ರಮವಿದ್ದಿದ್ದರೆ... ಹೀಗೆ ಹತ್ತು ಹಲವು... 'ರೆ'ಗಳು ಈ ಪಟ್ಟಿಗೆ ಸೇರುತ್ತವೆ. ಇಂದು ವೈದ್ಯವಿಜ್ಞಾನದಲ್ಲಿ ಜರುಗುತ್ತಿರುವ ಫಲಕಾರಿ ಸಂಶೋಧನೆಗಳನ್ನು ಗಮನಿಸಿದರೆ ಭವಿಷ್ಯದಲ್ಲಿ ಈ ರೀತಿಯ ಆಸೆಗಳು ಒಂದಲ್ಲ ಒಂದು ದಿನ ಕೈಗೂಡಬಹುದೇನೊ. ಸದ್ಯದಲ್ಲಿಯೇ ವೈದ್ಯವಿಜ್ಞಾನಿಗಳು 'ವಂಶವಾಹಿಗಳನ್ನು ಮಾರ್ಪಾಡು' ಮಾಡುವುದರಿಂದ ಈ ರೀತಿಯ ಗುಣಾವಗುಣಗಳನ್ನು ದೃಷ್ಟಿಸಲು ಸಾಧ್ಯ.

ಈಗಾಗಲೇ ವಿಜ್ಞಾನಿಗಳು ದೋಷಪೂರಿತ ವಂಶವಾಹಿಗಳ ಬದಲು ಆರೋಗ್ಯಕರ ವಂಶವಾಹಿಗಳನ್ನು ಅಳವಡಿಸಿ ಹಲವಾರು ಕಾಯಿಲೆಗಳನ್ನು ಗುಣಪಡಿಸುತ್ತಿದ್ದಾರೆ. ಸಂಶೋಧಕರು ಈ ರೀತಿಯ ತಳಿಸಂಬಂಧ ಪ್ರಯೋಗಗಳನ್ನು ಇಲಿ ಮತ್ತಿತರ ಪ್ರಾಣಿಗಳಲ್ಲಿ ನಡೆಸಿ ಹಲವಾರು ಕಾಯಿಲೆಗಳ ಬಗ್ಗೆ ಸಂಶೋಧನೆ ನಡೆಸಿದ್ದಾರೆ. ಸಕ್ಕರೆ ಕಾಯಿಲೆ ಬಗ್ಗೆ ಸಂಶೋಧನೆ ನಡೆಸಲು 'ದಪ್ಪಗಿನ ಇಲಿಗಳನ್ನು' ಸೃಷ್ಟಿಸಿದ್ದಾರೆ. ಹಾಗೂ ಲೂಪಸ್ ಕಾಯಿಲೆ ಬಗ್ಗೆ ತಿಳಿಯಲು ಹಲವು ಪ್ರಯೋಗಗಳನ್ನು ನಡೆಸಿದ್ದಾರೆ.

ಆದರೆ ಮಾನವನ ಮೇಲೆ ನಡೆಯುವ ಈ ತಳಿಸಂಬಂಧ ಪ್ರಯೋಗಗಳು ಯಾವ ದಿಸೆಯಲ್ಲಿ ಮುಂದುವರಿಯಲಿವೆ ? ಇವುಗಳಿಂದ ಎಂತಹ ಪರಿಣಾಮಗಳು ಸಂಭವಿಸಲಿವೆ ? ಎಂಬುದರ ಬಗ್ಗೆ ವಿಜ್ಞಾನಿಗಳು, ನೈತಿಕ ತಜ್ಞರು ಮತ್ತಿತರರಲ್ಲಿ ಹಲವು ಬಗೆಯ ವಿವಾದಗಳು ಹುಟ್ಟಿಕೊಂಡಿವೆ. ಇತ್ತೀಚೆಗೆ ಅಮೆರಿಕಾದ ಫಾಕ್ಸ್ ನೆಟ್‌ವರ್ಕ್ ಟಿ.ವಿ. ಯಲ್ಲಿ ತಳಿತಂತ್ರಜ್ಞಾನ ದಿಂದ ಉತ್ಕೃಷ್ಟ ಮಟ್ಟದ ದೃಷ್ಟಿ, ಅದ್ಭುತಶಕ್ತಿ, ಬೆಕ್ಕಿನ ರೀತಿಯ ಚುರುಕುತನ, ಮೇಲ್ಮಟ್ಟದ ಕೇಳುವಿಕೆ – ಇರುವ ಮಕ್ಕಳನ್ನು ಸೃಷ್ಟಿಸುವ ಕಾರ್ಯ ನಡೆಯುತ್ತಿದೆ – ಎಂದು ಬಿಂಬಿಸುವ ಕಾರ್ಯಕ್ರಮವೊಂದು ಪ್ರಸಾರವಾಯಿತು. ಇದು ಬರೀ ವೈಜ್ಞಾನಿಕ ಕಾಲ್ಪನಿಕ ಕಥೆಯಲ್ಲ ಎಂಬ ರೀತಿಯಲ್ಲಿ ಒಂದು ನೈಜ ಘಟನೆಯೂ ಅಮೆರಿಕಾದಲ್ಲಿ ಇತ್ತೀಚೆಗೆ ನಡೆಯಿತು.

ಆರು ವರ್ಷದ ಹೆಣ್ಣು ಮಗುವಿಗೆ, ಅದರ ಮೂಳೆಯ ಅಸ್ಥಿಮಜ್ಜೆಯಲ್ಲಿ ತೊಂದರೆ ಯಿದೆಯೆಂದು ಭ್ರೂಣವೊಂದರ (ಅದರ ೪ ತಿಂಗಳ ತಮ್ಮನಿಂದ) ಜೀವಕೋಶಗಳನ್ನು ವರ್ಗಾಯಿಸಲಾಯಿತು. ತನ್ನ ಸಹೋದರಿಗೆ ಇರುವ ಅಸ್ಥಿಮಜ್ಜೆಯ ತೊಂದರೆ ಈತನಲ್ಲಿ ಇಲ್ಲ ಎಂದು ಸಾಬೀತಾದ ಮೇಲೆ ವೈದ್ಯರುಗಳು ಈತನ ಜೀವಕೋಶದ ಬದಲಾವಣೆಗೆ ಒಪ್ಪಿಗೆ ನೀಡಿದರು.

ತಳಿಸಂಬಂಧಿ ಚಿಕಿತ್ಸೆಯು ಇನ್ನೂ ಆರಂಭದ ಹಂತದಲ್ಲಿರುವುದರಿಂದ ಕಾಯಿಲೆ ಗಳನ್ನು ಗುಣಪಡಿಸುವಲ್ಲಿ ಅಷ್ಟಾಗಿ ಪ್ರಗತಿಯಾಗಿಲ್ಲ. ಆದರೆ ಒಂದಲ್ಲ ಒಂದು ದಿನ ಮೇಲೆ ತಿಳಿಸಿದಂತೆ ಗುಣಾವಗುಣಗಳನ್ನು ತಳಿಗಳನ್ನು ಮಾರ್ಪಡಿಸುವ ಮೂಲಕ ಇಂಜನಿಯರಿಂಗ್ ಮೂಲಕ ಅದನ್ನು ಸಾಧಿಸಬಹುದಾಗಿದ್ದ ಬಗ್ಗೆ ಈ ವಿಷಯ ಇನ್ನೂ ನಿಖರವಾಗಿ ಮಾಹಿತಿ ಲಭ್ಯವಿಲ್ಲ. ಟೆಕ್ಸಾಸ್ ವಿಶ್ವವಿದ್ಯಾನಿಲಯದ ಸಂಶೋಧಕರಾದ ಆಂಡ್ರೋಜಿನ್ ಅವರು ತಳಿಸಂಬಂಧಿತ ಚಿಕಿತ್ಸೆಗಳನ್ನು ಮಾನವ ಭ್ರೂಣಗಳ ಮೇಲೆ ಮಾಡಬಹುದು, ಇಲಿಗಳಲ್ಲಿ ಈ ಬಗೆಗೆ ನಾವು ಸಫಲರಾಗಿದ್ದೇವೆ ಎಂದು ಅಭಿಪ್ರಾಯ ಪಡುತ್ತಾರೆ. ಬಹುಶಃ ಮುಂದೊಮ್ಮೆ ಈ ಚಿಕಿತ್ಸೆ ನಡೆಸಿ ಒಂದು ಮಗುವು ಒಳ್ಳೆಯ ಈಜುಪಟುವಾಗುವಂತೆಯೋ ಅಥವಾ ನೀಲಿಕಣ್ಣು ಇರುವವನಂತೆಯೋ ಮಾಡಬಹು ದಾಗಿದೆ, ಇದಕ್ಕೆ ಸ್ವಲ್ಪ ಸಮಯ ಬೇಕಾಗಬಹುದಷ್ಟೆ ಎಂದು ಹೇಳಲಾಗುತ್ತಿದೆ.

ಫ್ರಾನ್ಸ್‌ನಲ್ಲಿ ಜೀವನಿರೋಧಕಶಕ್ತಿರಹಿತ ಹುಟ್ಟಿದ ಮಕ್ಕಳ ಒಂದು ಬಗೆಯ ಕಾಯಿಲೆಯನ್ನು ಗುಣಪಡಿಸುವಲ್ಲಿ ಸಫಲರಾಗಿ, ೫ ಮಕ್ಕಳಿಗೆ ಚಿಕಿತ್ಸೆ ನೀಡಿ ಬದುಕುಳಿಯುವಂತೆ ಮಾಡಿದ್ದಾರೆ.

ಆದರೆ ಈ ಚಿಕಿತ್ಸೆ ನಿಯಮಿತವಾಗಿ ರೂಢಿಯಲ್ಲಿ ಬಂದಾಗ ಇದು ಎಷ್ಟರಮಟ್ಟಿಗೆ ಉಪಯೋಗವಾಗುತ್ತದೆ ಎಂದು ಕಾದುನೋಡಬೇಕು. ಈ ಪದ್ಧತಿಯನ್ನು ಪಾಲಿಸುವ ದಿಶೆಯಲ್ಲೂ ಹಲವಾರು ತಾಂತ್ರಿಕ ತೊಡಕುಗಳಿವೆಯಂತೆ. ವೈದ್ಯವಿಜ್ಞಾನಿಗಳು ಹಂತಹಂತವಾಗಿ ಈ ತೊಡಕುಗಳನ್ನು ಗೆದ್ದುಬರುವಲ್ಲಿ ಸಫಲರಾಗುತ್ತಾರೆಂದು ನಿರೀಕ್ಷಿಸಬಹುದಾಗಿದೆ. ಆದರೆ ಈ ರೀತಿಯ ಚಿಕಿತ್ಸೆ ಮಾಡಬೇಕೇ ಅಥವಾ ಮಾಡಬೇಡವೇ ಎಂಬ ನೈತಿಕ ಪ್ರಶ್ನೆ ಮಾತ್ರ ಹಾಗೆಯೇ ಉಳಿದಿದೆ.

**ಡಾ|| ಎಚ್. ಎಸ್. ಮೋಹನ್**
ವಿಜಯ ಕಣ್ಣಿನ ಚಿಕಿತ್ಸಾಲಯ, ಸಾಗರ - ೫೭೭ ೪೦೧, ಶಿವಮೊಗ್ಗ ಜಿಲ್ಲೆ

# ಸುಲ್ತಾನ್ ಟೀಪು ಮತ್ತು ರಾಷ್ಟ್ರಪ್ರೇಮ

'ಸುಲ್ತಾನ್ ಟೀಪು ದೇಶದ್ರೋಹಿಗಳಿಗೆ ವಿಧಿಸಿದ ಮತಾಂತರದ ಶಿಕ್ಷೆ, ಕೇವಲ ರಾಜಕೀಯವಾದದ್ದೇ ಹೊರತು, ಅದು ಮತೀಯವಾಗಿಯೂ ಇರಲಿಲ್ಲ ಅಥವಾ ಮತಾಂಧತೆಯೂ ಆಗಿರಲಿಲ್ಲ' ಎಂದು ತೀರ್ಮಾನಿಸುತ್ತಾನೆ ಮೊಹಿಬುಲ್. ತನ್ನ ಈ ವಾದಕ್ಕೆ ಅದೇ ಗ್ರಂಥದ ೩೬೭ನೇ ಪುಟದಲ್ಲಿ ತುಂಬಾ ಬಲವಾದ ಮತ್ತು ಸಮರ್ಥನೀಯವೂ ಆದ ಒಂದು ಧಾರ್ಮಿಕ ಚರ್ಚೆಯನ್ನೇ ಮಂಡಿಸುತ್ತಾನೆ. ಜೊತೆಗೆ ಶೃಂಗೇರಿ ಮಠದಲ್ಲಿ ಇಂದಿಗೂ ಸಂರಕ್ಷಿಸಿ ಇಡಲಾಗಿರುವ ಸುಲ್ತಾನ್ ಟೀಪುವಿನ ಕನ್ನಡ ಕಾಗದಪತ್ರ ಸಮಸ್ತವನ್ನೂ ಅಧ್ಯಯನ ಮಾಡಿರುವ ವೈ. ಉಮಾನಾಥ ಶೆಣೈಯವರು, ೧೯೮೯ ಮೇ ತಿಂಗಳ 'ತರಂಗ' ವಾರಪತ್ರಿಕೆಯಲ್ಲಿ ಪ್ರಕಟಿಸಿರುವ 'ಟೀಪು ಸುಲ್ತಾನನು ಹಿಂದೂ ದ್ವೇಷಿಯೇ ?' ಎಂಬ ಲೇಖನದಲ್ಲಿ ಮೊಹಿಬುಲ್ ಹಸನ್ ಮಾಡಿರುವ ವ್ಯಾಖ್ಯಾನವನ್ನು ಸಂಪೂರ್ಣವಾಗಿಯೂ ಸಾಧಾರವಾಗಿಯೂ ಸಮರ್ಥಿಸಿರುವುದನ್ನು ಮರೆಯುವಂತಿಲ್ಲ.

**ಪ್ರೊ॥ ಮ. ನ. ಜವರಯ್ಯ**



**ಸು**ಲ್ತಾನ್ ಟೀಪುವನ್ನು ಕುರಿತು ಸಂಶೋಧನಾತ್ಮಕ ಬರವಣಿಗೆಗಳನ್ನು ಪ್ರಕಟಿಸಿರುವ ವಿದ್ವಾಂಸರಲ್ಲಿ ಎಡ್ವರ್ಡ್ ಥಾಂಪ್ಸನ್, ಜಿ. ಟಿ. ಗ್ಯಾರೆಟ್, ಕಿರ್ಕ್ ಪ್ಯಾಟ್ರಿಕ್, ಬಿಟ್ಸನ್, ಮಿಶೊ, ಕಿರ್ಮಾನಿ, ಕಬೀರ್ ಕೌಸರ್, ಸಮರೋಪಾಧ್ಯಾಯ, ಗಿದ್ವಾನಿ, ಡಾ॥ ಶೇಖ್ ಅಲಿ, ಭಗವಾನ್‌ದಾಸ್, ಮೇಜರ್ ಡಿರೋಮ್, ಸತ್ಯನಾತಿಯರ್ ಇನ್ನೂ ಮುಂತಾದವರು. ಇವರಲ್ಲಿ ಬಹುತೇಕ ವಿದ್ವಾಂಸರಿಗೆ ಸುಲ್ತಾನ್ ಟೀಪುವಿನ ಪರಾಕ್ರಮಿ ಸ್ವಾತಂತ್ರ್ಯ ರಣವೀರತ್ವವನ್ನೂ, ಅವನ ಅನುಪಮ ರಾಷ್ಟ್ರಪ್ರೇಮವನ್ನೂ ಅನುಮಾನಿಸಲು ಸಾಧ್ಯವೇ ಆಗಿಲ್ಲದಿರುವುದು ಗಮನಾರ್ಹ.

ಆದರೆ, ಸುಲ್ತಾನ್ ಟೀಪುವನ್ನು ಕೆಲವರು ಪ್ರಶ್ನಿಸುತ್ತಿರುವ ಸದ್ಯದ ಎರಡು ವಿಷಯಗಳೆಂದರೆ, ಒಂದು ಕನ್ನಡ ಪ್ರೇಮ, ಇನ್ನೊಂದು ಬಲಾತ್ಕಾರದ ಮತಾಂತರ ಎಂಬುದು.

ಮೊದಲನೆಯದಾಗಿ, ಸಮಕಾಲೀನ ಕನ್ನಡಪರ ನೆಲೆಗಳಲ್ಲಿ ನಿಂತು ಹದಿನೆಂಟನೇ ಶತಮಾನದ ಸುಲ್ತಾನ್ ಟೀಪುವಿನ ಕನ್ನಡಪರ ಅಥವಾ ವಿರುದ್ಧವೆಂಬ ಮಾತನಾಡುವುದು ವಸ್ತುನಿಷ್ಠ ವಿವೇಚನೆಯೂ ಅಲ್ಲ, ಕಲೋನಿಯಲ್ ಇಂಡಿಯಾದ ದೊರೆಗಳು ಮತ್ತು ನವಾಬರ ಆಡಳಿತ ಭಾಷಾನೀತಿಯ ಚರಿತ್ರೆಗೆ ಆದರಿಂದ ನ್ಯಾಯ ದೊರೆಯುವುದೂ ಇಲ್ಲ. ಏಕೆಂದರೆ, ಪ್ರೀ-ಕಲೋನಿಯಲ್ ಯುಗದಲ್ಲಿ ಮಾತ್ರವಲ್ಲದೆ, ಪೋಸ್ಟ್-ಕಲೋನಿಯಲ್ ಇಂಡಿಯಾದ ಬಹುತೇಕ ರಾಜ ಮಹಾರಾಜರು ಮತ್ತು ನವಾಬರ ಆಡಳಿತ ಭಾಷೆ ಪರ್ಶಿಯನ್ ಆಗಿದ್ದುದರ ಜೊತೆ ಜೊತೆಗೆ, ಆಯಾ ಪ್ರದೇಶದ ಸ್ಥಳೀಯ ಭಾಷೆಗೂ ಮನ್ನಣೆ ಇತ್ತೆಂಬುದಕ್ಕೆ ಸಾಕಷ್ಟು ಸಾಕ್ಷ್ಯಗಳನ್ನೇ ಈವರೆಗಿನ ವಿದ್ವಾಂಸರು ಒದಗಿಸಿದ್ದಾರೆ. ಇಂದಿಗೂ ಸುಧಾರಣಾವಾದಿ ಹಿಂದೂ ಚಿಂತಕನೆಂದೇ ಕರೆಯಲಾಗುವ ರಾಜಾ ರಾಮ್‌ಮೋಹನ್ ರಾಯ್ ಮುನ್ಷಿ ಹುದ್ದೆಗಾಗಿ ಗಳಿಸಿದ ಪ್ರಥಮ ಅರ್ಹತೆಯೇ ಪರ್ಶಿಯನ್ ಭಾಷೆಯಲ್ಲಿ ಅವರು ಪಡೆದ ಪರಿಣತಿ ಎಂಬುದಾಗಿ ವಿದ್ವಾಂಸರೂ ಹೇಳುತ್ತಾರೆ. ಅವರ ಜೀವನ ಚರಿತ್ರೆಯೂ ಅದನ್ನೇ ಹೇಳುತ್ತದೆ. ಆದರೆ, ಅವರ ಮಾತೃಭಾಷೆ ಮಾತ್ರ ಬಂಗಾಳಿ ಎಂಬುದನ್ನು ನೆನಪಿಡಬೇಕು. ಹಾಗೆಂದ ಮಾತ್ರಕ್ಕೆ ರಾಜಾ ರಾಮ್ ಮೋಹನ್ ರಾಯ್ ಬಂಗಾಳಿ ಭಾಷಾದ್ರೋಹಿ ಎಂದು ತೀರ್ಮಾನಿಸಬೇಕೆ ? ಯಥಾಪ್ರಕಾರ ಸುಲ್ತಾನ್ ಟೀಪುವಿನ ಮಾತೃಭಾಷೆ ಉರ್ದು; ಆದರೆ ಅವನ ಆಡಳಿತಭಾಷೆ ಪರ್ಷಿಯನ್ ಆಗಿತ್ತು ಎಂಬುದಾಗಿ ಅವನ ಆಸ್ಥಾನ ವಿದ್ವಾಂಸನಾಗಿದ್ದ ಕಿರ್ಮಾನಿಯೇ ಹೇಳುತ್ತಾನೆ. ಅಂದಮಾತ್ರಕ್ಕೆ, ಶ್ರೀರಂಗಪಟ್ಟಣದ ಯಾವುದೋ ಒಂದು ಹಳ್ಳಿಯಲ್ಲಿ ಜನಿಸಿದ, ಒಬ್ಬ ಅಪ್ಪಟ ಸ್ಥಳೀಯ ಮುಸಲ್ಮಾನನ ಮಗನಾದ ಸುಲ್ತಾನ್ ಟೀಪುವಿಗೆ, ಕನ್ನಡ ಗೊತ್ತೇ ಇರಲಿಲ್ಲವೆಂಬ ತೀರ್ಮಾನಕ್ಕೆ ಬರಬೇಕೆ ? ಅಥವಾ ಆ ಕಾರಣಕ್ಕಾಗಿ ಟೀಪು ಕನ್ನಡದ್ರೋಹಿ ಎಂದು ನಿರ್ಧರಿಸಬೇಕೆ ? ಇನ್ನು ಉಳಿದಂತೆ, ಶೃಂಗೇರಿ ಮಠದೊಡನೆ ಸುಲ್ತಾನ್ ಟೀಪು ಕನ್ನಡದಲ್ಲಿ ನಡೆಸಿರುವ ಪತ್ರ ವ್ಯವಹಾರಗಳನ್ನು ಅನೇಕ ವಿದ್ವಾಂಸರು ತೋರಿಸಿಕೊಟ್ಟಿದ್ದಾರೆ, ಆ ವಿಷಯದ ಪುನರುಕ್ತಿ ಸದ್ಯ ಅಗತ್ಯವಿಲ್ಲ.

ಇನ್ನು ಎರಡನೆಯ ಮುಖ್ಯ ವಿಷಯ ಸುಲ್ತಾನ್ ಟೀಪು ಬಲಾತ್ಕಾರದ ಮತಾಂತರ ಮಾಡಿದನೆಂಬುದು; ಮನುವಾದಿ ಜಾತೀಯ ವ್ಯವಸ್ಥೆ ಇಂದಿಗೂ ಜಾತೀಯ ಅನ್ಯಾಯಗಳು ಮತ್ತು ಅಸ್ಪೃಶ್ಯತೆಯ ನಿತ್ಯ ಅಪಮಾನಗಳೇ ತುಂಬಿರುವ ಘನಘೋರ ವೈದಿಕ ವ್ಯವಸ್ಥೆಯಲ್ಲಿ, ಮತಾಂತರವನ್ನು ಪ್ರಶ್ನಿಸುವ ಅಥವಾ ಆ ವಿಷಯವನ್ನು ವೈಭವೀಕರಿಸುವ ಯಾವುದೇ ನೈತಿಕ ಯೋಗ್ಯತೆಯೂ ಮನುವಾದಿ ಮಡಿವಂತರಿಗೆ ಇರಲು ಸಾಧ್ಯವಿಲ್ಲ. ಆದರೂ ಸುಲ್ತಾನ್ ಟೀಪು ಬಲಾತ್ಕಾರದ ಮತಾಂತರ ಮಾಡಿದನೆಂಬ ವಿಷಯವನ್ನು ಪರೋಕ್ಷವಾಗಿಯೋ ಅಥವಾ ಪ್ರತ್ಯಕ್ಷವಾಗಿಯೋ ಹೇಳಲೇಬೇಕೆಂಬ ಸ್ಥಿತಿಯಾಗಲಿ, ಇಲ್ಲವೆ, ಆ ಕುರಿತ ಟೀಕೆಯ ಪ್ರಮೇಯವೇ ಇಲ್ಲ. ಏಕೆಂದರೆ, ಪ್ರೀ-ಕಲೋನಿಯಲ್ ಕಾಲದ ರಾಜ ಮಹಾರಾಜರು ಮತ್ತು ನವಾಬರ ಕಾಲಗಳಲ್ಲಿ ಎಂತೋ ಅಂತೆಯೇ, ಕಲೋನಿಯಲ್ ಮತ್ತು ಪೋಸ್ಟ್-ಕಲೋನಿಯಲ್‌ನ ಬ್ರಿಟಿಷರ ಕಾಲದಲ್ಲೂ ಮತಾಂತರವೆಂಬುದು ನಿರಂತರವಾಗಿ ನಡೆದೇ ಇದೆ. ಆದರೆ ಹಾಗೆಂದು ಸುಲ್ತಾನ್ ಟೀಪು ಬಲಾತ್ಕಾರದಿಂದ ಮತಾಂತರ ಮಾಡಿದನೆಂಬ ವಿವೇಚನಶೂನ್ಯ ಭೂತಕಾಲದ ಭೂತ ಎಬ್ಬಿಸುವ ಮೂಲಕ, ಸಮಕಾಲೀನ ಇಂಡಿಯಾದ ಅಸ್ಪೃಶ್ಯರೇ ಮೊದಲಾದ ಅವಮಾನಿತ ಜನವರ್ಗದ ಮತಾಂತರದ ವಿರುದ್ಧ ಒಂದು ರೀತಿಯ ಪರೋಕ್ಷ ಎಚ್ಚರಿಕೆ ನೀಡುವ ಯಾವುದೇ ನೈತಿಕ ಯೋಗ್ಯತೆಯಾಗಲಿ, ಮಾನವೀಯ ಅನುಕಂಪವಾಗಲಿ ಡಾ॥ ಎಸ್. ಎಲ್. ಭೈರಪ್ಪ ಮತ್ತು ಡಾ॥ ಚಿದಾನಂದ ಮೂರ್ತಿಯಂತಹ ಮನುವಾದಿಗಳಿಗೆ ಇರಲು ಸಾಧ್ಯವೇ ಇಲ್ಲವೆಂಬುದನ್ನು ನೆನಪಿಡಬೇಕು. ಆದರೂ ಸಹ, ಸುಲ್ತಾನ್ ಟೀಪು ನಡೆಸಿರಬಹುದಾದ ಮತಾಂತರದ ಕಾರಣ ಮತ್ತು ಪರಿಣಾಮಗಳೇನು ಎಂಬುದನ್ನು ಶೋಧಿಸದೆ ಬಿಡುವುದು ಕೂಡ ವಸ್ತುನಿಷ್ಠ ಶೋಧನೆ ಎನಿಸುವಂತಿಲ್ಲ.

ಅಂಬೇಡ್ಕರರು ಹೇಳುವಂತೆ ಗ್ರೇಡೆಡ್ ಅಸಮಾನತೆಯೇ ಘನಘೋರ ಭೂತ ಸತ್ಯವೂ ಕಠೋರ ವರ್ತಮಾನ ಸತ್ಯವೂ ಆಗಿರುವ ಮಡಿವಂತ ಮನುವಾದಿ ಧರ್ಮವಿರುವ ಇಂಡಿಯಾದಲ್ಲಿ, ಮತಾಂತರವೆಂಬುದು ಮನುಷ್ಯನ ಮರ್ಯಾದಾ ಬದುಕಿನ ಏಕಮಾತ್ರ ಅವಕಾಶವೆನಿಸಿದೆ. ಆದರೆ, ಸುಲ್ತಾನ್ ಟೀಪು ನಡೆಸಿರಬಹುದಾದ ಮತಾಂತರ ಇದಕ್ಕಿಂತ

ಸಂಪೂರ್ಣವಾಗಿಯೂ ಭಿನ್ನವಾದುದೆಂಬುದು ಮಾತ್ರ ತುಂಬಾ ಮುಖ್ಯ. ಟೀಪು ಮತಾಂತರವನ್ನು ನಡೆಸಿದ್ದು ಎರಡು ಮುಖ್ಯ ಪ್ರದೇಶಗಳಲ್ಲಿ ಮತ್ತು ಎರಡು ವಿಭಿನ್ನ ಕಾಲಘಟ್ಟಗಳಲ್ಲಿ. ಅದರಲ್ಲಿ ಮೊದಲನೆಯದು, ೧೭೮೪ರಲ್ಲಿ ಸುಲ್ತಾನ್ ಟೀಪುವಿಗೂ ಬ್ರಿಟಿಷರಿಗೂ ನಡೆದ ಮಂಗಳೂರು ಯುದ್ಧ ಮತ್ತು ಯುದ್ಧಾನಂತರದ ಪರಿಣಾಮಗಳ ಕಾಲದಲ್ಲಿ. ಹಾಗೆಯೇ, ಎರಡನೆಯ ಕಾಲಘಟ್ಟವೆಂದರೆ, ೧೭೮೬ರಿಂದ ೧೭೮೭ರವರೆಗೆ ಕೇರಳದ ಮಲಬಾರ್ ಪ್ರದೇಶದಲ್ಲಿ ಕ್ರೈಸ್ತ ಧರ್ಮಕ್ಕೆ ಮತಾಂತರಗೊಂಡಿದ್ದ ಅಲ್ಲಿನ ನಾಯರ್ ಜಾತಿಯವರು ಟೀಪು ವಿರುದ್ಧ ನಡೆಸಿದ ಧಾರ್ಮಿಕ ದಂಗೆ. ಮತಾಂತರಕ್ಕೆ ಸಂಬಂಧಿಸಿದ ಈ ಎರಡೂ ಘಟನೆಗಳು ಮೂಲತಃ ಪರಸ್ಪರ ಪೂರಕವಾದುವು ಎಂಬುದನ್ನು ಈವರೆಗೂ ಯಾವ ಇತಿಹಾಸಕಾರರೂ ಹೇಳಿರುವುದಿಲ್ಲ. ಮಂಗಳೂರು ಯುದ್ಧದಲ್ಲಿ ಬ್ರಿಟಿಷರ ಮೇಲೆ ಅಪ್ರತಿಮ ಜಯಗಳಿಸಿದ ಪರಾಕ್ರಮಿ ಯೋಧ ಸುಲ್ತಾನ್ ಟೀಪು, ಆನಂತರ ನಡೆಸಿದ ಅತ್ಯಂತ ಕ್ಷಿಪ್ರ ಕಾರ್ಯಾಚರಣೆಯಲ್ಲಿ, ಬ್ರಿಟಿಷರಿಗೆ ನೆರವು ನೀಡಿದ್ದ ಮಂಗಳೂರಿನ ಹಲವಾರು ಕ್ರಿಶ್ಚಿಯನ್ನರನ್ನು ಬಂಧಿಸಿ ಶ್ರೀರಂಗಪಟ್ಟಣಕ್ಕೆ ತಂದು, ಅವರನ್ನೆಲ್ಲ ಸೆರೆಯಲ್ಲಿ ಇರಿಸಿದ. ತದನಂತರ ಅವರನ್ನೆಲ್ಲ ದೇಶದ್ರೋಹಿಗಳೆಂದು ತೀರ್ಮಾನಿಸಿದ ಟೀಪು, ಶಿಕ್ಷೆಯ ರೂಪದಲ್ಲಿ ಅವರಿಗೆ ಎರಡು ಆಯ್ಕೆಗಳನ್ನು ನೀಡಿದ: ಒಂದು, ಯುದ್ಧಮರಣ; ಏಕೆಂದರೆ, ಅವರೆಲ್ಲರೂ ಯುದ್ಧ ಕೈದಿಗಳು; ಎರಡನೆಯದು, ಇಸ್ಲಾಂ ಧರ್ಮಕ್ಕೆ ಮತಾಂತರ. ಆದರೆ ಅವರನ್ನೆಲ್ಲಾ ಹಾಗೆ ಸಾಮೂಹಿಕವಾಗಿ ಕೊಲ್ಲುವುದಕ್ಕಿಂತ, ಅವರನ್ನೆಲ್ಲಾ ಸಾಮೂಹಿಕವಾಗಿಯೇ ಇಸ್ಲಾಂ ಧರ್ಮಕ್ಕೆ ಮತಾಂತರಿಸಿ, ಅವರನ್ನು ಪರಿವರ್ತಿಸಿ, ತನ್ನ ನಾಡಿನ ರಾಜಕೀಯ ಸ್ವಾತಂತ್ರ್ಯವನ್ನು ಬ್ರಿಟಿಷರಿಂದ ಸಂರಕ್ಷಿಸುವುದೇ ಅವನ ಪರಮ ಧ್ಯೇಯವಾಗಿತ್ತು. ತದನಂತರ, ಟೀಪುವಿನ ಈ ಮತಾಂತರದ ವಿರುದ್ಧ ಕೇರಳದ ಮಲಬಾರ್ ಪ್ರದೇಶದಲ್ಲಿ ದಂಗೆಯೆದ್ದವರು, ಕ್ರೈಸ್ತರಾಗಿ ಮತಾಂತರಗೊಂಡು ಬ್ರಿಟಿಷರೊಡನೆ ಎಲ್ಲಾ ರೀತಿಯ ರಾಜಕೀಯ ಸಂಬಂಧಗಳನ್ನೂ ಹೊಂದಿದ್ದ ಅಲ್ಲಿನ ನಾಯರ್ ಜಾತಿಯ ಜನ.

ಯಥಾಪ್ರಕಾರ ಮಲಬಾರ್‌ನ ನಾಯರ್ ದಂಗೆಯನ್ನು ಶಸ್ತ್ರಪ್ರಯೋಗದಿಂದಲೇ ದಮನ ಮಾಡಿದ ಟೀಪು, ಹಾಗೆ ಬ್ರಿಟಿಷರ ಪರವಾಗಿದ್ದ ನೂರಾರು ಮಂದಿ ನಾಯರ್‌ಗಳನ್ನು ಸೆರೆಹಿಡಿದು ತಂದು, ಶ್ರೀರಂಗಪಟ್ಟಣದ ಸೆರೆವಾಸದಲ್ಲಿಟ್ಟು, ಆನಂತರ ಅವರನ್ನೆಲ್ಲಾ ಇಸ್ಲಾಂ ಧರ್ಮಕ್ಕೆ ಮತಾಂತರಿಸಿದ. ಒಂದು ವೇಳೆ ಅವರು ಬ್ರಿಟಿಷರ ಪರವಾಗಿದ್ದರೂ ಅವರನ್ನು ಟೀಪು ಹಾಗೆ ಇಸ್ಲಾಂ ಧರ್ಮಕ್ಕೆ ಮತಾಂತರಿಸಿದ್ದು ಸರಿಯಲ್ಲವೆನ್ನುವುದು ಡಾ॥ ಭೈರಪ್ಪ ಮತ್ತು ಡಾ॥ ಚಿದಾನಂದಮೂರ್ತಿಯೇ ಮೊದಲಾದ ಮನುವಾದಿಗಳ ಅಭಿಪ್ರಾಯವಾಗಿದ್ದಲ್ಲಿ, ಅವರಿಗೆ ಇನ್ಯಾವ ಶಿಕ್ಷೆ ವಿಧಿಸಬಹುದಾಗಿತ್ತು? ಈ ಪ್ರಶ್ನೆಗೆ ಅವರು ಉತ್ತರ ಹೇಳಬೇಕಾಗುತ್ತದೆ. ಅವರನ್ನೆಲ್ಲಾ ಸಾಮೂಹಿಕವಾಗಿ ಕೊಲ್ಲಬೇಕಿತ್ತೆ? ಅಥವಾ



ಜಾತ್ರೆ ಅಲ್ಲ... ಮಾತ್ರೆ ವಿತರಣೆ ಮಾಡ್ತಿದ್ದಾರಂತೆ...
ಪೆಟ್ಟು ಮಾಡಿಕೊಂಡವರಿಗೆ ಈ ವ್ಯವಸ್ಥೆ...

ಅವರನ್ನೆಲ್ಲಾ ಹಿಂದೂ ಧರ್ಮಕ್ಕೆ ಮತಾಂತರಿಸಬೇಕಿತ್ತೆ? ಆದರೆ, ಅನ್ಯ ಧರ್ಮೀಯರು ಹಿಂದೂ ಧರ್ಮಕ್ಕೆ ಮತಾಂತರಗೊಳ್ಳುವ ಸ್ವಾತಂತ್ರ್ಯವೇ ಹಿಂದೂ ಧರ್ಮದಲ್ಲಿ ಇಲ್ಲವಲ್ಲ! ಒಂದು ವೇಳೆ ಟೀಪು ಅವರನ್ನು ಹಿಂದೂ ಧರ್ಮಕ್ಕೆ ಏನಾದರೂ ಮತಾಂತರಿಸಿದ್ದಲ್ಲಿ, ಹಿಂದೂ ಧರ್ಮದ ಯಾವ ಜಾತಿಗೆ ಅವರನ್ನು ಮತಾಂತರಿಸಬೇಕಿತ್ತು? ಬ್ರಾಹ್ಮಣ ಜಾತಿಗೆ? ಆದರೆ ಬ್ರಾಹ್ಮಣ ಧರ್ಮ ಕ್ರೈಸ್ತರನ್ನು ಒಪ್ಪುತ್ತದೆಯೆ? ಕ್ಷತ್ರಿಯ ಜಾತಿಗೆ? ಕ್ಷತ್ರಿಯರು ಅವರನ್ನು ಸಹಿಸುತ್ತಾರೆಯೆ? ಅಥವಾ ವೈಶ್ಯ ಜಾತಿಗೆ? ವೈಶ್ಯರು ಅವರನ್ನು ಬರಮಾಡಿಕೊಳ್ಳಬಹುದೆ? ಅಥವಾ ಶೂದ್ರ ಜಾತಿಗೆ ಅವರನ್ನು ಮತಾಂತರಿಸಬಹುದಿತ್ತೆ? ಆದರೆ ಶೂದ್ರರು ಅವರೊಡನೆ ವೈವಾಹಿಕ ಸಂಬಂಧಗಳನ್ನು ಒಪ್ಪುತ್ತಾರೆಯೆ? ಇವೆಲ್ಲಕ್ಕೂ ಮಿಗಿಲಾಗಿ, ಕ್ರೈಸ್ತರನ್ನು ಹಿಂದೂಧರ್ಮಕ್ಕೆ ಮತಾಂತರಿಸುವ ಅಧಿಕಾರ ಶೃಂಗೇರಿ ಮಠದವರಿಗೇ ಇರಲಿಲ್ಲವೆಂದ ಮೇಲೆ, ಇನ್ನು ಆ ರೀತಿಯ ಧಾರ್ಮಿಕ ಅಧಿಕಾರ ಸುಲ್ತಾನ್ ಟೀಪುವಿಗೆ ಇದ್ದಿರಲು ಸಾಧ್ಯವೆ? ಅಥವಾ ಅದೇ ಕ್ರೈಸ್ತರನ್ನು ಅಸ್ಪೃಶ್ಯರ ಜಾತಿಗೆ ಮತಾಂತರಿಸಬಹುದಿತ್ತೆ? ಆದರೆ ಅಸ್ಪೃಶ್ಯರದು ಜಾತಿಯೇ ಅಲ್ಲವಲ್ಲ! ಅವರು ಮನು ಧರ್ಮದ ಜಾತಿಗಳಿಂದ ಹೊರತಾದವರು. ಅಷ್ಟೇ ಅಲ್ಲದೆ, ಈ ರೀತಿಯ ಮತಾಂತರವನ್ನು ಮಡಿವಂತರ ಮನುಧರ್ಮದಲ್ಲಿ ಎಂದೂ ಒಪ್ಪುವುದೇ ಇಲ್ಲವಲ್ಲ! ಅದರಲ್ಲೂ ಅಂಬೇಡ್ಕರರ ಸಂಶೋಧನೆಗಳ ಪ್ರಕಾರ, ಹಿಂದೂಧರ್ಮಕ್ಕೆ ಅನ್ಯ ಧರ್ಮೀಯರ ಮತಾಂತರವನ್ನು ಪ್ರೋತ್ಸಾಹಿಸಿದ ಏಕೈಕ ಪ್ರಯತ್ನ, ಅದೂ ಅದೊಂದು ವಿಫಲ ಪ್ರಯತ್ನವೆಂದರೆ, ದಯಾನಂದ ಸರಸ್ವತಿಯವರ 'ಆರ್ಯ ಸಮಾಜ ಚಳವಳಿ' ಮಾತ್ರ. ಅದು ನಡೆದದ್ದು ಕೂಡ ಇಪ್ಪತ್ತನೇ ಶತಮಾನದ ಆರಂಭ ಕಾಲದಲ್ಲಿ. ಆದರೆ ಆರ್ಯ ಸಮಾಜದ ಮತಾಂತರದ ಕಾರ್ಯಕ್ರಮಗಳಲ್ಲಿ ಕೂಡ ಅಸಂಖ್ಯಾತ ಗೊಂದಲಗಳೇ ತುಂಬಿವೆ. ಆ ಗೊಂದಲಗಳನ್ನೆಲ್ಲಾ ಅಂಬೇಡ್ಕರರು ಅನನ್ಯವಾಗಿ ಪ್ರಶ್ನಿಸಿದ್ದಾರೆ. ಸದ್ಯಕ್ಕೆ ಆ ವಿಷಯ ಬೇರೆ.

ಸುಲ್ತಾನ್ ಟೀಪು ನಡೆಸಿರಬಹುದಾದ ಮತಾಂತರದ ಬಗೆಗೆ ಮೊಹಿಬುಲ್ ಹಸನ್ 'ಹಿಸ್ಟರಿ ಆಫ್ ಟೀಪು ಸುಲ್ತಾನ್' ಎಂಬ ತನ್ನ ಸಂಶೋಧನ ಗ್ರಂಥದಲ್ಲಿ (ಪುಟ ೩೬೬) ಅತ್ಯಂತ ಅರ್ಥಪೂರ್ಣವಾದ ಒಂದು ವ್ಯಾಖ್ಯಾನವನ್ನು ಹೀಗೆ ಮಾಡುತ್ತಾನೆ: ''ಸುಲ್ತಾನ್ ಟೀಪು ದೇಶದ್ರೋಹಿಗಳಿಗೆ ವಿಧಿಸಿದ ಮತಾಂತರದ ಶಿಕ್ಷೆ, ಕೇವಲ ರಾಜಕೀಯವಾದದ್ದೇ ಹೊರತು, ಅದು ಮತೀಯವಾಗಿಯೂ ಇರಲಿಲ್ಲ ಅಥವಾ ಮತಾಂಧತೆಯೂ ಆಗಿರಲಿಲ್ಲ'' ಎಂದು ತೀರ್ಮಾನಿಸುತ್ತಾನೆ. ಮೊಹಿಬುಲ್ ತನ್ನ ಈ ವಾದಕ್ಕೆ ಅದೇ ಗ್ರಂಥದ ೩೬೭ನೇ ಪುಟದಲ್ಲಿ ತುಂಬಾ ಬಲವಾದ ಮತ್ತು ಸಮರ್ಥನೀಯವೂ ಆದ ಒಂದು ಧಾರ್ಮಿಕ ಚರ್ಚೆಯನ್ನೇ ಮಂಡಿಸುತ್ತಾನೆ. ಜೊತೆಗೆ ಶೃಂಗೇರಿ ಮಠದಲ್ಲಿ ಇಂದಿಗೂ ಸಂರಕ್ಷಿಸಿ ಇಡಲಾಗಿರುವ ಸುಲ್ತಾನ್ ಟೀಪುವಿನ ಕನ್ನಡ ಕಾಗದ ಪತ್ರ ಸಮಸ್ತವನ್ನೂ ಅಧ್ಯಯನ ಮಾಡಿರುವ ವೈ. ಉಮಾನಾಥ ಶೆಣೈಯವರು, ೧೯೯೮ರ ಮೇ ತಿಂಗಳ 'ತರಂಗ' ವಾರಪತ್ರಿಕೆಯಲ್ಲಿ ಪ್ರಕಟಿಸಿರುವ ''ಟೀಪು ಸುಲ್ತಾನನು ಹಿಂದೂ ದ್ವೇಷಿಯೇ?'' ಎಂಬ ಲೇಖನದಲ್ಲಿ ಮೊಹಿಬುಲ್ ಹಸನ್ ಮಾಡಿರುವ ವ್ಯಾಖ್ಯಾನವನ್ನು ಸಂಪೂರ್ಣವಾಗಿಯೂ ಸಾಧಾರವಾಗಿಯೂ ಸಮರ್ಥಿಸಿರುವುದನ್ನು ಮರೆಯುವಂತಿಲ್ಲ.

ಸುಲ್ತಾನ್ ಟೀಪುವಿನ ಕಾಲದಲ್ಲಿ ಸಂಭವಿಸಿರಬಹುದಾದ ಮತಾಂತರದ ಇನ್ನೊಂದು ಬಹುಮುಖ್ಯ ಆಯಾಮ, ಆ ಪ್ರದೇಶದ ಜನಪದರಲ್ಲಿ ಇಂದಿಗೂ ಜೀವಂತವಾಗಿದೆ. ಈ ಬಗ್ಗೆ ಯಾವ ವಿದ್ವಾಂಸರೂ ಗಮನ ಹರಿಸಿದಂತಿಲ್ಲ. ಈ ಹಿಂದಿನ ಪುಟದಲ್ಲಿ ಪಟ್ಟಿ ಮಾಡಲಾಗಿರುವ ಸುಲ್ತಾನ್ ಟೀಪುವನ್ನು ಕುರಿತು ಸಂಶೋಧನೆ ನಡೆಸಿರುವ ವಿದ್ವಾಂಸರಲ್ಲಿ, ಎರಡು ರೀತಿಯ ಅತಿರೇಕಗಳು ಕಂಡುಬರುತ್ತವೆ. ಅವರಲ್ಲಿ, ಸುಲ್ತಾನ್ ಟೀಪುವಿನ ಚರಿತ್ರೆಯನ್ನು ಬ್ರಿಟಿಷರು ಒಂದು ರೀತಿಯಲ್ಲಿ ವಿಕಾರಗೊಳಿಸಿದರೆ, ಮನುವಾದಿ ಲೇಖಕರು ಇನ್ನೊಂದು ರೀತಿಯಲ್ಲಿ ವಿಕಾರಗೊಳಿಸಿದ್ದಾರೆ. ಅಂದರೆ, ಇಪ್ಪತ್ತು-ಇಪ್ಪತ್ತೊಂದನೇ ಶತಮಾನದ ಆರ್.ಎಸ್.ಎಸ್.ನ ಮನುವಾದಿ ಅರುಣ್ ಶೌರಿ, ಅಂಬೇಡ್ಕರ್ ಚರಿತ್ರೆಯನ್ನೇ ಇಷ್ಟರಮಟ್ಟಿಗೆ ವಿಕಾರಗೊಳಿಸುವುದಾದರೆ, ಇನ್ನು ಹದಿನೆಂಟನೇ ಶತಮಾನದ ಸುಲ್ತಾನ್ ಟೀಪುವಿನ ಚರಿತ್ರೆಯನ್ನು, ಆ ಕಾಲದ ಅದೇ ಮನುವಾದಿಗಳು ವಿಕಾರಗೊಳಿಸದೆ ಬಿಟ್ಟಿರಲು ಸಾಧ್ಯವೆ? ಅಷ್ಟೇ ಅಲ್ಲದೆ, ಮೂಲತಃ ಹೀರೊ ಪ್ರಧಾನವಾದ ಜನಪದ ಸಾಹಿತ್ಯದಲ್ಲಿ ಇಂದಿಗೂ ಹೀರೊ ಆಗಿಯೇ ನಡೆದಿರುವ ಟೀಪುವನ್ನು ಕುರಿತಂತೆ ಅದೆಷ್ಟೋ ಜನಪದ ಎಪಿಸೋಡ್‌ಗಳೇ ಇದ್ದರೂ, ಅವುಗಳ ಬಗೆಗೆ ಟೀಪುವನ್ನು ಕುರಿತ ಚರಿತ್ರೆಕಾರರು ಒಂದೇ ಒಂದು ಅಡಿಟಿಪ್ಪಣಿಯನ್ನೂ ತಮ್ಮ ಗ್ರಂಥಗಳಲ್ಲಿ ಸೂಚಿಸುವುದಿಲ್ಲ.

ಸುಲ್ತಾನ್ ಟೀಪು ಕಾಲದ ಮತಾಂತರದ ಆ ಇನ್ನೊಂದು ಆಯಾಮದ ಹೀರೊ ಎಂದರೆ, ಬೇರಾರೂ ಆಗಿರದೆ, ಸುಲ್ತಾನ್ ಟೀಪುವಿನ ಖಾಸಾ ಭಾವಮೈದುನನೇ ಆಗಿದ್ದ ಬುರ್‌ಹಾನುದ್ದೀನ್ ಎಂಬ

ಪ್ರಚಂಡ ಬುದ್ಧಿವಂತಿಕೆಯ ಸೇನಾನಿ. ಊರೂರು ಅಡ್ಡಾಡಿ ಪ್ರಜೆಗಳ ಯೋಗಕ್ಷೇಮವನ್ನು ವಿಚಾರಿಸುವುದರ ಜೊತೆ ಜೊತೆಗೆ, ಅವನು ತೋರಿದ ಸೇನಾ ನೈಪುಣ್ಯವೆಂದರೆ, ಕುದುರೆಯನ್ನೇರಿ, ಶ್ರೀರಂಗಪಟ್ಟಣದ ಸುತ್ತಲಿರುವ ಗ್ರಾಮಗಳು, ಮೈಸೂರು ಮತ್ತು ಚಾಮರಾಜನಗರದ ಸುತ್ತಮುತ್ತಲ ಹಳ್ಳಿ ಹಳ್ಳಿಯನ್ನೂ ಸುತ್ತಾಡಿದ ಈ ಸೇನಾನಿ, ಗ್ರಾಮಸ್ಥರಲ್ಲಿ, ಅದೂ ನಿರ್ದಿಷ್ಟವಾಗಿ ಅಸ್ಪೃಶ್ಯರಲ್ಲಿ ಸೈನ್ಯಕ್ಕೆ ಯೋಗ್ಯರಾದವರನ್ನೆಲ್ಲಾ ಆಯ್ಕೆ ಮಾಡುತ್ತ ನಡೆದ. ಅವರಿಗೆ ನಿರಂತರ ತರಬೇತಿ ನೀಡಿದ. ತದನಂತರ ಅಸ್ಪೃಶ್ಯರು ಹಾಗೆ ಸುಲ್ತಾನ್ ಟೀಪು ಸೈನ್ಯದಲ್ಲಿ ಸಿಪಾಯಿಗಳಾದ ಬಳಿಕ ಕಾಲ ಕ್ರಮದಲ್ಲಿ ಅವರು ಮುಸಲ್ಮಾನರಾಗಿ ಮತಾಂತರವೂ ಆಗಿರಬಹುದು. ಅದು ಸುಲ್ತಾನ್‌ನ ಶಕ್ತಿಶಾಲಿ ಸೇನಾಬಲದ ಹಿಂದಿನ ನಿಗೂಢ ರಹಸ್ಯವೂ ಆಗಿರಬಹುದು. ಆದರೆ, ಆ ರೀತಿಯ ಮತಾಂತರವನ್ನು ಪ್ರಶ್ನಿಸುವ ಅಥವಾ ಅದನ್ನು ಬಲಾತ್ಕಾರದ ಮತಾಂತರವೆಂದು ಅಪಪ್ರಚಾರ ಮಾಡುವ, ಯಾವುದೇ ನೈತಿಕ ಯೋಗ್ಯತೆಯೂ, ಆರ್.ಎಸ್.ಎಸ್.ನ ಮನುವಾದಿ ಮಡಿವಂತರ ಮಕ್ಕಳಿಗಿರಲು ಸಾಧ್ಯವೇ ಇಲ್ಲವೆಂಬುದು ತುಂಬಾ ಸರಳವೇ ಆದ ತರ್ಕ. ಅದೂ ಅಲ್ಲದೆ, ಇದನ್ನು ಬಲಾತ್ಕಾರದ ಮತಾಂತರವೆನ್ನಲು ತಾನೆ ಹೇಗೆ ಸಾಧ್ಯ ? ಒಂದು ವೇಳೆ, ಇದು ಬಲಾತ್ಕಾರದ ಮತಾಂತರವೇ ಆಗಿದ್ದ ಪಕ್ಷದಲ್ಲಿ, ಅದೇ ಆರ್.ಎಸ್.ಎಸ್.ನ ಮೂಲಭೂತವಾದಿ ಮನುಧರ್ಮದೊಳಗಿನ ಜಾತೀಯ ಅನ್ಯಾಯಗಳಾಗಲಿ ಅಥವಾ ಅಸ್ಪೃಶ್ಯತೆಯ ಅಮಾನುಷ ಅವಮಾನಗಳಾಗಲಿ, ಮತಾಂತರ ಕ್ಕಿಂತಲೂ ಸಾವಿರಾರು ಪಟ್ಟು ಘೋರವಾದ ಬಲಾತ್ಕಾರವೇ ಅಲ್ಲದೆ ಮತ್ತೇನು ? ಮನುಧರ್ಮದ ಅಸ್ಪೃಶ್ಯತೆಯ ಅವಮಾನಕ್ಕೆ ಹೋಲಿಸಿದರೆ, ಮತಾಂತರ ಸಾವಿರ ಸಾವಿರ ಪಾಲು ಶ್ರೇಷ್ಠವಾದ ದೇಶಪ್ರೇಮವೇ ಆಗಿದೆ.




## ನವಕರ್ನಾಟಕಕ್ಕೆ ಶ್ರೇಷ್ಠ ಪ್ರಕಾಶನ ಪ್ರಶಸ್ತಿ

ಕನ್ನಡ ಪುಸ್ತಕ ಪ್ರಾಧಿಕಾರವು ಕನ್ನಡ ನುಡಿಗೆ ಸೇವೆ ಸಲ್ಲಿಸಿರುವ/ಸಲ್ಲಿಸುತ್ತಿರುವ ಪ್ರಕಾಶಕ/ಪ್ರಕಾಶನ ಸಂಸ್ಥೆಗಳಿಗೆ ಮಾನ್ಯತೆ ನೀಡುವ ಉದ್ದೇಶದಿಂದ ಪ್ರತಿವರ್ಷ ಕರ್ನಾಟಕದ ಒಂದೊಂದು ಪ್ರಕಾಶನ ಸಂಸ್ಥೆಗೆ ಅತ್ಯುತ್ತಮ ಪ್ರಕಾಶನ ಪ್ರಶಸ್ತಿ ನೀಡುತ್ತಾ ಬಂದಿದೆ. ೨೦೦೬ನೇ ಸಾಲಿನ ಶ್ರೇಷ್ಠ ಪ್ರಕಾಶನ ಪ್ರಶಸ್ತಿ ನವಕರ್ನಾಟಕ ಪ್ರಕಾಶನ ಸಂಸ್ಥೆಗೆ ಸಂದಿದೆ. ಪ್ರಶಸ್ತಿಯ ಮೊತ್ತವನ್ನು ರೂ. ೨೫,೦೦೦ದಿಂದ ಈ ವರ್ಷ ರೂ. ೫೦,೦೦೦ಕ್ಕೆ ಹೆಚ್ಚಿಸಲಾಗಿದ್ದು, ಜೊತೆಗೆ ಫಲಪುಷ್ಪ ಹಾಗೂ ಪ್ರಶಸ್ತಿ ಪತ್ರವನ್ನು ಸಹ ನೀಡಲಾಗುತ್ತದೆ.

ಈ ವರ್ಷದ ಪ್ರಶಸ್ತಿಯ ಮತ್ತೊಂದು ವೈಶಿಷ್ಟ್ಯವೆಂದರೆ, ಈ ಪ್ರಶಸ್ತಿಗೆಂದು ಪ್ರತ್ಯೇಕ ಆಯ್ಕೆ ಸಮಿತಿಯನ್ನು ರಚಿಸಿ, ಸಮಿತಿಯ ಮುಂದಿದ್ದ ೨೩ ಪ್ರಕಾಶನ ಸಂಸ್ಥೆಗಳನ್ನು ಪರಿಶೀಲಿಸಿ ಅಂತಿಮ ಆಯ್ಕೆ ನಡೆಸಿರುವುದು.

ನವಕರ್ನಾಟಕ ಪ್ರಕಾಶನ ಸಂಸ್ಥೆ ಕಳೆದ ನಲವತ್ತೇಳು ವರ್ಷ ಗಳಿಂದ ಪುಸ್ತಕ ಪ್ರಕಾಶನ, ಪುಸ್ತಕ ಪ್ರದರ್ಶನ ಮತ್ತು ಮಾರಾಟ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ತೊಡಗಿಕೊಂಡಿದೆ. ವಿವಿಧ ವಿಷಯ ಗಳಿಗೆ ಸಂಬಂಧಿಸಿದಂತೆ ೨೩೦೦ಕ್ಕಿಂತಲೂ ಹೆಚ್ಚು ಪ್ರಕಟಣೆಗಳನ್ನು ಹೊರತಂದ ಈ ಸಂಸ್ಥೆಯ ಅನೇಕ ಕೃತಿಗಳಿಗೆ ಹಲವಾರು ಪ್ರತಿಷ್ಠಿತ ಪ್ರಶಸ್ತಿಗಳು ಲಭಿಸಿವೆ. ಬೆಂಗಳೂರು, ಮೈಸೂರು, ಮಂಗಳೂರು ಮತ್ತು ಗುಲ್ಬರ್ಗಾ ನಗರಗಳಲ್ಲಿ ಪುಸ್ತಕ ಮಳಿಗೆಗಳನ್ನು ಹೊಂದಿರುವು ದಲ್ಲದೆ ವರ್ಷವಿಡೀ ಕರ್ನಾಟಕದ ಬೇರೆ ಬೇರೆ ಊರುಗಳಲ್ಲಿ ಪುಸ್ತಕ ಪ್ರದರ್ಶನ ಏರ್ಪಡಿಸುತ್ತ ಓದುಗರಿರುವಲ್ಲಿಗೆ ಪುಸ್ತಕಗಳನ್ನು ತಲುಪಿಸುವ ಮೂಲಕ ಕನ್ನಡ ನುಡಿ ಸೇವೆ ಮಾಡುತ್ತಿರುವ ಏಕೈಕ ಸಂಸ್ಥೆಯಾಗಿದೆ.

ನವಕರ್ನಾಟಕದ ಚಟುವಟಿಕೆಗಳಲ್ಲಿ ತೊಡಗಿಕೊಂಡಿರುವ ಹಿತೈಷಿಗಳು, ಲೇಖಕರು, ಸಿಬ್ಬಂದಿ ವರ್ಗ – ಹೀಗೆ ಎಲ್ಲರಿಗೂ ಈ ಪ್ರಶಸ್ತಿಯ ಸಂತೋಷದ ಪಾಲು ಹಾಗೆಯೇ ಅಭಿನಂದನೆಗಳು ಸಲ್ಲುತ್ತವೆ.

ಸುಲ್ತಾನ್ ಟೀಪು ಮುಸಲ್ಮಾನನೆಂಬ ಒಂದೇ ಒಂದು ಕಾರಣಕ್ಕಾಗಿ ಅವನ ದೇಶ ಪ್ರೇಮವನ್ನೂ, ಭಾಷಾ ಪ್ರೇಮವನ್ನೂ ಮತ್ತು ಅವನ ಧಾರ್ಮಿಕ ವಿಚಾರಗಳನ್ನೆಲ್ಲಾ ದೇಶ ವಿರೋಧಿ ಮತ್ತು ಜನವಿರೋಧಿ ಎಂಬಂತೆ ಬಣ್ಣಿಸುವುದಾದರೆ, ದೇಶದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಬ್ರಾಹ್ಮಣ ಜಾತಿಯ ನಾಯಕರು ಎಸಗಿರುವ ದೇಶದ್ರೋಹವನ್ನು ಹೇಗೆ ಬಣ್ಣಿಸಬೇಕು ? ಬ್ರಿಟಿಷರ ವಿರುದ್ಧ ಸ್ವಾತಂತ್ರ್ಯ ಚಳವಳಿಗೆಂದು ಹೋಗಿ, ಬಂಧಿತರಾಗಿ, ಕೊನೆಗೆ ಬ್ರಿಟಿಷರಿಗೆ ಅಪಾಲಜಿ ಬರೆದುಕೊಟ್ಟು ಜೈಲಿನಿಂದ ಹೊರಬಂದ ಬ್ರಾಹ್ಮಣ ಜಾತಿಯವರೇ ಆದ ವಿ. ಡಿ. ಸಾವರ್‌ಕರ್‌ರವರನ್ನು ಅವರ ಜಾತಿಯವರೆಲ್ಲರೂ ಸೇರಿ ''ಸ್ವಾತಂತ್ರ್ಯವೀರ ಸಾವರ್‌ಕರ್'' ಎಂತಲೇ ಬಣ್ಣಿಸಿದರಲ್ಲ, ಅದು ಹೇಗೆ ? ಸುಲ್ತಾನ್ ಟೀಪು ಬ್ರಿಟಿಷರಿಗೆ ಅಪಾಲಜಿ ಅಥವಾ ಪ್ರಾಣದಾನಕ್ಕಾಗಿ ಬ್ರಿಟಿಷರಿಗೆ ಅರ್ಜಿ ಬರೆದುಕೊಂಡಿದ್ದನೆ ? ಅದೇ ಬ್ರಿಟಿಷರ ವಿರುದ್ಧ ಸ್ವಾತಂತ್ರ್ಯ ಚಳವಳಿಗೆಂದು ಹೋಗಿ, ಬಂಧಿತರಾಗಿ, ಕೊನೆಗೆ ಬ್ರಿಟಿಷರಿಗೆ ಅಪಾಲಜಿ ಬರೆದುಕೊಟ್ಟು ಹೊರಬಂದು, ಆಮೇಲೆ ದೇಶದ ಪ್ರಧಾನಿಯೇ ಆದ ಆರ್.ಎಸ್.ಎಸ್.ನ ಬ್ರಾಹ್ಮಣ ಮನುವಾದಿ ಅಟಲ ಬಿಹಾರಿ ವಾಜಪೇಯಿಯವರನ್ನು ದೇಶದ್ರೋಹಿಯೆನ್ನಬಹುದೆ ? ಅಥವಾ ಬ್ರಿಟಿಷರೊಡನೆ ಹೋರಾಡಿ ರಣರಂಗದಲ್ಲೇ ವೀರಮರಣವನ್ನಪ್ಪಿದ ಸುಲ್ತಾನ್ ಟೀಪು ದೇಶದ್ರೋಹಿಯೆ ? ಹಾಗಾದರೆ ಇವರಲ್ಲಿ ದೇಶಪ್ರೇಮಿ ಯಾರು ? ಮತ್ತು ದೇಶದ್ರೋಹಿ ಯಾರು ? ಅಥವಾ ಸ್ವಾತಂತ್ರ್ಯ ಸಂಗ್ರಾಮದ ಮುಂಚೂಣಿ ನಾಯಕರಾದ ಗಾಂಧೀಜಿಯವರಾಗಲಿ, ಅಂಬೇಡ್ಕರರಾಗಲಿ ಅದೇ ಬ್ರಿಟಿಷರಿಗೆ ಅಪಾಲಜಿ ಬರೆದುಕೊಟ್ಟಿದ್ದರೆ ? ಅಂದರೆ, ಸುಲ್ತಾನ್ ಟೀಪುವಿನ ಚರಿತ್ರೆಯನ್ನು ಕುರಿತ ಪೂರ್ವಗ್ರಹರಹಿತ ಅಧ್ಯಯನವಾಗಲಿ, ವಸ್ತುನಿಷ್ಠ ವಿಮರ್ಶೆಯಾಗಲಿ ಮನುವಾದಿಗಳಿಗೆ ಸಾಧ್ಯವೇ ಇಲ್ಲ.

೧೮೫೭ರ ಮೇ ೧೦ರಂದು ಬ್ರಿಟಿಷ್ ವಸಾಹತುಶಾಹಿ ಸಾಮ್ರಾಜ್ಯದ ವಿರುದ್ಧ ದಂಗೆಯೆದ್ದವರು 'ಮಹರ್ ರೆಜಿಮೆಂಟ್'ನ ಪರಾಕ್ರಮಿ ಯೋಧರು. ಆದರೆ, ಅದೇ ಮಹರ್ ರೆಜಿಮೆಂಟ್‌ನ ಸಾವಿರಾರು ಸೈನಿಕರನ್ನು ಕೊಚ್ಚಿ ಕೊಚ್ಚಿ ಕೊಂದುಹಾಕಿದವರು, ಆ ಕಾಲದ ಮನುವಾದಿ ಜಮೀನ್ದಾರರು ಮತ್ತು ವೈದಿಕ ರಾಜ ಮಹಾರಾಜರ ಸೈನಿಕರು. ಈ ಮಹರ್ ಚಂಡಾಳರು ಇನ್ನೆಂದೂ ತಲೆ ಎತ್ತದಂತೆ ದಮನ ಮಾಡಬೇಕೆಂದು, ಆ ಕಾಲದ ಬಂಗಾಳದ 'ಬ್ರಿಟಿಷ್ ಇಂಡಿಯ ಅಸೋಸಿಯೇಷನ್' ಎಂಬ ಬ್ರಾಹ್ಮಣರ ವೇದಿಕೆಯ ಮುಖಾಂತರ, ಸಾವಿರಾರು ಜನರ ಸಹಿ ಸಂಗ್ರಹಿಸಿ, ಬ್ರಿಟಿಷ್ ಮಹಾರಾಣಿಗೆ ಮನವಿ ಸಲ್ಲಿಸಿದವರು ಆ ಕಾಲದ ಬಂಗಾಳದ ಅದೇ ಮಡಿವಂತರ ಮಕ್ಕಳು. ಗ್ವಾಲಿಯರ್ ಸಾಮ್ರಾಜ್ಯದ ದೊರೆ ಜಯಾಜಿರಾವ್ ಸಿಂಧಿಯಾ ಮತ್ತು ಅದೇ ಸಾಮ್ರಾಜ್ಯದ ಪ್ರಧಾನ ಮಂತ್ರಿಯಾಗಿದ್ದ ದಿನಕರ್‌ರಾವ್ ರಾಜ್‌ವಾಡೆ, ಅದೆಷ್ಟೋ ಮಂದಿ ಸ್ವಾತಂತ್ರ್ಯವೀರರನ್ನು ಬ್ರಿಟಿಷರ ಬಂದೂಕಿನ ಗುಂಡಿಗೆ ಸಾಮೂಹಿಕವಾಗಿ ಆಹುತಿ ನೀಡಲು ಮಹಾನ್ ಪಿತೂರಿಯನ್ನೇ ಮಾಡಲಿಲ್ಲವೆ ? ಇನ್ನೂ ಹತ್ತಿರದ ನಿದರ್ಶನವೆಂದರೆ, ಬ್ರಿಟಿಷರ ವಿರುದ್ಧ ಹೋರಾಡಲು ಸೇನಾ ನೆರವು ನೀಡುವುದಾಗಿ ಸುಲ್ತಾನ್ ಟೀಪುವಿಗೆ ವಚನ ನೀಡಿದ್ದ ಪೂನಾದ ಪೇಶ್ವಾ ಬ್ರಾಹ್ಮಣ ದೊರೆ, ಕೊನೆಗೆ ಟೀಪುವಿಗೆ ವಿರುದ್ಧವಾಗಿ ಬ್ರಿಟಿಷರೊಡನೆ ಷಾಮೀಲಾಗಲಿಲ್ಲವೆ ? ತದನಂತರದ ಅದೇ ಪೂನಾದ ಬ್ರಾಹ್ಮಣ ದೊರೆ, ೧೮೧೮ರ ಡಿಸೆಂಬರ್ ೩೧ರಂದು ಘಟಿಸಿದ 'ಗೋರೇಗಾಂವ್ ಯುದ್ಧ'ದಲ್ಲಿ ಪೇಶ್ವೆಯ ಸಾವಿರಾರು ಸೈನಿಕರ ನರಮೇಧವೆ ನಡೆದ ನಂತರ, ಅದೇ ಬ್ರಿಟಿಷರಿಗೆ ಸಾಮ್ರಾಜ್ಯವನ್ನು ಶರಣಾಗತ ಮಾಡಿ, ಕೊನೆಗೂ ಅದೇ ಪೇಶ್ವಾ ಬ್ರಾಹ್ಮಣ ದೊರೆ ಬ್ರಿಟಿಷರಿಂದ ಪಿಂಚಣಿಗೆ ಕೈಯೊಡ್ಡಿದ ಈ ದೊರೆ ಪರಮ ದೇಶದ್ರೋಹಿಯಲ್ಲವೆ ? ಆದರೆ, ಅದೇ ಬ್ರಿಟಿಷರಿಗೆ ಯಾವುದೇ ರೀತಿಯಲ್ಲೂ ಶರಣಾಗತನಾಗದೆ, ರಣರಂಗದಲ್ಲಿ ಹೋರಾಡಿ, ತಾನು ಮಾತ್ರವಲ್ಲದೆ, ತನ್ನ ಸಂತಾನಗಳನ್ನು ಕೂಡ ನಾಡಿನ ಸ್ವಾತಂತ್ರ್ಯಕ್ಕಾಗಿ ಬಲಿದಾನ ನೀಡಿದ ಸುಲ್ತಾನ್ ಟೀಪು ಅಪ್ರತಿಮ ದೇಶಪ್ರೇಮಿಯಲ್ಲದೆ ಮತ್ತೇನು ?


**ಪ್ರೊ॥ ಮ. ನ. ಜವರಯ್ಯ**

ಸಂಖ್ಯೆ : ಎಂ-೧೩, ೨ನೇ ಮೇನ್, ೨ನೇ ಅಡ್ಡರಸ್ತೆ, ೨ನೇ ಹಂತ, 'ಇ' ಅಂಡ್ 'ಎಫ್' ಬ್ಲಾಕ್, ದಟ್ಟಗಲ್ಲಿ, ರಾಮಕೃಷ್ಣನಗರ, ಮೈಸೂರು - ೫೭೦ ೦೨೨



# ತುಲಾ ಸಂಕ್ರಮಣವೋ ? ಚಿತ್ರಾ ಸಂಕ್ರಮಣವೋ ?

**ತು**ಲಾ ಸಂಕ್ರಮಣದ ವೈಜ್ಞಾನಿಕ ಮಹತ್ವದ ಬಗ್ಗೆ ವಾಚಕರೊಬ್ಬರು ವಿವರ ಕೇಳಿದ್ದರು. ಈ ವರ್ಷ ೧೮ರಂದು ತುಲಾ ಸಂಕ್ರಮಣ ಎಂದು ಕ್ಯಾಲೆಂಡರ್‌ಗಳಲ್ಲಿ ನಮೂದಾಗಿದೆ. ಆ ದಿನ ಸೂರ್ಯ ಚಿತ್ರಾ ನಕ್ಷತ್ರದಿಂದ ಕೇವಲ ೨ ಡಿಗ್ರಿ ಅಂತರದಲ್ಲಿ ಕಾಣುತ್ತದೆ. (ಚಿತ್ರಾ ಎಂಬುದು ಕನ್ಯಾರಾಶಿಗೆ ಸೇರಿದೆ.) ಇಲ್ಲಿ ಸಾಯನ ಮತ್ತು ನಿರಯನ ಎಂಬ ಪಂಚಾಂಗದ ಗೊಂದಲ ತಲೆ ಹಾಕಿದೆ. ಆದ್ದರಿಂದ ತುಲಾ ಸಂಕ್ರಮಣ ಎಂದರೆ ಸೂರ್ಯ ಚಿತ್ರಾ ನಕ್ಷತ್ರವನ್ನು ಹಾದುಹೋಗುವ ಅವಧಿ ಎಂದು ಲೆಕ್ಕ ಹಾಕುತ್ತಿರಬಹುದು. ಏಕೆಂದರೆ ಪ್ರತಿವರ್ಷವೂ ಇದೇ ತಾರೀಕಿಗೆ ಸೂರ್ಯ ಚಿತ್ರಾವನ್ನು ಸಮೀಪಿಸುತ್ತದೆ. ಇದನ್ನು ಪರೀಕ್ಷಿಸಲು ಒಂದು ಉಪಾಯವಿದೆ. ಸೋಹೋ ಎಂಬ ಬಾಹ್ಯಾಕಾಶ ದೂರದರ್ಶಕವೊಂದು ಸೂರ್ಯನನ್ನು ವೀಕ್ಷಿಸುತ್ತದೆ. ಸತತವಾಗಿ ಸೂರ್ಯನ ಚಿತ್ರಗಳನ್ನು ರವಾನಿಸುತ್ತದೆ. ಇದು ಇಂಟರ್‌ನೆಟ್‌ನಲ್ಲಿ ಲಭ್ಯವಿದೆ. (http:/soho.nascom.nasa.gov/)

೧೮ರಂದು ಸೋಹೋ ಕಳಿಸುವ ಸೂರ್ಯನ ಚಿತ್ರವನ್ನು ನೋಡಿ; ಪಕ್ಕದಲ್ಲಿರುವ ಚಿಕ್ಕೆಯೇ ಚಿತ್ರಾ. ೨೨-೨೩ ರಂದು ಸೋಹೋದ ಸೂರ್ಯನ ಬಿಂಬ ನೋಡಿದಿರಾದರೆ ಬುಧ ಗ್ರಹವನ್ನು ಕಾಣಬಹುದು. ಸಂಜೆಯ ಆಕಾಶದಿಂದ ಬೆಳಗಿನ ಆಕಾಶಕ್ಕೆ ಬುಧ ಸರಿಯುವುದನ್ನು ಹೀಗೆ ಗುರುತಿಸಬಹುದು.

ಸಂಜೆಯ ಆಕಾಶದಲ್ಲಿ ನಮ್ಮ ಗೆಲಾಕ್ಸಿ ಆಕಾಶ ಗಂಗೆಯ ಸುಂದರ ನೋಟವನ್ನು ಪತ್ತೆಮಾಡಲು ಗುರುಗ್ರಹದ ನೆರವು ಪಡೆಯಬಹುದು. ಅದರ ಹೊರತಾಗಿ ಸಂಜೆಯ ಆಕಾಶದಲ್ಲಿ ಯಾವ ಪ್ರಕಾಶಮಾನ ಚುಕ್ಕೆಯೂ ಇಲ್ಲ, ವೃಶ್ಚಿಕರಾಶಿಯಲ್ಲಿ ಕಾಣುವದು. ೧೫ರಂದು ಚಂದ್ರ ಅದರ ಪಕ್ಕದಲ್ಲಿಯೇ ಕಾಣುವುದನ್ನು ನಿಮ್ಮ ಅನುಕೂಲಕ್ಕೆ ಉಪಯೋಗಿಸಿಕೊಳ್ಳಬಹುದು. ಪಕ್ಕದ್ದೇ ಧನುರಾಶಿ. ಉತ್ತರದಲ್ಲಿ ರಾಜಹಂಸ (ಸಿಗ್ನಸ್), ಲೈರಾ (ವೀಣಾ) ಮತ್ತು ಅಕ್ವಿಲಾ (ಗರುಡ) ಇವು ಕಾಣುತ್ತವೆ. ಈ ಪುಂಜಗಳ ಪ್ರಕಾಶಮಾನ ನಕ್ಷತ್ರಗಳಾದ ಅಭಿಜಿತ್, ಹಂಸಾಕ್ಷಿ ಮತ್ತು ಶ್ರವಣ ಇವು ಮೂರೂ ಸಮಬಾಹು ತ್ರಿಕೋಣ ರಚಿಸಿದಂತೆ ಕಾಣುತ್ತವೆ. ಪೂರ್ವದಲ್ಲಿ ಮೀನ, ಮಕರ ಮತ್ತು ಕುಂಭ ಕಾಣುವುವು. ಮೀನವನ್ನು ಗುರುತಿಸಲು ಪಕ್ಕದ ನಕುಲ (ಪೆಗಸಸ್) ಪುಂಜದ ಸಹಾಯ ಪಡೆಯಬಹುದು. ಸಪ್ತರ್ಷಿಗಳು ವಾಯವ್ಯದ ದಿಗಂತದ ಅಂಚಿನಲ್ಲಿದ್ದರೆ, ಕುಂತಿ ಈಶಾನ್ಯದ ಅಂಚಿನಲ್ಲಿ ಕಾಣುತ್ತದೆ.




ಸಂಜೆಯಲ್ಲಿ ಕಾಣಬಹುದಾದ ಮತ್ತೊಂದು ಗ್ರಹ ಬುಧ. ತಿಂಗಳ ಆರಂಭದಲ್ಲಿ ಗರಿಷ್ಠ ಕೋನೋನ್ನತಿಯ ಕಾರಣ ಸಂಜೆ ಪಶ್ಚಿಮದಲ್ಲಿ ಸುಲಭವಾಗಿ ಗುರುತಿಸಬಹುದು. ಆದರೆ ತಿಂಗಳ ಮಧ್ಯದಲ್ಲೇ ಅದು ದಿಗಂತದ ಅಂಚನ್ನು ಸಮೀಪಿಸಿ ಮಾಯವಾಗುವುದು. ಗುರು ಗ್ರಹ ಸುಮಾರು ಒಂಬತ್ತು ಗಂಟೆಗೆ ಪಶ್ಚಿಮದಲ್ಲಿ ಕಂತಿದ ಮೇಲೆ ಯಾವುದೇ ಗ್ರಹ ಕಾಣದೇ ಆಕಾಶ ಬರಿದಾದ ಹಾಗೆ ಕಾಣುತ್ತದೆ. ನಡುರಾತ್ರಿಗೆ ಸ್ವಲ್ಪ ಮುನ್ನ ಮಂಗಳ ಉದಯಿಸುತ್ತದೆ. ಬೆಳಗಿನ ಜಾವ ಶುಕ್ರ, ಶನಿ ಉದಯಿಸುತ್ತವೆ. ೭ರಂದು ಶುಕ್ರ ಮತ್ತು ಶನಿಗಳೊಡನೆ ಚಂದ್ರನೂ ಸೇರುತ್ತಾನೆ. ಆಮೇಲೆ ಕ್ರಮೇಣ ದೂರ ಸರಿಯುವ ಶುಕ್ರ ಮತ್ತು ಶನಿ ತಿಂಗಳ ಕೊನೆಗೆ ಸಿಂಹದ ಎರಡು ಹಿಂಗಾಲುಗಳ ಮೇಲೆ ಕಾಣುತ್ತವೆ. ದಿನೇ ದಿನೇ ಪ್ರಕಾಶಮಾನವಾಗುತ್ತಿರುವ ಮಂಗಳ ಗ್ರಹ ಮಿಥುನರಾಶಿಯಲ್ಲಿ ಚಲಿಸುತ್ತದೆ. ಇದರ ಚಲನೆಯನ್ನು ಗುರುತಿಸುವುದು ಬರುವ ತಿಂಗಳುಗಳಲ್ಲಿ ಉಪಯೋಗಕ್ಕೆ ಬರುವುದು.

ಈ ತಿಂಗಳಲ್ಲಿ ಹ್ಯಾಲೀ ಧೂಮಕೇತುವಿನ ತುಣುಕುಗಳು ಉಲ್ಕೆಗಳಾಗಿ ಸುರಿಯುವುವು. ೨೧-೨೨ರ ಬೆಳಗಿನ ಜಾವ ಉಲ್ಕಾವೃಷ್ಟಿಯ ಚಟುವಟಿಕೆ ಗರಿಷ್ಠವಾಗಲಿದೆ. ಉಲ್ಕೆಗಳೆಲ್ಲಾ ಒರೈಯನ್ (ಮಹಾವ್ಯಾಧ ಪುಂಜ ದಿಂದ ಹೊರಟಂತೆ ಕಾಣುವುದರಿಂದ ಒರಿಯನಿಡ್ಸ್ ಎಂಬ ಹೆಸರಿದೆ.

## ಖಗೋಳ ದಿನಚರಿ

ಅಕ್ಟೋಬರ್ ೩ ಚಾಂದ್ರಮಾಸದ ಕೊನೆಯ ಪಾದ (ಚಂದ್ರೋದಯ ನಡುರಾತ್ರಿಗೆ)
ಚಂದ್ರ-ಮಂಗಳ ಸಮಾಗಮ* (೫ ಡಿಗ್ರಿ)
೭ ಶುಕ್ರ-ಚಂದ್ರ-ಶನಿ ಸಮಾಗಮ* (ಶನಿ ಆಚ್ಛಾದನೆ ಕಾಣುವುದಿಲ್ಲ)
೯ ಶುಕ್ರ - ಮಘ ಸಮಾಗಮ*
೧೧ ಅಮಾವಾಸ್ಯೆ (೧೦:೩೧ಕ್ಕೆ)
೧೩ ಬುಧ - ಚಂದ್ರ ಸಮಾಗಮ* (೨ ಡಿಗ್ರಿ)
ಚಂದ್ರ - ಭೂಮಿ ಗರಿಷ್ಠ ಅಂತರ
೧೫ ಶುಕ್ರ - ಶನಿ ಸಮಾಗಮ* (೩ ಡಿಗ್ರಿ)
೧೬ ಗುರು - ಚಂದ್ರ ಸಮಾಗಮ* (೬ ಡಿಗ್ರಿ)
೧೯ ಚಾಂದ್ರಮಾಸದ ಪ್ರಥಮ ಪಾದ (ಚಂದ್ರಾಸ್ತ ನಡುರಾತ್ರಿಗೆ)
೨೧ ಒರಿಯನಿಡ್ಸ್ ಉಲ್ಕಾ ವೃಷ್ಟಿಯ ಗರಿಷ್ಠ ಚಟುವಟಿಕೆ
೨೩ ಬುಧ ಗ್ರಹದ ಯುತಿ
೨೬ ಹುಣ್ಣಿಮೆ ೧೦:೨೨ಕ್ಕೆ
೨೮ ಶುಕ್ರ ಗ್ರಹದ ಗರಿಷ್ಠ ಕೋನೋನ್ನತಿ*
೩೦ ಮಂಗಳ - ಚಂದ್ರ ಸಮಾಗಮ* (೩ ಡಿಗ್ರಿ)
ನವೆಂಬರ್ ೪ ಚಂದ್ರ - ಶನಿ ಸಮಾಗಮ
೫ ಚಂದ್ರ - ಶುಕ್ರ ಸಮಾಗಮ
ಟೌರಿಡ್ಸ್ ಉಲ್ಕಾ ವೃಷ್ಟಿಯ ಗರಿಷ್ಠ ಚಟುವಟಿಕೆ
* ಛಾಯಾಗ್ರಹಣಕ್ಕೆ ಉತ್ತಮ ಅವಕಾಶ



*೭ನೇ ಅಕ್ಟೋಬರ್ ಬೆಳಗಿನ ಜಾವ ಪೂರ್ವದಿಕ್ಕಿನಲ್ಲಿ ಕಾಣುವ ಬಾಲಚಂದ್ರ ಶುಕ್ರ ಮತ್ತು ಶನಿ*


**ಡಾ|| ಬಿ. ಎಸ್. ಶೈಲಜಾ**
ಜವಹರಲಾಲ್ ನೆಹರೂ ತಾರಾಲಯ, ಹೈಗ್ರೌಂಡ್ಸ್
ಬೆಂಗಳೂರು - ೫೬೦ ೦೦೧




## ಭೂಮಿಯಿಂದ ಬಾನಿನತ್ತ

ಡಾ|| ಪಿ. ಆರ್. ವಿಶ್ವನಾಥ್

**ಪುಟ :** ೧೮೪ **ಬೆಲೆ :** ರೂ. ೧೧೦

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**

ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೧

ಮಾನವನಿಗೆ ಮೊದಲ ಬಾರಿಗೆ ಆಕಾಶಕಾಯಗಳ ಬಗ್ಗೆ ಕುತೂಹಲ, ಅಧ್ಯಯನಾಸಕ್ತಿ ಮೂಡಿದ್ದು ಹೇಗೆಂದು ವಿವರಿಸುತ್ತ ಪುಸ್ತಕ ಆರಂಭವಾಗುತ್ತದೆ. ವಿಶ್ವಯ ಹೊರ ಜಗತ್ತಿನ ಕುರಿತು ಪ್ರಚಲಿತವಿದ್ದ ನಂಬಿಕೆಗಳು, ಕಥೆಗಳನ್ನು ತಿಳಿಸಿರುವುದಲ್ಲದೆ ಲೇಖಕರು ಖಗೋಳ ಶಾಸ್ತ್ರದ ಇತಿಹಾಸವನ್ನೂ ಸರಳ ರೂಪದಲ್ಲಿ ತೆರೆದಿಟ್ಟಿದ್ದಾರೆ. ಗ್ಯಾಲಕ್ಸಿಗಳು, ಸೂಪರ್ನೋವಾಗಳು, ಪಲ್ಸಾರ್‌ಗಳು, ಬ್ಲ್ಯಾಕ್‌ಹೋಲ್‌ಗಳು, ಗ್ಯಾಮಾ ರೇ ಸಿಡಿತಗಳು – ಹೀಗೆ ಖಗೋಳ ಶಾಸ್ತ್ರದ ಎಲ್ಲ ಜಟಿಲ ವಿಷಯಗಳನ್ನೂ ಸಾಮಾನ್ಯರಿಗೆ ಅರ್ಥವಾಗುವಂತೆ ನಿರೂಪಿಸಿದ್ದಾರೆ. ವಿಜ್ಞಾನ ಪುಸ್ತಕವಾದರೂ ಕಥೆಗಳು, ಇತಿಹಾಸ, ವಿಜ್ಞಾನಿಗಳ ವ್ಯಕ್ತಿ ಚಿತ್ರಣದಿಂದ ಕೂಡಿರುವ ಈ ಪುಸ್ತಕ ಸುಲಲಿತವಾಗಿ ಓದಿಸಿಕೊಂಡು ಹೋಗುತ್ತೆ. ಆಕಾಶಕಾಯಗಳಲ್ಲಿ ಆಸಕ್ತಿ ಮೂಡಿಸಿ ಇನ್ನೂ ಹೆಚ್ಚು ತಿಳಿದುಕೊಳ್ಳುವಂತೆ ಪ್ರೇರೇಪಿಸುತ್ತೆ. ಪುಸ್ತಕದ ತುಂಬ ಸುಂದರವೂ, ಅರ್ಥಪೂರ್ಣವೂ ಆದ ಚಿತ್ರಗಳಿವೆ. ಮುಖಪುಟ ವಿನ್ಯಾಸ ಪುಸ್ತಕವನ್ನು ಕೈಗೆತ್ತಿಕೊಳ್ಳುವಂತೆ ಆಕರ್ಷಿಸುತ್ತೆ. ಸಾಮಾನ್ಯರು ಮತ್ತು ವಿಜ್ಞಾನ ವಿದ್ಯಾರ್ಥಿಗಳು ಇಬ್ಬರಿಗೂ ಉಪಯೋಗವಾಗುವಂಥ ಪುಸ್ತಕ.



## ಅಡ್ಡಗೋಡೆಗಳನ್ನೊಡೆದು...




**ಮುನ್ನಡೆದ ಹನ್ನೆರಡು ಮಹಿಳೆಯರ ಕಥೆಗಳು**

ಪಾರ್ವತಿ ಮೆನನ್, ಕನ್ನಡಕ್ಕೆ : ಡಾ|| ಎನ್. ಗಾಯತ್ರಿ

**ಪುಟ :** ೧೪೭ **ಬೆಲೆ :** ರೂ. ೬೦

**ಅಧ್ಯಯನ,** ಪಂಡಿತ್ ಪಬ್ಲಿಕ್ ಲೈಬ್ರೆರಿ ಬಿಲ್ಡಿಂಗ್, ಶಿರಸಿ, ಉ.ಕ.

ಅಹಲ್ಯಾ ರಾಂಗ್ನೇಕರ್, ಇಳಾ ಭಟ್ಟಾಚಾರ್ಯ, ಕನಕ ಮುಖರ್ಜಿ, ಲಕ್ಷ್ಮಿ ಸೆಹಗಲ್, ಮಲ್ಲು ಸ್ವರಾಜ್ಯಂ, ಮಂಗಳೇಶ್ವರಿ ದೇಬ್ ಬರ್ಮಾ, ಮಂಜರಿ ಗುಪ್ತ, ಮೋಟೂರು ಉದಯಂ, ಪಂಕಜ ಆಚಾರ್ಯ, ಪಾಪ್ಪ ಉಮಾನಾಥ್, ಸುಶೀಲಾ ಗೋಪಾಲನ್, ವಿಮಲ್ ರಣದಿವೆ – ಈ ಹನ್ನೆರಡು ಜನ ದಿಟ್ಟ ಹೋರಾಟಗಾರ್ತಿಯರ ಕುರಿತ ಪುಸ್ತಕ. ಇವರೆಲ್ಲ ಭಾರತದ ವಿಭಿನ್ನ ಪ್ರದೇಶಗಳಿಂದ ಹಿನ್ನೆಲೆಗಳಿಂದ ಬಂದವರು. ಭಾರತದ ಸ್ವಾತಂತ್ರ್ಯ ಚಳುವಳಿಯಲ್ಲಿ ತೊಡಗಿಕೊಂಡು ಹೋರಾಡಿದವರು. ಸ್ವಾತಂತ್ರ್ಯಾನಂತರವೂ ಸಾರ್ವಜನಿಕ ಜೀವನದಲ್ಲಿ ಸಕ್ರಿಯರಾಗಿದ್ದು ಮಹಿಳಾ ಆಂದೋಲನವನ್ನು ಕಟ್ಟಿ ಬೆಳೆಸಿದವರು, ಲಿಂಗ ಅಸಮಾನತೆಯ ವಿರುದ್ಧ ಸೆಣಸಿದವರು. ಸಂದರ್ಶನಗಳನ್ನು ಆಧರಿಸಿ, ಅವರ ಬಗ್ಗೆ ದೊರೆತ ಜೀವನ ಚರಿತ್ರೆಗಳ ಮಾಹಿತಿಗಳನ್ನು ಕಲೆಹಾಕಿ ಇಲ್ಲಿಯ ಲೇಖನಗಳನ್ನು ಸಿದ್ಧಪಡಿಸಲಾಗಿದೆ. ಒಬ್ಬೊಬ್ಬರ ಕಥೆಯಲ್ಲಿಯೂ ಕಾಣುವುದು ಸಾಧನೆಗಳ ಅಗಾಧತೆ. ಇಂತಹ ಸಾಹಸೀ ಅಮ್ಮಂದಿರ ಪರಿಶ್ರಮದ ಫಲವಾಗಿ ಪಡೆದ ದೇಶವನ್ನು ನಾವು ಎತ್ತ ಕೊಂಡೊಯ್ಯುತ್ತಿದ್ದೇವೆ ? ದೇಶದ ಬಗ್ಗೆ ನಮಗಿದ್ದ ನಮ್ಮ ಬದ್ಧತೆ, ಜವಾಬ್ದಾರಿಗಳೆಲ್ಲ ಎಲ್ಲಿ ಹೋದವು, ನಮ್ಮ ಸೋಮಾರಿ ಬದುಕಿಗೆ ಕೊನೆಯೆಂದು, ಎಂಬಂತಹ ಪ್ರಶ್ನೆಗಳು ಕಾಡತೊಡಗುತ್ತವೆ.

## ಶ್ರೀ ಅರವಿಂದರ ದಿವ್ಯಜೀವನ




ಅನುವಾದ : ಕೋ. ಚೆನ್ನಬಸಪ್ಪ

**ಪುಟ :** xx + ೧೩೭೬ **ಬೆಲೆ :** ರೂ. ೫೦೦

**ಶ್ರೀ ಅರವಿಂದ ಪ್ರಕಾಶನ,** ಬಸವೇಶ್ವರನಗರ, ಬೆಂಗಳೂರು - ೫೬೦ ೦೭೬

ಶ್ರೀ ಅರವಿಂದರ 'ಲೈಫ್ ಡಿವೈನ್' ಗ್ರಂಥದ ಅನುವಾದ ಎರಡನೆಯ ಮುದ್ರಣವನ್ನು ಕಾಣುತ್ತಿದೆ. ಶ್ರೀ ಅರವಿಂದರ ಭಕ್ತಾನುಯಾಯಿಗಳಿಗೆ ಪೂಜ್ಯವಾಗುವ ಕೃತಿ. ಕುವೆಂಪುರವರ ಮುನ್ನುಡಿಯಿಂದ ಆರಂಭವಾಗುತ್ತದೆ. ೧೩೭೬ ಪುಟಗಳ ಬೃಹತ್ ಪುಸ್ತಕ. ಇಂತಹ ಮೇರುಕೃತಿಯನ್ನು ಅನುವಾದಿಸಿದ ಕೋ. ಚೆನ್ನಬಸಪ್ಪನವರ ಶ್ರದ್ಧೆ, ಶ್ರಮ ಶ್ಲಾಘನೀಯ, ಅನುಕರಣೀಯ. ಪರಿವಿಡಿಯಲ್ಲಿ ಸೂಚಿಸಿರುವಂತೆ ಈ ಕೃತಿಯಲ್ಲಿ ಪ್ರಥಮ ಹಾಗೂ ದ್ವಿತೀಯ ಭಾಗಗಳಿವೆ. ಈ ಎರಡು ಭಾಗಗಳನ್ನು ಬೇರೆ ಬೇರೆ ಪುಸ್ತಕವಾಗಿ ಪ್ರಕಟಿಸಿದ್ದರೆ ಕೊಳ್ಳಲು, ಕೈಯಲ್ಲಿ ಹಿಡಿದು ಓದಲು ಹಗುರವಾಗಿರುತ್ತಿತ್ತು ಎನಿಸಿತು.




## ಕನ್ನಡ ಜಗತ್ತು – ಅರ್ಧ ಶತಮಾನ

ಕೆ. ವಿ. ನಾರಾಯಣ

**ಪುಟ :** xiv + ೩೪೨ **ಬೆಲೆ :** ರೂ. ೧೨೦

**ನಿರ್ದೇಶಕರು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಕನ್ನಡ ಭಾಷೆಯ ಅಭಿವೃದ್ಧಿ ಮತ್ತು ಭವಿಷ್ಯದ ಕುರಿತ ಅಧ್ಯಯನದ ಫಲವಾಗಿ ಹೊರಬಂದ ಕೃತಿ. ಕನ್ನಡ ಭಾಷೆಯ ಆಂತರಿಕ ರಚನೆ, ಬಾಹ್ಯ ಪ್ರಯೋಗಗಳು ಮತ್ತು ಕರ್ನಾಟಕದ ಸಾಮಾಜಿಕ ಮತ್ತು ಸಾಂಸ್ಕೃತಿಕ ಪಲ್ಲಟಗಳು – ಇವುಗಳ ಅಂತರ್‌ಸಂಬಂಧವು ಮಾಹಿತಿ ಮತ್ತು ಮೌಲ್ಯಮಾಪನಗಳ ನೆಲೆಯಲ್ಲಿ ಇಲ್ಲಿ ವಿವೇಚನೆಗೆ ಒಳಗಾಗಿದೆ. ಏಕೀಕರಣದ ಸಂದರ್ಭದ ಕನ್ನಡದ ಸ್ವರೂಪ, ಭಾಷಾ ನೀತಿ ಮತ್ತು ಯೋಜನೆ, ಆಡಳಿತ, ಶಿಕ್ಷಣ ಮತ್ತು ಸಮೂಹ ಮಾಧ್ಯಮಗಳಲ್ಲಿ ಕನ್ನಡದ ಸ್ಥಾನ, ಕನ್ನಡದ ಆಧುನೀಕರಣ, ಇತರ ಭಾಷೆಗಳೊಂದಿಗಿನ ಸಂಬಂಧ, ಕನ್ನಡ ಚಳುವಳಿಗಳು, ಭಾಷೆಯ ಅಧ್ಯಯನಗಳು, ಸಾಹಿತ್ಯ, ಕನ್ನಡದ ಭವಿಷ್ಯ ಮತ್ತು ಆದರ ಕುರಿತ ಆತಂಕಗಳು – ಇವಿಷ್ಟು ಇಲ್ಲಿ ವಿಸ್ತಾರವಾಗಿ ಚರ್ಚೆಯಾಗಿರುವ ವಿಷಯಗಳು.




## ಸುತ್ತಿಕೊಂಡರೆ ಸರ್ಪ

ಹೆಚ್. ವಿ. ವೇಣುಗೋಪಾಲ

**ಪುಟ :** ೮೦ **ಬೆಲೆ :** ರೂ. ೪೦

**ಸಿರಿವರ ಪ್ರಕಾಶನ,** ನಂ. ಎಂ ೩೭ಬಿ, ೮ನೇ ಅಡ್ಡರಸ್ತೆ, ಲಕ್ಷ್ಮೀನಾರಾಯಣಪುರ, ಬೆಂಗಳೂರು - ೨೧

ಒಂದು ನೈಸರ್ಗಿಕ ಜಲಾಶಯದ ಬಳಿಯಿರುವ ಕಾರ್ಖಾನೆಗಳಿಂದ ಹೊರಬಂದ ತ್ಯಾಜ್ಯ ವಸ್ತುಗಳು ನದಿ ನೀರಿನಲ್ಲಿ ಸೇರುತ್ತವೆ. ಈ ಕಶ್ಮಲಯುಕ್ತ ನೀರು ರೋಗಾಣುಗಳು ಹರಡಲು ಕಾರಣವಾಗುತ್ತವೆ. ಇದೇ ನೀರು ಊರಿಗೆ ಸರಬರಾಜಾಗುವುದು, ಮುಂಬರುವ ಭೀಕರ ಸಮಸ್ಯೆಗೆ ಕಾರಣವಾಗುವುದು ನಾಟಕದ ಮೂಲ ಕಥಾವಸ್ತು. ನಾರ್ವೆ ದೇಶದ ಹೆನ್ರಿಕ್ ಇಬ್ಸನ್ ಎಂಬ ಪ್ರಸಿದ್ಧ ನಾಟಕಕಾರ ೧೮೮೨ರಲ್ಲಿ ರಚಿಸಿದ 'ಆ್ಯನ್ ಎನಿಮಿ ಆಫ್ ದಿ ಪೀಪಲ್' ಎಂಬ ನಾಟಕದ ರೂಪಾಂತರವಿದು. 'ಸುತ್ತಿಕೊಂಡರೆ ಸರ್ಪ' ಈಗಾಗಲೇ ರಂಗದ ಮೇಲೆ ಪ್ರಯೋಗಗೊಂಡು ಯಶಸ್ವಿಯಾಗಿದೆ. ಮೂಲ ನಾಟಕಕ್ಕೆ ಧಕ್ಕೆಯಾಗದ ರೀತಿಯಲ್ಲಿ ನಮ್ಮ ನಾಡಿನ, ಇತ್ತೀಚಿನ ಸಮಸ್ಯೆಗಳಲ್ಲಿ ಕೆಲವನ್ನು ಆಯ್ದು, ಕನ್ನಡಿಗರಿಗೆ ಪರಿಚಿತವಿರುವಂತಹ ಪಾತ್ರದ ಹೆಸರುಗಳು, ವೃತ್ತಿ, ಊರುಗಳು, ಯೋಜನೆಗಳು ಮತ್ತು ದೃಶ್ಯಗಳನ್ನು ಹೆಣೆದು ರಚಿಸಲಾಗಿದೆ. ಯುವ ಜನತೆಯಲ್ಲಿ ಸಾಮಾಜಿಕ ಕಳಕಳಿ, ಸ್ವಚ್ಛತೆ, ನೈರ್ಮಲ್ಯದ ಬಗ್ಗೆ ಎಚ್ಚರ ಮತ್ತು ಸಮಸ್ಯೆಯನ್ನು ಪರಿಹರಿಸುವ ಜವಾಬ್ದಾರಿಯನ್ನು ಕುರಿತು ತಿಳಿಯಹೇಳುವ ನಾಟಕ.

## ಸಂಕರ ಬಂಡಿ

ರಾಮಲಿಂಗಪ್ಪ ಟಿ. ಬೇಗೂರು

**ಪುಟ :** ೯೬ **ಬೆಲೆ :** ರೂ. ೫೦

**ಮುದ್ದುಶ್ರೀ ಗ್ರಂಥಮಾಲೆ,** ನಂ. ೧೯೯, ೩ನೇ ಅಡ್ಡರಸ್ತೆ, ೮ನೇ ಮುಖ್ಯರಸ್ತೆ, ಹಂಪಿ ನಗರ, ಬೆಂಗಳೂರು - ೧೦೪

ಬೇಗೂರರ ಎರಡನೇ ಕವನ ಸಂಕಲನ. ತಂತ್ರಜ್ಞಾನ, ಜಾಗತೀಕರಣದ ಬಿಗಿ ಪಾಶಕ್ಕೆ ಸಿಲುಕಿ ಹೈರಾಣಾಗಿರುವ ಜಗತ್ತನ್ನು ವಿವಿಧ ಕೋನಗಳಿಂದ ಚಿತ್ರಿಸುವ ಒಟ್ಟು ನಲವತ್ತೆರಡು ಕವನಗಳು ಇಲ್ಲಿವೆ. 'ಸರ್ಪರೈಲು' ಎಂಬ ಫ್ಯಾಂಟಸಿ ಕವನದ ಸಾಲುಗಳು :

'ನಿಲ್ಲುತ್ತ ಓಡುತ್ತ ಕಕ್ಕಿಕೊಳ್ಳುತ್ತ ಮುಲುಗುತ್ತ
ತೂಗುತ್ತ ಬರುತ್ತ ಹೋಗುತ್ತ ರೈಲು
ಊರಿಗೆ ಊರೇ ಏಲು ಪೈಲು.'

ನಗರೀಕರಣ, ಗ್ರಾಮನಾಶ, ಸಾಯುತ್ತಿರುವ ಜೀವನಶೈಲಿಗಳು – ಹೀಗೆ ನಿಸರ್ಗ ಮತ್ತು ಸಂಸ್ಕೃತಿಯ ಮೇಲಿನ ಅತ್ಯಾಚಾರದ ಚಿತ್ರಗಳು ಇಲ್ಲಿಯ ಪದ್ಯಗಳಲ್ಲಿವೆ.

– ಸಹನ, ನಂ. ೩, 'ಕೆರೆಮನೆ' ಅಪಾರ್ಟ್‌ಮೆಂಟ್
'ದೇವರಕೆರೆ' ಎಕ್ಸ್‌ಟೆನ್ಶನ್, ಇಸ್ರೋ ಲೇಔಟ್, ಬೆಂಗಳೂರು - ೫೬೦ ೦೭೮

# ನಾಗಮಲ್ಲಿಗೆ ನಿಜದ ಮೂಲಿಕೆಗಳು

ಸೆಳಕು : ಒಂದು

ಕಣ್ಣೊಡೆದ ಬಯಲ ಜಗುಲಿಯ ಮೇಲೆ
ಕಾರೆಮುಳ್ಳಿನ ಅರೆಬೆಂದ ನಗೆಯೊಂದು ದಾಖಲಾಗಿದೆ
ಮನೆಯ ಕಿಡಕಿಯಂಚಲ್ಲಿ ಜೋಡಿ ಕಣ್ಣಿನ
ಹುಡುಗಿಯ ಮುಖದಲ್ಲಿ ಚಹರೆ ಕಳೆದುಕೊಂಡ
ಮಾತಿನ ನೆರಳು ತೂಗುತ್ತಿದೆ.

ಮಣ್ಣಕಣ್ಣಿನ ಒಳಗೆ ಮತ್ಸ್ಯಗಂಧಿಯ ಹಾಡು
ಮಡಿಲ ಮಗುವಿನಂತೆ ಬಿದ್ದುಕೊಂಡು ಕೆನೆಯುತ್ತಿದೆ
ಪಾದದ ತುದಿಗೆ ತಗುಲಿಸಿದ ನವಿಲುಗರಿ
ಬಯಕೆಗಳನ್ನು ನೆವರಿಸಲಾಗದೆ ಬಸುರಾಗಿದೆ

ಶಬ್ದ-ನಿಶ್ಯಬ್ದದ ಹಂಗಿನೊಳಗಡೆ ತಡಕುತ್ತಿದೆ
ಮಾಗಲಾರದ ಜಲುಮ ಹಗಲ ಗಳಿಗೆಯೊಳಗೆ
ನಾಡಿಮಿಡಿತ ಭೋಗ ಬರೀ ವೈಯ್ಯಾರದ
ಮರೆಗೆ ಹೋಗುವ ಹಗಲು,
ಕಾಡಿ ಕೊಲ್ಲುವ ರಾತ್ರಿ
ರಾಜಿಯಾಗದೆ ಎಕ್ಕೆ ತುಂಬಿದೆ

ಉಣ್ಣಲಾರದೆ ತುಟಿಯಂಚಲ್ಲಿ ಸೆರೆಯಾದ ಮಾತು
ಮೌನ ನನಗೆ ಕಾಲು ಸೋತಿದೆ ದಾರಿ
ಕಣ್ಣ ಕಾವಲಿನಲ್ಲಿ ಅರೆಪಾವು ಕೆಂಪಕ್ಕಿ ಚೆಲ್ಲಿ
ನಡೆದಂತೆ ಪಚ್ಚೆ ಪೈರಾಗುತ್ತಿದೆ ದಿನ ಉರುಳಿದಂತೆ

ಮದರಂಗಿ ನಡೆದಂತೆ ಬಂಗಾರ ಹೊಳೆಸಾಲು
ಕಣ್ಣ ಕಾವಡಿಯೊಳಗೆ ಬಯಲ ಬಾಗಿಲ ತೇರು
ಸಪ್ಪಳವಿಲ್ಲದ ಗಳಿಗೆಯ ಮುಖಾಂತರ
ತಳಹತ್ತಿದ ಮಾತಿನ ಲೋಲಾಕದ ಸದ್ದು ತೂಗಾಡುತ್ತಿದೆ

ಸೆಳಕು : ಎರಡು

ಆದಿ ಒಳಗಲ ಜ್ಯೋತಿಯ ಅರ್ಥ ನೆವರಿಕೆ ಮಾಯೆ
ಹಟ್ಟಿ ಮಡುಕುಗಳಲ್ಲಿ ಮೈಮುರಿದು ಮರೆತ-
ಮಾತಿನ ಹಿಂದೆ ಬಸುರಾದ ತೇಪೆ ಹೊಲಿದು
ನಡೆದಂತೆ ಹೊಂಗನಸ ಒನಪು

ವ್ಯಕ್ತ ನಡುವಿನ ಆಟ ಮುಗಿಯುತ್ತ ಬಂದಂತೆ
ಬೆರಳಂಚಿನ ಪ್ರೀತಿ ಬೆರಗು ಮಾಯದ ಜಗುಲಿ
ಮಿಸಲೊಡೆದ ಹಗಲ ಹರಿವಾಣದಲ್ಲಿ
ಕಪ್ಪಾದ ಆಕೃತಿಗಳಿಗೆ ಒಂದೊಂದು ನೂಲು ಏಣಿ

ನಿರಾಕರಿಸಲಾಗದ ಹಗಲು
ಸಾಕ್ಷಾತ್ಕರಿಸದ ರಾತ್ರಿ ಬೆರಗಿನ ಬೆಳಕು
ಬೊಗಸೆ ಸಂಧಿಗಳಲ್ಲಿ ಸುಕ್ಕಾಗಿ - ಮುಕ್ಕಾದ ಉಕ್ಕೆ

ಸೇಡವನರಿಯದ ಗುರುವು ಈಬೂತಿ ಬಳುವಳಿಯ
ಸಾಲಿನ ಒಳಗಡೆಗೆ ಮುರಿದ ಕನ್ನಡಿ ಚಿತ್ರ
ಸರಿದಂಗೆ ಸರಹೊತ್ತಲ್ಲಿ ಒಂಟಿ ಗೂಬೆಯ ಕೂಗು
ಕೇಳಿ ನಡೆದಂತೆ ಕಾಡುತ್ತಿದೆ ಚಿಗುರು ಸೊಲ್ಲು

ಮಾತು ಮೌನದ ಕಣ್ಣು
ದೇಹ ಮಾಯ ಪರುವತ ಕಾಯ

ಸೂರು ತಬ್ಬಿದ ಬಯಲ ಬೇಗುದಿಯ
ಅಡಿಯೊಳಗೆ ಕಾಯ ಸುಖದ
ಉರುಲು ಕಮರಿ ಹೋಗಿದೆ

ಗರಿಗೆದರಿ ನಡೆದಂತೆ ನವಿಲ ಕಣ್ಣಿನ ಚಿತ್ರ
ಬಾಗಿಸಲಾಗದೆ ಬಂದ ಕಾರೆಮುಳ್ಳಿನ ಹಾದಿ
ಜಾಡನರಿಸುವ ಕಣ್ಣು ಅದರಡಿಯ ಮುಡಿಗೆ
ತಗುಲಿಸಲಾಗದು ನೆಲದೊಡಲಿನ ನಿಗುರಿದ ಮಣ್ಣು

ಎದ್ದುಬಿದ್ದು ಮಣ್ಣಾದ ಸೊಗಲಾಡಿ ಬದುಕು
ಕಟ್ಟಿನಿಂತ ಕಮಾನು, ಮಿನಾರು, ಗುಡಿ-ಗೋಪುರ
ನೊರೆ ಉಕ್ಕಿ ಸೋರುತ್ತಿದೆ ಹಾಲು ತುಂಬಿದ
ಆ ಮಣ್ಣಿನ ಬದುಕಿನ ಮಡಿಕೆ

ಸೆಳಕು : ಮೂರು

ಉರಿವ ದೀಪದ ಹಿಂದೆ ಅರ್ಥ ಪದರಿನ ನತ್ತು
ವ್ಯಕ್ತ ಮಧ್ಯದ ಬುಡಕೆ ಕರಿನೆರಳ ಸೊಗಸು

ಬೊಗಸೆಯರಳಿಸಿಕೊಂಡು ದೀಪವುರಿಸಿದ ಅವಳು
ಬೆಳಕು ನಗುವ ಮೊದಲು, ಮಾಯವಾದಳು
ಅಪ್ಪಿ ನಗುವ ಹಗಲು, ಚುಚ್ಚುವ ಒಳಮಾತು
ಹೊರ ನಡೆದ ಚಿತ್ರಕ್ಕೆ ನೂರಾರು ಕೊರಳು

ಅರ್ಥ ದಾರಿಗಂಟಿದ
ಆರು ಮೂರರ ಹೆಜ್ಜೆಗಳ ಗುರುತು
ಜಾಹೀರು ಮಾಡುತ್ತಿವೆ ನಿನ್ನ ಒಳ ಹೊರಗೆ

ಹೇಗೆ ನಡೆದರು ಸರಿಯೇ
ಸೇರುವ ತಾವು ಒಂದೇ
ಕಲ್ಲು ನಾಗರರಿಗೆ ಹಾಲನೆರೆಯುವ ನೇಮ

ಎತ್ತ ನಡೆದರು ಅತ್ತ ಸಾಗಿ ಬರುವ ನೆರಳು
ಒತ್ತಿ ನಡೆದಂತೆಲ್ಲಾ ಉರಿಗಣ್ಣ ಒಡಲು
ಯಾರದೋ ಕೈಗಳಿಗೆ
ಮತ್ತೆ ಯಾರದೋ ಬಂಧನದ ಸರಪಳಿ

ಮುರಿದ ಮಡಿಕೆಯ ತುಂಬ ಉಕ್ಕುವ ನೊರೆಹಾಲು
ಮಡಿಕೆಯ ಬುಡದಲ್ಲಿ ನೂರಾರು ಗೆದ್ದಲು
ಬಡಿವ ಗುಂಡಿಗೆಯೊಳಗೆ ನೂರೆಂಟು ಸೊಲ್ಲು

ನಗುತ ಸಾಗುವ ಗಳಿಗೆಯ ಎದುರಲ್ಲಿ
ಅವುಡುಗಚ್ಚಿ ನಿಂತ ನೆಲಮಾಳಿಗೆಯ ಪಾದಗಳು
ಆಳಕೂಪದ ಒಳಗೆ ಒಂದಷ್ಟು ನೀರು
ಒಳಗೆ ಇಳಿಯಲ್ಲೊಂದು ನೂಲು ಏಣಿ

ಸೆಳಕು : ನಾಲ್ಕು

ಬೆದಗೊಂಡ ಬಯಲ ಬದುಗಳ ಒಳಗೆ
ಉರಿಗೊಂಡು ಕಣ್ಗೊಡೆದ ಬೀಜಗಳು ಕುಳಿತು
ಬೆದರಿ--ಬೆದರಿ ಕಣ್ಗೊಡೆದು ಅದರೊಳಗೆ ನೂರು ಕಾಳು

ಅಗ್ರಹಾರದ ಕೊನೆಯ ಮನೆಯೊಂದರಲ್ಲಿ
ಹತ್ತಿ ಉರಿಯುವ ಅರ್ಥ ದೀಪದ ಹಾಡು
ಅರೆಕೊರೆಯಿಲ್ಲದ ಹಗಲಲ್ಲಿ
ಸಾಕ್ಷಾತ್ಕರಿಸದೆ ನಿಂತ ಹೊಡೆದ ಬತ್ತಳಿಕೆಗಳು

ಮೊದಲಿಲ್ಲ ಕೊನೆಯಿಲ್ಲ ಕೊರಡು ಕೊನರುವ
ಬಯಕೆ ಅದರ ತಳದಲ್ಲೊಂದು ಸೆಳಕು ಮಿಂಚು
ಮಿಂಚಿನ ಒಳಗಡೆ ಗಾರುಡಿ ಹುಣ್ಣು

ಬಂಡಿ ಸಾಗುವ ದಾರಿ
ಹಾದಿ ಬದಿಯಲ್ಲೊಂದು ಕುಣಿವ ನವಿಲು

ನವಿಲ ಮೊಟ್ಟೆಯೊಳಗೆ ನೂರಾರು ಗರಿಗಳು
ಗರಿಗರಿಯ ಕೊನೆಗೊಂದು ಮುತ್ತುಗದ ಹೂವು
ಯಾರು ಕೊಯ್ಯುವರಿಲ್ಲ
ಯಾರು ಮುಡಿಗೇರಿಸುವುದಿಲ್ಲ

ಸರಿದು ಹೋಗುವ ಕಾಲ
ಕವುಚಿ ನಿಂತು ನಗುವ ಮಾತು
ಒತ್ತಿ ನಡೆದಂತೆ ಎಷ್ಟೆಂದು ಸಾಗುವ ಹೊತ್ತು ?
ಜೇವಜಾಲದ ತೇರಿಗೆ ಮಾಯದ ಹೊನಲು

ಸೆಳಕು : ಐದು

ಕದ್ದು ಸಾಗುವ ಹೊತ್ತಿಗೆ ನೂರು ಕಾಲಿರಬಹುದು
ಕಾಲು-ಕಾಲಿಗೆ ಯಾರು ಗೆಜ್ಜೆ ಕಟ್ಟುವರು ?

ಜೀವ ಜಂಗಮರ ಜೋಳಿಗೆಯೊಳಗೆ
ಅಡಗಿ ಕುಳಿತಿದೆ ಜಗದ ನೂರಾರು ಕನ್ನಡಿಗಳು

ಯಾರ ಹಗ್ಗಕ್ಕೆ ಯಾರೋ ಉರುಲಾಗುವರು

ಹೇಳಲಾಗದ ಮಾತು
ಹೇಳಿದರೆ ಸರಿಹೋಯ್ತು
ಹೇಳಲಾರದೆ ಹೋದರೆ ಎದೆಗೂಡೊಳಗೆ
ಬರೀ ಬಿಕ್ಕಳಿಕೆ ಪದವು.

**ಲಕ್ಕೂರು ಸಿ. ಆನಂದ**
'ಪದ್ಮಗೌರಿ', ಪೊಲೀಸ್ ಠಾಣೆ ಎದುರು, ಲಕ್ಕೂರು ಅಂಚೆ
ಮಾಲೂರು ತಾಲ್ಲೂಕು, ಕೋಲಾರ ಜಿಲ್ಲೆ - ೫೬೩ ೧೬೦

# ನೀರಿಲ್ಲದಲ್ಲಿ ನೀರಾವರಿ

■ ಎ. ಪಿ. ಚಂದ್ರಶೇಖರ

ಪರಸ್ಪರ ವಿರುದ್ಧ ಪದ, ತೀರ ಅಸಂಭವ ವಿಚಾರ ಎಂದು ನೀವು ಮೂಗು ಮುರಿಯಬಹುದು. ನೀರಿಲ್ಲದಲ್ಲಿ ನೀರಾವರಿ ಹೇಗೆ ಸಾಧ್ಯ, ಎಂಬ ಪ್ರಶ್ನೆ ತಕ್ಷಣ ನಿಮ್ಮಲ್ಲಿ ಮೂಡಬಹುದು. (ಇದು ತಾಂತ್ರಿಕ ಉತ್ತುಂಗದಲ್ಲೂ ಸಾಧ್ಯ. ಪ್ರಕೃತಿಯ ಪರಿಪೂರ್ಣತೆಯಲ್ಲೂ ಸಾಧ್ಯ.)

ಆದರೆ ಗಮನಿಸಿ. ನಾವಿಂದು ಶಿಲಾಯುಗದಲ್ಲಿಲ್ಲ. ಇತಿಹಾಸದಲ್ಲಿ ಎಂದೂ ಕಂಡರಿಯದ ತಾಂತ್ರಿಕ ಪ್ರಗತಿಯನ್ನು ಸಾಧಿಸಿದ್ದೇವೆ. ಕುಳಿತಲ್ಲಿಂದಲೇ ಪ್ರಪಂಚದ ಆಗುಹೋಗುಗಳನ್ನು ತಿಳಿಯಬಲ್ಲ, ಎಲ್ಲೆಂದರಲ್ಲಿ ಯಾರೆಂದರೆ ಅವರ ಜೊತೆ ಮಾತಾಡಬಲ್ಲ, ಗುಂಡಿಯ ಅಮುಕಿನಲ್ಲಿ ಎಲ್ಲವನ್ನೂ ನಿಯಂತ್ರಿಸಬಲ್ಲ ಬೌದ್ಧಿಕ ಔನ್ನತ್ಯದಲ್ಲಿ ಮೆರೆಯುತ್ತಿದ್ದೇವೆ. ಹೀಗಿರುತ್ತಾ ನೀರಾವರಿಗೆ ನೀರು ಬೇಕೆಂದೇನೂ ಇಲ್ಲ.

ಅದು ತೀರ ಹಳೆಯ ಮಾತಾಯಿತು. ಅಂದಾದರೋ ನೀರಾವರಿ ಮಾಡಬೇಕಾದರೆ, ನಮ್ಮ ಜಮೀನಿಗೆ ನೀರು ಹರಿಸಬೇಕಾದರೆ ಅಲ್ಲೊಂದು ಹೊಳೆ (ತೊರೆ) ಹರಿಯ ಬೇಕಾಗಿತ್ತು, ಇಲ್ಲಾ ಒಂದು ಕೆರೆ ಇರಬೇಕಾಗಿತ್ತು. ತುಸು ಮುಂದುವರಿದಾಗ ತೋಡುಬಾವಿ ಏತ, ಪಂಪು, ಪೈಪು ಇತ್ಯಾದಿಗಳು ಬಂದವು. ಕೃಷಿಯನ್ನು ಸುಲಭ ಗೊಳಿಸಿದವು ಎನ್ನುವುದಕ್ಕಿಂತ, ಕೃಷಿಗೆ ಕಡಿಮೆ ಸಮಯ ಕೊಟ್ಟು ತಿರುಗಾಟಕ್ಕೆ ಜಾಸ್ತಿ ಸಮಯ ವಿನಿಯೋಗಿಸಲು ಸಾಧ್ಯ ಮಾಡಿಕೊಟ್ಟವು.

ಕಾಲ ಸರಿದ ಹಾಗೆ, ಕಾಲ ದೋಷವೋ, ನಮ್ಮ ದೋಷವೋ ಅಂತೂ ಹೊಳೆ, ಕೆರೆ, ಬಾವಿ ಎಲ್ಲಾ ಬರಿದೋ ಬರಿದು, ಆಗಲೂ ನಾವೇನು ಹೆದರಲಿಲ್ಲ. ನಮ್ಮ ಸಹಕಾರಕ್ಕೆ ತಂತ್ರವಿದ್ಯೆ ಇದ್ದೇ ಇದೆಯಲ್ಲಾ. ನೀರಿಲ್ಲದಲ್ಲಿಗೆ, ನೀರಾವರಿಗೆ ವರದಾನವಾಗಿ ಬಂತು ಬೋರು ಮತ್ತು ಡ್ರಿಪ್.

ಆಳು ಸೇರಿಸಬೇಕಾಗಿಲ್ಲ, ಬೆವರು ಹರಿಸಬೇಕಾಗಿಲ್ಲ, ತಿಂಗಳುಗಟ್ಟಲೆ ಶ್ರಮವಹಿಸಬೇಕಾಗಿಲ್ಲ, ಕುಸಿವ ಭಯದಿಂದ ಕಟ್ಟಡ ಕಟ್ಟಬೇಕಾಗಿಲ್ಲ. ಅಷ್ಟಗಲ ಜಾಗ ಕಳೆದುಕೊಳ್ಳಬೇಕಾಗಿಲ್ಲ. ಇಂದು ಬಾವಿ ಬೇಕಾಗಿಲ್ಲ. ದಿನಾರ್ಧದೊಳಗೆ ಕೇವಲ ಆರಿಂಚು ಜಾಗದೊಳಗೆ ನೀರು ಕೀಲುವ ಸಾಹಸ. ಆ ಬೆರಗು ಹೆಚ್ಚು ದಿನ ಉಳಿಯಲಿಲ್ಲ, ಕರಿಯಪ್ಪ, ಮರಿಯಪ್ಪಾದಿ ಬಾಲರು ಹೊಟ್ಟು ಬೋರಿಗೆ ಬಿದ್ದು ಒದ್ದಾಡುವ ಸ್ಥಿತಿ ನಿರ್ಮಾಣ ವಾಯಿತು. ಬೋರಿಗಾಗಿ, ನೀರಿಗಾಗಿ ಸಾಲ ಮಾಡಿದವರು, ಬೆಳೆ ಕಳೆದುಕೊಂಡವರು ಮರ್ಯಾದೆಗಾಗಿ ಪ್ರಾಣ ಕಳೆದು ಕೊಳ್ಳುವುದು ದಿನದಿನದ ಸುದ್ದಿಯಾಯಿತು. ಇಷ್ಟಾದರೂ, ಹೊಳೆಯಲ್ಲಿಲ್ಲದ, ಕೆರೆಯಲ್ಲಿಲ್ಲದ, ಬಾವಿಯಲ್ಲಿಲ್ಲದ ನೀರು ಬೋರಿನಲ್ಲಿ ಇರುವುದಾದರೂ ಹೇಗೆ? ಎಂಬ ಪ್ರಶ್ನೆ ಯಾರಿಗೂ ಬಾರದಾಯಿತು. ಕೃಷಿಯಲ್ಲಿರುವ ಮೂಲಭೂತ ದೋಷಗಳ ಅರಿವು ಮೂಡದಾಯಿತು. ಹಾಗಾಗಿ ನೀರಿಲ್ಲದಲ್ಲಿ ನೀರಾವರಿಮಾಡಲು ಮತ್ತೆ ತಂತ್ರವಿದ್ಯೆಯ ಮೊರೆ ಅನಿವಾರ್ಯವಾಗಿದೆ.

ನಾನು ಗುರುತಿಸಿದಂತೆ ನೀರಿಲ್ಲದಲ್ಲಿಗೆ ನೀರು ಹರಿಸಲು ಸದ್ಯಕ್ಕೆ ಮೂರು ದಾರಿಗಳಿವೆ. ಯಾವುದನ್ನು ಬೇಕಾದರೂ ನೀವು ಅಳವಡಿಸಿಕೊಳ್ಳಬಹುದು. ಹೊಸ ಹೊಸದಾಗಿ ಬರುತ್ತಿರುವ ಅಂತಾರಾಷ್ಟ್ರೀಯ ಗುಣಮಟ್ಟದ ಅಂಗಡಿಗಳಿಗೆ ಎಷ್ಟಾದರು ಹಣ್ಣು ತರಕಾರಿಗಳನ್ನು, ಬೇಳೆಕಾಳುಗಳನ್ನು ಬೆಳೆದುಕೊಡಬಹುದು. ಹೀಗೆ ಮಾಡಿ ಯಶಸ್ವಿಯಾದವರಿದ್ದಾರೆ. ನೀರಿಲ್ಲದಲ್ಲಿಗೆ ನೀರಂತೂ ಬಂದಿದೆ. ಉಳಿದಂತೆ ಲಾಭ-ನಷ್ಟಗಳ ಬಗ್ಗೆ ನನ್ನಲ್ಲಿ ಕೇಳಬೇಡಿ.

೧. ಜಲ ಶೋಧಕರನ್ನು ಕರೆಸಿ ಅಕ್ಕಪಕ್ಕದ ಜಮೀನುಗಳಲ್ಲಿ ನೀರಿರುವುದನ್ನು ಖಾತ್ರಿಪಡಿಸಿ, ಆ ಜಾಗಗಳನ್ನು ಖರೀದಿ ಸುವುದು. ಆಮೇಲೆ ಅಲ್ಲಿ ಬೋರು ಹೊಡೆಯುವುದು. (ಇತ್ತೀಚೆಗೆ ನವನವೀನ, ಅತ್ಯಂತ ವೈಜ್ಞಾನಿಕ ಜಲಶೋಧನ ವಿಧಾನಗಳಿವೆ. ವಿಜ್ಞಾನದ ಸಾರ್ಥಕ, ಸಾಮಯಿಕ ಬಳಕೆಯಲ್ಲಿ ನಮ್ಮ ಅಭಿವೃದ್ಧಿ ಇದೆ ಎಂಬುದನ್ನು ಗಮನಿಸಿ.)

೨. ಸಾಕಷ್ಟು ಹಳ್ಳಕೊಳ್ಳಗಳು ಬತ್ತಿರಬಹುದು. ಆದರೆ ಇನ್ನೂ ನೀರು ಹರಿಯುವ ಹೊಳೆಗಳು ಅಲ್ಲೊಂದು ಇಲ್ಲೊಂದು ಇವೆ. ಅವನ್ನು ಪತ್ತೆ ಮಾಡಿ. ಅದು ಎಷ್ಟು ದೂರವಾದರೂ ಸರಿಯೇ! ಪಂಪು ಪೈಪು ಬಳಸಿ ಎಲ್ಲಿಂದೆಲ್ಲಿಗೆ ಬೇಕಾದರೂ ನೀರು ಸಾಗಿಸಬಹುದು. ಈ ವಿಧಾನದ ಮುಂದುವರಿಕೆಯಾಗಿ ಗಂಗಾ ಕಾವೇರಿ ಜೋಡಣೆ, ನೇತ್ರಾವತಿಯನ್ನು ಘಟ್ಟ ಹತ್ತಿಸುವ ಯೋಜನೆಗಳೆಲ್ಲ ಇವೆ.

೩. ಇವುಗಳಿಗಿಂತ ಸುಲಭವಾದ ವಿಧಾನ ಇಲ್ಲಿದೆ. ನಿಮ್ಮ ಜಮೀನಿನ ಮೇಲ್ಭಾಗದಲ್ಲೊಂದು ಭಾರೀ ಜಲಾಗಾರವನ್ನು (ಫೆರೋಸಿಮೆಂಟ್ ಟ್ಯಾಂಕ್) ಸ್ಥಾಪಿಸಿ, ನಿಮ್ಮ ಸೇವೆಗೆ ಸದಾ ಸಿದ್ಧರಾದವರು ಬಹಳ ಮಂದಿ ಇದ್ದಾರೆ. ಒಂದು ಕರೆ ಮಾಡಿದರೆ ಸಾಕು. ಎಲ್ಲಿಂದಲಾದರೂ ಟ್ಯಾಂಕರ್‌ಗಳಲ್ಲಿ ನೀರು ತುಂಬಿ ತರುತ್ತಾರೆ. ನಿಮ್ಮ ಟ್ಯಾಂಕಿಯಲ್ಲಿ ಈ ನೀರನ್ನು ತುಂಬಿದರೆ ಮತ್ತೆ ಎಲ್ಲವೂ ಅತ್ಯಂತ ಸರಳ, ಉಚಿತ. ವಿದ್ಯುತ್‌ರಹಿತವಾಗಿ ತೋಟದ ಮೂಲೆ ಮೂಲೆಗಳಿಗೆಲ್ಲ ಡ್ರಿಪ್ ಮಾಡಬಹುದು.

ಇವುಗಳ ಹೊರತಾಗಿ ಇನ್ನೊಂದು ಮಾರ್ಗವಿದೆ. ಇದು ಸ್ವಲ್ಪ ದುಬಾರಿಯಾಗಬಹುದೊ ಏನೊ?! ಆದರೂ ಪ್ರಯೋಗಿಸಲು ಅಡ್ಡಿ ಇಲ್ಲ. ಅದುವೇ ಮೋಡ ಬಿತ್ತನೆ, ಯಾವಾಗ ನೀರು ಬೇಕು ಎಂದರೆ ಆವಾಗ ಪ್ರಯತ್ನಿಸಬಹುದು.

ಹೀಗೆ ನೀರಾವರಿಗೆ ಉಳಿದಿರುವ ಅವಕಾಶಗಳು ನಿಮಗೆ ಇಷ್ಟವಾಗದೆ ಹೋದರೆ, ನಿಮ್ಮಲ್ಲಿ ಅಷ್ಟೊಂದು ಹಣ ಇಲ್ಲವಾದರೆ, ಇವೆಲ್ಲ ವಾಮ ಮಾರ್ಗವೆಂದೊ, ಕೆಂಪು ದಾರಿಯೆಂದೊ ನೀವು ತಿಳಿಯುವುದಾದರೆ, ಬನ್ನಿ ಹಸುರು ದಾರಿಗೆ, ಸಾಮ ಮಾರ್ಗಕ್ಕೆ, ಪ್ರಕೃತಿಯ ಮಡಿಲಿಗೆ. ಇಲ್ಲಿದೆ ವಿಪುಲ ಅವಕಾಶಗಳು.

ಅಂದ ಹಾಗೆ ಈ ಮಾರ್ಗದಲ್ಲಿ ನೀರಾವರಿ ಇರುವುದಿಲ್ಲ. ಇಲ್ಲಿ ನೀರು ಹರಿಯುವುದಿಲ್ಲ (ನೀರಿಲ್ಲದಲ್ಲಿ, ಹಣವಿಲ್ಲದಲ್ಲಿ ನೀರು ಹರಿಸುವುದಾದರೂ ಹೇಗೆ?) ಆದರೆ ನೀರಾವರಿಯ ಪರಿಣಾಮ ಇರುತ್ತದೆ. ನೀರಾವರಿಗಳೆಲ್ಲೆಲ್ಲಾ ಪರಮ ಶ್ರೇಷ್ಠವಾದ ಮಳೆಯ ಪ್ರಭಾವ ವರ್ಷಪೂರ್ತಿ ಇರುವಂತೆ ನೋಡಿಕೊಳ್ಳಲಾಗುತ್ತದೆ. ಋತುಧರ್ಮ ಮೀರಿದ ಅತಿ ನೀರಾವರಿ ಕಾರಣವಾಗಿ ಬರುವ ರೋಗರುಜಿನಗಳಿಂದ ಮುಕ್ತಿ ದೊರಕುತ್ತದೆ. ಖರ್ಚಿಲ್ಲದೆ ಕೃಷಿ ನಡೆಯುತ್ತದೆ.

೧. **ಮರಗಳಿಗೆ ಮಹತ್ವ:** ನೀರಿಲ್ಲದೆ ಕಬ್ಬು ಒಣಗಿದ್ದನ್ನು, ಬಾಳೆ ಬಾಡಿದ್ದನ್ನು, ಬೀನ್ಸ್ ಸುಟ್ಟಿದ್ದನ್ನು ನೀವು ನೋಡಿರಬಹುದು. ಆದರೆ ಮಾವು, ಬೇವು, ನೇರಳೆ, ಪೇರಳೆ, ಹಲಸು, ಬೇಲಗಳು ಒಣಗಿದ್ದನ್ನು ನೀವೆಂದಾದರೂ ನೋಡಿದ್ದೀರಾ? ನೀರಿಲ್ಲದೆ, ನೀರಾವರಿ ಇಲ್ಲದೆ ಬೆಳೆಯುವ ಮರಗಿಡಗಳ ಸಾಂಗತ್ಯದಲ್ಲಿ ಕೃಷಿ ಮಾಡುವುದರಿಂದ ಮಹತ್ವವಾದುದನ್ನು ಸಾಧಿಸಲು ಸಾಧ್ಯ.

೨. **ತಗ್ಗು ದಿನ್ನೆಗಳನ್ನು ಗಮನಿಸುವುದು ಅಗತ್ಯ :** ತಗ್ಗಿನಲ್ಲಿ, ಧಾರಾಳ ನೀರಿರುವಲ್ಲಿ ಭತ್ತ, ಕಬ್ಬುಗಳನ್ನು ಬೆಳೆಯುವ ಹಾಗೆಯೇ ನೀರಿಲ್ಲದ ಗುಡ್ಡಗಳಲ್ಲಿ ನೀರು ಬೇಡದ ಸೀತಾಫಲ, ದಾಳಿಂಬೆಗಳನ್ನು ಬೆಳೆಯುವ ಜಾಣತನವನ್ನು ನಾವು ಪ್ರದರ್ಶಿಸಬೇಕು.

೩. **ಅವರಿವರಲ್ಲಿ ಭೇದ ಬೇಡ. ಆದರೆ ಋತುಭೇದ ಬೇಕು :** ನೀವು ಬೀನ್ಸ್, ಕೋಸು ಸುಟ್ಟದ್ದನ್ನು ನೋಡಿರಬಹುದು. ಆದರೆ ಅದು ಯಾವ ಕಾಲದಲ್ಲಿ ಎಂದು ನೋಡಿದ್ದೀರಾ? ಕಾಲಾಕಾಲ ವಿವೇಚನೆ ಇಲ್ಲದೆ ಮಳೆಗಾಲದ ಬೆಳೆಯನ್ನು ಬೇಸಿಗೆಯಲ್ಲಿ ಬೆಳೆಯಲು ಪ್ರಯತ್ನಿಸಿದ ಪರಿಣಾಮವನ್ನು ಅನುಭವಿಸಲೇಬೇಕಾಗುವುದು. ಉಪ್ಪು ತಿಂದವನು ನೀರು ಕುಡಿಯಲೇಬೇಕಾಗುವುದು. ಹಾಗಲ್ಲವಾದರೆ ಋತು ಬದಲಾದಂತೆ ರುಚಿಯಲ್ಲೂ ಬದಲಾಗಬೇಕಾಗುವುದು.

೪. **ಸ್ಥಳೀಯ ಕಳೆಗಳಿಗೆ ಗುರುತ್ವ:** ಅದೆಂಥಾ ಬೇಸಿಗೆಯೇ ಆಗಿರಲಿ, ಬೀನ್ಸ್ ಕೋಸುಗಳು ಸುಟ್ಟು ಹೋಗಿರಲಿ, ನಿಮ್ಮೂರ ಮಂಟಿಯ (ಗುಡ್ಡೆಯ) ಮೇಲೊಮ್ಮೆ ಹೋಗಿ ನೋಡಿ. ಯಾವುದೇ ಕೃಷಿ ಮಾಡದಿರುವಲ್ಲಿ ಇರುವ ಹಸುರನ್ನು ಗಮನಿಸಿ. ನೀರು ಗೊಬ್ಬರಗಳಿಲ್ಲದೆ, ಉಳುಮೆ ಅಗೆತಗಳಿಲ್ಲದೆ, ಔಷಧಿ ಉಪಚಾರಗಳಿಲ್ಲದೆ ಬೆಳೆದಿರಬಹುದಾದ ಕಳೆಗಳನ್ನು ಗಮನಿಸಿ. ನಿಮ್ಮ ಕೃಷಿ ಭೂಮಿಗೆ ಈ ಕಳೆಗಳನ್ನು ಮೂಲ ಬಂಡವಾಳವಾಗಿ ಆಹ್ವಾನಿಸಿ. ಅವುಗಳ ಸಂಗದಲ್ಲಿ ನಿಮ್ಮ ಬೆಳೆಗಳಿಗೆ ಕಳೆ ತುಂಬುವುದು ಬಹಳ ಸುಲಭದ ದಾರಿ. ಆದರೆ ಈ ದಾರಿಯಲ್ಲಿ ಕಾಲ್ನಡಿಗೆ ಮಾತ್ರ ಸಾಧ್ಯ. ವಾಹನ ಸಂಚಾರ ಅಸಾಧ್ಯ. ಆದರೂ ಇಲ್ಲಿ ವಾಹನಗಳಿಗಿಂತ ವೇಗವಾಗಿ ನಡೆಯುವುದು ಸಾಧ್ಯ. (ಬೆಂಗಳೂರಿನಂಥ ಯಾವುದೇ ಅಭಿವೃದ್ಧಿ ಹೊಂದಿದ ಪೇಟೆಗಳನ್ನು ಗಮನಿಸಿದರೆ ಈ ಮಾತು ಅರ್ಥವಾದೀತು. ವಾಹನಗಳಿಗಿಂತ ವೇಗವಾಗಿ ನಡಿಯುವುದು ಹೇಗೆಂದು ತಿಳಿದೀತು!)

೫. **ಕಟ್ಟೆ ತೊಟ್ಟಿಗಳ - ಕಬ್ಬಿಣ, ಕಾಂಕ್ರೀಟುಗಳಿಲ್ಲದೆ:** ಇದು ಬಹಳ ಸುಲಭ. ಈಗಾಗಲೇ ಸೂಚಿಸಿದಂತೆ ಸ್ಥಳೀಯ ಕಳೆಗಳನ್ನು ಆಳವಾಗಿ ಬೇರೂರುವ ಮರಗಿಡಗಳನ್ನು ನೆಡುತ್ತಾ ಹೋಗಿ. ಕೀಳದೆ ಬಿಡುತ್ತಾ ಹೋಗಿ.

ಇವೆಲ್ಲವೂ ಕಟ್ಟಡಗಳಿಲ್ಲದ ತೊಟ್ಟಿಗಳಾಗಿಬಿಡುತ್ತವೆ. ಟ್ಯಾಂಕರ್ ನೀರಿಲ್ಲದೆ ತಾವಾಗಿ ತುಂಬಿಬಿಡುತ್ತವೆ. ನಾವು ನೀರು ಕಾಣದಲ್ಲಿ ತಾವು ಆರ್ದ್ರತೆಯನ್ನು ಸೃಷ್ಟಿಸುತ್ತವೆ. ನಾವು ಬದುಕಲಾಗದಲ್ಲಿ ತಾವು ಬದುಕಿ ಸಾವಿರ ಸಾವಿರ ಜೀವಿಗಳಿಗೆ ಬದುಕು ಕೊಡುತ್ತವೆ. ಒಂದೊಂದು ಮರಗಿಡಗಳಲ್ಲೂ ಮುಕ್ಕಾಲಂಶ ನೀರು ತುಂಬಿರುತ್ತದೆ. ನೀರಿಲ್ಲದಲ್ಲಿ, ನೀರಾವರಿ ಇಲ್ಲದಲ್ಲಿ ಮರಗಿಡಗಳು ಇರುತ್ತವೆಂದರೆ ನೀರತೊಟ್ಟಿಗಳೇ ಇದ್ದಂತಾಗುತ್ತದೆ.

**೬. ಮುಚ್ಚಿಗೆ ಮಾಡೀತು ಎಲ್ಲವನ್ನೂ ಬೆಚ್ಚಗೆ-ಹಚ್ಚಗೆ :** ಮರಗಿಡ ಬಳ್ಳಿಗಳು ಹೆಚ್ಚಿದ ಹಾಗೆ, ಅವುಗಳು ಉದುರಿಸುವ ತರಗೆಲೆಗಳು ಮಣ್ಣನ್ನು ಮುಚ್ಚಿದ ಹಾಗೆ, ನೀರಾವಿಯಾಗುವುದು, ಭೂಮಿ ಕಾವಾಗುವುದು, ನಿಧಾನವಾಗುತ್ತಾ ಹೋಗುತ್ತದೆ. ಮಣ್ಣು ತಂಪಾಗುತ್ತದೆ. ಅಷ್ಟರಲ್ಲಿ ಬಂದೇಬರುತ್ತದೆ ಮತ್ತೆ ಮಳೆಗಾಲ. ಪೈಪಿಲ್ಲದೆ, ಪಂಪಿಲ್ಲದೆ, ತೂತು ಬಾವಿ ಇಲ್ಲದೆ, ಕಬ್ಬು ಬಾಳೆಗಳನ್ನು ಕೂಡ ಬೆಳೆಯುವುದು ಪ್ರಕೃತಿಯಲ್ಲಿ ಸಾಧ್ಯವಿದೆ.

ಆದರೆ ಪ್ರಕೃತ ವಿದ್ಯಾಭ್ಯಾಸ ಪದ್ಧತಿಯಲ್ಲಿ ಮಾನವ ಮನಸ್ಸಿನೊಳಗೆ ಹಸುರನ್ನು ಬಿತ್ತುವುದು ಸಾಧ್ಯವಿಲ್ಲದಷ್ಟು ಬರಡಾಗಿದೆ. ಪರಿಣಾಮವಾಗಿ ಭೂಮಿ ಉರಿಯುತ್ತಿದೆ. ಕೆರೆಕಟ್ಟೆಗಳು ಬಿರಿಯುತ್ತಿವೆ. (ಇಲ್ಲಿ ಮಂಡಿಸುತ್ತಿರುವ ವಿಚಾರಗಳು ಕೇವಲ ಕಾಲ್ಪನಿಕ ಕಥೆಯಲ್ಲ. ತರ್ಕ ಸೌಂದರ್ಯವಲ್ಲ. ಇದು ನಮ್ಮ ತೋಟದಲ್ಲಿ ನಡೆದಿರುವ ಯಶಸ್ಸಿನ ಕಥೆ ಎಂಬುದು ನಿಮ್ಮ ಗಮನದಲ್ಲಿರಲಿ.)




**೭. ನೀರು ಜಿನುಗುವ ಮರಗಿಡ ಬಳ್ಳಿಗಳು :** ಸೃಷ್ಟಿಯ ಸುಸಾಂಗತ್ಯಕ್ಕೆ, ನೀರಿಲ್ಲದಲ್ಲಿ ನೀರು ಕಾಣುವುದಕ್ಕೆ, ಮರು ಮಳೆಗಾಲದವರೆಗೆ ಮಳೆ ನೀರು ಲಭ್ಯವಾಗುವುದಕ್ಕೆ, ಎಲ್ಲ ಸಸ್ಯಗಳೂ ಮುಖ್ಯವೆ. ಆದರೆ ನೀರುಳಿಸುವ, ನೀರುಣಿಸುವ ದೃಷ್ಟಿಯಿಂದ ಹೆಚ್ಚಿನ ಕೊಡುಗೆಯಾಗಬಲ್ಲ ಸಾಕಷ್ಟು ವಿಶೇಷ ಸಸ್ಯಗಳಿವೆ. ಅವುಗಳನ್ನು ಕತ್ತರಿಸಿದಾಗ, ತೂತು ಕೊರೆದಾಗ, ಬೇರು ಅಗೆದಾಗ ಅಥವಾ ಅಮುಕಿದಾಗ ನೀರನ್ನು ನೀರಾಗಿಯೇ ಸುರಿಸುತ್ತವೆ. ನೀರ ಸೀಸೆಗಳಾಗಿ ಬಾಯಾರಿದವರಿಗೆ ಒದಗಿಬರುತ್ತವೆ. ಇಂಥ ಸಸ್ಯಗಳನ್ನು ನಮ್ಮ ಕೃಷಿ ಭೂಮಿಯಲ್ಲಿ ಸೇರ್ಪಡೆಗೊಳಿಸುವುದರಿಂದ ಧನಾತ್ಮಕ ಪರಿವರ್ತನೆಗಳನ್ನು ತ್ವರೆಯಾಗಿ ಕಾಣಬಹುದು.

**೮. ಒಡ್ಡು ಕಟ್ಟೆಗಳು ಮತ್ತು ಇಂಗು ಗುಂಡಿಗಳು :** ಮೇಲಿನ ಎಲ್ಲ ಪ್ರಾಕೃತಿಕ ಪರಿವರ್ತನೆಯ ಜೊತೆಗೆ ಮಳೆನೀರನ್ನು ತಡೆಹಿಡಿಯುವಂತೆ, ಮಣ್ಣು ಕುಡಿಯುವಂತೆ, ಜಾಗಕ್ಕೆ ಅನುಗುಣವಾಗಿ ಕಟ್ಟೆಗಳನ್ನೋ ಗುಂಡಿಗಳನ್ನೋ ಮಾಡುವುದರಿಂದ ಪ್ರಯೋಜನ ವಿದೆ. ಮಣ್ಣು ಕರಗದಂತೆ, ಲಾವಂಚದಂಥಾ ಸಸ್ಯಗಳನ್ನು ನೆಡುವ ಅಗತ್ಯವಿದೆ.

**೯. ಇಲಿಗಳು ಮತ್ತು ಗೆಡ್ಡೆಗಳು :** ಇವು ಭೂಮಿಯ ದಾಹ ಇಂಗಿಸುವಲ್ಲಿ ಬಹುವಾಗಿ ಸಹಕರಿಸುತ್ತವೆ. ಆಹಾರವಾಗಿ, ಔಷಧವಾಗಿ ಉಪಯುಕ್ತವಾಗಿರುವ ಬಲು ವಿಧ ಗೆಡ್ಡೆಗಳಿವೆ. ಈ ಗೆಡ್ಡೆಗಳು ಭೂಮಿಯನ್ನು ಸ್ವಾಭಾವಿಕವಾಗಿ, ಅಂತರ್ಗತವಾಗಿ ಉಳುಮೆ ಮಾಡುತ್ತವೆ. ಆ ಮೂಲಕ ಭೂಮಿಗೆ ನೀರು ಕುಡಿಯುವ, ನೀರು ಹಿಡಿದಿಡುವ ಸಾಮರ್ಥ್ಯವನ್ನು ದಯಪಾಲಿಸುತ್ತವೆ. ಇಂಥ ಗೆಡ್ಡೆಗಳನ್ನು ತಿನ್ನುವುದಕ್ಕಾಗಿ ಮಣ್ಣೆಕ್ಕುವ ಇಲಿಗಳು ನಿರ್ಮಿಸುವ ಬಿಲಗಳು ಮಳೆ ನೀರನ್ನು ಅಂತರ್ಜಲವಾಗಿ ಮಾರ್ಪಾಡಿಸುವ ರಾಜಮಾರ್ಗಗಳಾಗಿವೆ.

**೧೦. ನೇರ ಬಿತ್ತನೆ :** ಪ್ರಕೃತಿ ಅಸಮರ್ಥ ಎಂದು ಕೃಷಿ ವಿಜ್ಞಾನ ತಿಳಿದಿದೆ. ಹಾಗಾಗಿ ಕೃಷಿಯ ಉದ್ಧಾರಕ್ಕಾಗಿ ಪ್ರಯೋಗಗಳನ್ನು ನಡೆಸಲಾಗುತ್ತದೆ. ಗಿಡಗಳನ್ನು ನರ್ಸರಿ ಮಾಡಿ, ಶುಶ್ರೂಷೆ ಮಾಡಿ ನೆಟ್ಟು ಬೆಳೆಸಲಾಗುತ್ತದೆ. ಆದರೆ ವಾಸ್ತವ ಹಾಗಿಲ್ಲ. ಇವೆಲ್ಲ ಬೇಕಾಗಿಲ್ಲ. ಮಳೆಗಾಲವನ್ನು ನಿರೀಕ್ಷಿಸಿ ಕಾಲವೆಣಿಸುತ್ತಿರುವ ಬೀಜಗಳನ್ನು (ಹಸುರಿನ ಸಾಂದ್ರ ಕೋಶಗಳನ್ನು) ಬೇಕಾದಲ್ಲಿ ಬಿತ್ತಿದರಾಯಿತು. ಮುಂಬರುವ ಬೇಸಿಗೆಗೆ ಬೇಕಾದ ತಯಾರಿಯನ್ನು ಅವೇ ಮಾಡಿಬಿಡುತ್ತವೆ. ಎಲೆಯ ಕಟ್ಟಡಕ್ಕಿಂತ ಮೊದಲು ಬೇರಿನ ಪಂಚಾಂಗವನ್ನು ಅವಶ್ಯಕತೆಗೆ ಅನುಗುಣವಾಗಿ ಎಷ್ಟು ಬೇಕೋ ಅಷ್ಟು ಆಳದ ವರೆಗೆ ಭದ್ರಪಡಿಸಿಕೊಳ್ಳುತ್ತವೆ. ಇದಕ್ಕೆ ವಿಲೋಮವಾಗಿ ಬಂಧನದ ತೊಟ್ಟಿಯೊಳಗೆ ಚಿರುಟಿ ಹೋದ ಬೇರುಗಳಿಗೆ (ನರ್ಸರಿ ಗಿಡಗಳಿಗೆ) ಮಾತ್ರ ನೀರಾವರಿ ಬೇಕಾಗುತ್ತದೆ.

**೧೧. ಆಹಾರದಲ್ಲಿ ಬದಲಾವಣೆ :** ಕಾಪಿಡಲು ಸಾಧ್ಯವಾಗುವ ಕಾರಣ ನಮ್ಮ ಆಹಾರದಲ್ಲಿ ಕಾಳುಗಳಿಗೆ ವಿಶೇಷ ಸ್ಥಾನವಿದೆ. ಆದರೆ ಕಾಯಬೇಕಾದ ಪ್ರಕೃತಿ ಕೊಲ್ಲುವ ರೀತಿಯಲ್ಲಿ ಕಾಯುತ್ತಿರುವ (ಬಿಸಿಯಾಗುತ್ತಿರುವ) ಇಂದಿನ ಸಂದರ್ಭದಲ್ಲಿ ನಾವು ತಿನ್ನುವ ಕಾಳು ಯಾವುದಿರಬೇಕೆಂದು ನಿರ್ಧರಿಸಲೇಬೇಕಾದ ಕಾಲ ಬಂದಿದೆ. ಅತ್ಯಧಿಕ ನೀರು ಬೇಡುವ ಅಕ್ಕಿಯಿಂದ ನಾವು ರಾಗಿ ಜೋಳಗಳ ಕಡೆಗೆ, ಒಣ ಧಾನ್ಯಗಳೆಡೆಗೆ ಸ್ವಲ್ಪವಾದರೂ ಬದಲಾಗಲೇಬೇಕಾಗಿದೆ.

ಆಹಾರ ಭದ್ರತೆಯ ದೃಷ್ಟಿಯಿಂದ ಉತ್ತು ಬಿತ್ತಿ ಕಾಳುಗಳನ್ನು ಬೆಳೆಯುವುದು ಒಂದಷ್ಟು ಅವಶ್ಯಕವಾದೀತು. ಆದರೆ ಹಣ್ಣು, ಸೊಪ್ಪು, ಗೆಡ್ಡೆ, ತರಕಾರಿಗಳನ್ನು ನಾವು ಕಷ್ಟಪಟ್ಟು ಬೆಳೆದು ತಿನ್ನುವ, ಅದಕ್ಕಾಗಿ ಬೋರು ನೀರು ಬಸಿಯುವ ಅವಶ್ಯಕತೆ ಈ ಭೂಮಿಯಲ್ಲಿ ಖಂಡಿತ ಇಲ್ಲ. (ಚಂದ್ರನಲ್ಲೋ ಮಂಗಳನಲ್ಲೋ ಇರಬಹುದೋ ಏನೋ!) ಇಲ್ಲಿ ಅವೆಲ್ಲವೂ ತಾನಾಗಿ ಬೆಳೆಯುತ್ತವೆ. (ಮನುಷ್ಯನಿಗಿಂತ ಎಷ್ಟೋ ಮೊದಲು ಇವೆಲ್ಲ ತಾವಾಗಿ ಬೆಳೆದುದರಿಂದಲೇ ಇಲ್ಲಿ ನಾವಿಂದು ಇರುವುದು ಸಾಧ್ಯವಾಗಿದೆ.) ಆದರೆ ಅವು ಆ್ಯಪಲ್, ದ್ರಾಕ್ಷಿ, ಕೋಸು, ಪಾಲಾಕು, ಕ್ಯಾರೆಟ್, ಬಟಾಟೆ, ಬೀನ್ಸ್ ಬದನೆಗಳಿಗೆ ಸೀಮಿತ ಅಲ್ಲ. ತಾನೇ ತಾನಾಗಿ ಬೆಳೆಯುವ ಸಾವಿರ ಸಾವಿರ ಸಸ್ಯಗಳಲ್ಲಿರುವ ಆಹಾರದ ಗುಣಗಳನ್ನು ಗುರುತಿಸುವ ಕಣ್ಣು ನಮಗೆ ಬೇಕು, ನಮ್ಮ ಸಮೀಪ ದೃಷ್ಟಿ ದೋಷಗಳನ್ನು ಕಳೆಯುವ ಕನ್ನಡಕಗಳು ನಮಗಿಂದು ಬೇಕು. ಈ ಕುರಿತು ಪ್ರಯತ್ನಿಸದಿದ್ದರೆ ಮತ್ತೆ ಮತ್ತೆ ಮುಗ್ಗರಿಸುವುದು ಖಂಡಿತ. (ಅದೆಲ್ಲಿ ಬೀಳುತ್ತೇವೋ ? ಬಿದ್ದ ಮೇಲೆಯೇ ಗೊತ್ತಾಗಬೇಕಷ್ಟೆ.)

**೧೨. ಹನಿ ಹನಿ ಬೆವರು - ಥಳ ಥಳ ಹಸುರು :** ನೀರಾವರಿಯ ವಿವಿಧ ಪ್ರಕಾರಗಳು ನಿಮಗೆ ಗೊತ್ತು.

(ಅ) ಪಾತಿಗಳಲ್ಲಿ ನೀರು ತುಂಬಿಸುವುದು
(ಆ) ಕಾಲುವೆಗಳಲ್ಲಿ ಹಾಯಿಸುವುದು
(ಇ) ಪೈಪುಗಳಲ್ಲಿ ಹಿಡಿಯುವುದು
(ಈ) ತುಂತುರು ನೀರಾವರಿ (ಸ್ಪ್ರಿಂಕ್ಲರ್)
(ಉ) ಹನಿ ನೀರಾವರಿ

ಕೃಷಿಯ ದೋಷಗಳು ಜಾಸ್ತಿಯಾದ ಹಾಗೆ, ನೀರಾವರಿಯ ಅವಶ್ಯಕತೆ ಹೆಚ್ಚಿದ ಹಾಗೆ, ಎಲ್ಲೆಲ್ಲೂ ನೀರ ಕೊರತೆ ತಲೆದೋರಿದ ಹಾಗೆ ನೀರಾವರಿಯಲ್ಲಿ ಬದಲಾವಣೆಗಳಾದವು. ನೀರುಳಿತಾಯದ ಯೋಚನೆ ಹುಟ್ಟಿತು. ಹಾಯಿ ನೀರಿಗೆ ಬದಲಾಗಿ ಹನಿ ನೀರು ರಂಗ ಪ್ರವೇಶ ಮಾಡಿತು.

ಆದರೂ ನೀರಿಲ್ಲ. ಎಲ್ಲೆಲ್ಲೂ ಹಾಹಾಕಾರ. ಇದಕ್ಕೇನು ಪರಿಹಾರ ?

ಹನಿ ನೀರಾವರಿಯಲ್ಲಿ ನಾವು ಇನ್ನೊಂದು ಹೆಜ್ಜೆ ಮುಂದೆ ಹೋಗಬೇಕು. ನಮ್ಮ ಬೆವರ ಹನಿ ನಮ್ಮ ಭೂಮಿಯಲ್ಲಿ ಜಿನುಗಬೇಕು. ಸಂಪನ್ಮೂಲಗಳನ್ನು ನಾಶ ಮಾಡುತ್ತಾ ಪ್ರದೋಷಣೆಯನ್ನುಂಟುಮಾಡುತ್ತಾ ವೈಯಕ್ತಿಕ, ಸಾಮಾಜಿಕ ಹಾಗಲ್ಲದೆ ಪ್ರಾಕೃತಿಕ ಆರೋಗ್ಯಗಳನ್ನು ಕೆಡಿಸುತ್ತಾ ಮುಂದುವರಿದ ಯಂತ್ರ ತಂತ್ರಗಳ ಬದಲಾಗಿ ಒಂದಷ್ಟಾದರೂ ದೇಹ ದುಡಿಯುವುದು ಸಾಧ್ಯವಾದರೆ, ಬೆವರು ಹನಿಸುವುದು ಸಾಧ್ಯವಾದರೆ, ಕೆಲಸ ಮಾಡಿದ ಅನುಭವದ ಆಧಾರದಲ್ಲಿ ಅನ್ನಾಹಾರಗಳನ್ನು ಜ್ಞಾನ ವಿಜ್ಞಾನಗಳನ್ನು ಪಡೆಯುವುದು ಸಾಧ್ಯವಾದರೆ –

ಆಗ ಸಾಧ್ಯವಾದೀತು ನೀರಿಲ್ಲದಲ್ಲಿ ನೀರಾವರಿ. ಇಲ್ಲವಾದರೆ ಎಲ್ಲವೂ ಹೊತ್ತಿ ಉರಿದೀತು. ಆಗ ಎಲ್ಲೆಲ್ಲೂ ಬೆಳಕಿರುತ್ತದೆ. ಆದರೆ ನೋಡಲು, ಓದಲು ಏನೂ ಇರುವುದಿಲ್ಲ.

ಎ. ಪಿ. ಚಂದ್ರಶೇಖರ
'ಇಂದ್ರಪ್ರಸ್ಥ', ಜೀವಧಾರಕ ಸಸ್ಯವಾಟೀ, ಕಳಲವಾಡಿ ಗ್ರಾಮ, ಅಂಚೆ : ಉದ್ಬೂರು, ಮೈಸೂರು - ೮

# ಬೆಳಕಿಲ್ಲದ ಇವರ ಬಾಳು

ಎಂ. ವಿ. ಭಟ್

ನಮ್ಮ ದೇಶದಲ್ಲಿಂದು ಅತ್ಯಂತ ಹೀನಾವಸ್ಥೆಗೆ, ಅಸಹಾಯಕತೆಗೆ ಮತ್ತು ಚಿತ್ರಹಿಂಸೆಗೆ ಬಲಿಯಾಗುತ್ತಿರುವ ಸಮುದಾಯವೆಂದರೆ ಸ್ತ್ರೀ ಸಮುದಾಯ. ಸ್ವಾತಂತ್ರ್ಯ ಲಭಿಸಿ ೬೦ ವರ್ಷಕ್ಕೆ ಹತ್ತಿರವಾಗುತ್ತಾ ಬಂದರೂ ಈ ಸಮಾಜದ ಸ್ಥಾನಮಾನ ಏರಬೇಕಾದಷ್ಟು ಎತ್ತರಕ್ಕೆ ಇನ್ನೂ ಏರಲಿಲ್ಲ. ಸ್ತ್ರೀಯರು ಬಾಳಿನಲ್ಲಿ ಎದುರಿಸುತ್ತಿರುವ ಅನೇಕ ಸಮಸ್ಯೆಗಳಿಗೆ, ನಷ್ಟಗಳಿಗೆ ಇನ್ನೂ ಕೊನೆ ಇಲ್ಲದಾಗಿದೆ. ಒಂದಲ್ಲ ಒಂದು ಕಾರಣಕ್ಕೆ ಅವರು ಪುರುಷರ ತುಳಿತಕ್ಕೆ, ಅವರು ನೀಡುವ ಯಾತನೆಗೆ ಬಲಿಯಾಗುತ್ತಲೇ ಇದ್ದಾರೆ.

ಭ್ರೂಣಹತ್ಯೆಯಿಂದ ಆಕೆಯ ಯಾತನೆ ಆರಂಭವಾದರೆ ಮರಣಪರ್ಯಂತ ಆ ಯಾತನೆ ನಡೆಯುತ್ತಲೇ ಇರುತ್ತದೆ. ಎಲ್ಲರೂ ಬಯಸುವುದು ಗಂಡು ಮಗುವನ್ನೇ. ವೈದ್ಯಕೀಯ ಪರೀಕ್ಷೆಯಿಂದ ಗರ್ಭದಲ್ಲಿರುವ ಮಗು 'ಹೆಣ್ಣು' ಎಂದು ಗೊತ್ತಾದರೆ ಸಾಕು, ಗಂಡನ ಹಾಗೂ ಅತ್ತೆ ಮಾವಂದಿರ ಒತ್ತಡಕ್ಕೆ ಬಲಿಯಾಗಿ ಗರ್ಭಪಾತಕ್ಕೆ ಆಕೆ ಒಪ್ಪಿಗೆ ನೀಡಲೇಬೇಕಾಗುತ್ತದೆ.

ಭ್ರೂಣಹತ್ಯೆ ತಡೆಗೆ ಇಂದು ಬೇಕಾದಷ್ಟು ಕಾನೂನುಗಳಿದ್ದರೂ, ಅದೊಂದು ಮಹಾಪರಾಧವೆಂದು ಕಾನೂನು ಸಾರುತ್ತಿದ್ದರೂ ಅದರಿಂದ ನುಣುಚಿಕೊಳ್ಳಲು ಬೇಕಾದಷ್ಟು ದಾರಿಗಳಿವೆ. ಇನ್ನು ಗರ್ಭದಲ್ಲಿರುವ ಮಗು ಹೆಣ್ಣೆಂಬ ಕಾರಣಕ್ಕಲ್ಲದೆ ಅವಿವಾಹಿತ ಯುವತಿಯರ ಗರ್ಭಪಾತ ದೊಡ್ಡ ಪ್ರಮಾಣದಲ್ಲಿ ನಡೆಯುತ್ತಿರುವುದು ಇಂದು ಗುಟ್ಟಾಗಿ ಉಳಿದಿಲ್ಲ. ಇಲ್ಲಿಯೂ ಸ್ತ್ರೀಯೇ ಬಲಿಪಶು. ಪುರುಷ ಮೃಗ ಪಿಕ್ಚರ್‌ಗೆ ಬರುವುದೇ ಇಲ್ಲ.

ಹಳ್ಳಿಗಳಲ್ಲಿ ಅಶಿಕ್ಷಿತ ಸೂಲಗಿತ್ತಿಯವರ ಮೂಲಕ 'ಮರ್ಯಾದೆ' ಉಳಿಸಿಕೊಳ್ಳುವುದಕ್ಕಾಗಿ ಅಥವಾ ಇನ್ನಿತರ ಕಾರಣಕ್ಕಾಗಿ ಗರ್ಭಪಾತ ಮಾಡಿಸಿಕೊಳ್ಳುವ ಸ್ತ್ರೀಯರ ಸಂಖ್ಯೆ ಬಲು ದೊಡ್ಡದು. ಹೀಗೆ ಗರ್ಭಪಾತಕ್ಕೆ ಒಳಗಾಗುವ ಸ್ತ್ರೀಯರಲ್ಲಿ ಶೇ.೧೦ ಮಂದಿ ಗರ್ಭಪಾತವಾದ ಮೇಲೆ ರಕ್ತಸ್ರಾವದಿಂದ ಅಥವಾ ಆನಂತರ ತಗಲುವ ಸೋಂಕಿನಿಂದ ಅಸುನೀಗುತ್ತಿದ್ದಾರೆ. ವರದಕ್ಷಿಣೆಯ ಪಿಡುಗನ್ನು ತಪ್ಪಿಸಿಕೊಳ್ಳುವುದಕ್ಕಾಗಿ ಬೆಳೆದ ಹುಡುಗಿಯರನ್ನು ಕೊಂದುಬಿಡುವ ಅಥವಾ ದಳ್ಳಾಳಿಗಳ ಮೂಲಕ ವೇಶ್ಯಾವೃತ್ತಿಗೆ ತಳ್ಳಿಬಿಡುವ ಜನರೂ ನಮ್ಮಲ್ಲಿದ್ದಾರೆ. ದೊಡ್ಡ ಮೊತ್ತಕ್ಕಾಗಿ ಮುದಿ ವಯಸ್ಸಿನ ಅರಬರಿಗೆ ಮಾರಾಟವಾಗುತ್ತಿರುವುದು ಯುವತಿಯರ ದಾರುಣ ಕತೆಯೇ ಸರಿ.

ವಿಕೃತ ಕಾಮಿಗಳು ರೇಪ್ ಮೊದಲಾದ ಅತ್ಯಾಚಾರಗಳನ್ನೆಸಗಿ ಆನಂತರ ಅದರ ದುಷ್ಕೃತ್ಯಕ್ಕೆ ತುತ್ತಾದವರನ್ನು ಒಂದು ಪೊದೆಗೋ, ಚರಂಡಿಗೋ, ಕೆರೆ ಕುಂಟೆಗೋ ಎಸೆದು ಪರಾರಿಯಾಗುವವರ ಸಂಖ್ಯೆ ದಿನದಿಂದ ದಿನಕ್ಕೆ ಹೆಚ್ಚುತ್ತಾ ಹೋಗುತ್ತಿದೆ. ಇಂತಹ ಘೋರ ಅಪರಾಧ ಎಸಗಿದವರಲ್ಲಿ ಒಬ್ಬನಿಗೂ ಶಿಕ್ಷೆಯಾಗುವುದಿಲ್ಲ. ಲೈಂಗಿಕ ಕ್ರಿಯೆಗೆ ಒಪ್ಪದ ಯುವತಿಯರ ಮುಖಕ್ಕೆ ಆ್ಯಸಿಡ್ ಎರಚಿ ಅವರನ್ನು ಆಜನ್ಮ ಕುರೂಪಿಗಳನ್ನಾಗಿ ಮಾಡುವ ಪುರುಷ ಪುಂಗವರು ಅಸಂಖ್ಯಾತ ಸಂಖ್ಯೆಯಲ್ಲಿ ಇದ್ದಾರೆ. ಇಂತಹ ದುಷ್ಟರಲ್ಲಿ ಎಷ್ಟು ಮಂದಿಗೆ ಶಿಕ್ಷೆಯಾಗುತ್ತಿದೆ? ಒಂದು ವೇಳೆ ಪೊಲೀಸರ ಕೈಗೆ ಪ್ರಭಾವಶಾಲಿ ಅಪರಾಧಿಯೊಬ್ಬ ಸಿಕ್ಕಿಬಿದ್ದರೆ ಕೂಡಲೇ ಅವನಿಗೆ ಹೃದಯಬೇನೆ ಪ್ರಾರಂಭವಾಗಿ ಆಸ್ಪತ್ರೆ ಸೇರಿಬಿಡುತ್ತಾನೆ. ಅಲ್ಲಿ ಮತ್ತೆ ಅವನಿಗೆ ರಾಜೋಪಚಾರ! ಪೊಲೀಸರು ಹತ್ತಿರ ಸುಳಿಯುವಂತಿಲ್ಲ. ಇತ್ತೀಚೆಗೆ ಸ್ಕೂಲಿಗೆ ಹೋಗುವ ಮುಗ್ಧ ಬಾಲಕಿಯರ ಮೇಲೆ ಲೈಂಗಿಕ ಅತ್ಯಾಚಾರವೆಸಗುವ ಶಿಕ್ಷಕರೂ ತಾವೂ ಇತರರಿಗೇನೂ ಕಡಿಮೆ ಇಲ್ಲವೆಂದು ತೋರಿಸಲು ಹೊರಟಂತಿದೆ. ಇಂತಹ ಲಂಪಟ ವಿಕೃತ ಕಾಮಿಗಳ ಕೈಯಲ್ಲಿ ನಮ್ಮ ಮಕ್ಕಳ ಭವಿಷ್ಯ! ಮಂಗನ ಕೈಯಲ್ಲಿ ಮಾಣಿಕ್ಯ! ಮೇಲಿನ ಅಧಿಕಾರಿಗಳಲ್ಲಿ ದೂರಿತ್ತರೆ ಇಂತಹ ನರಾಧಮರಿಗೆ ಇನ್ನೊಂದು ಸ್ಕೂಲಿಗೆ ವರ್ಗ. ಅಲ್ಲಿಯೂ ಸ್ವಲ್ಪ ಮೇಯಲಿ ಎಂದು ಇರಬಹುದೇನೋ! ಇದು ಸಂಸ್ಕೃತದ ಒಂದು ಸುಭಾಷಿತದಂತೆ ನಿಂತು ಮೂತ್ರ ಮಾಡುತ್ತಿರುವ ಶಿಷ್ಯನಿಗೆ ಓಡುತ್ತಾ ಮೂತ್ರ ಮಾಡು ಎನ್ನುವ ಗುರುವಿನ ಉಪದೇಶದಂತಿದೆ!

ಭ್ರಷ್ಟಾಚಾರವೇ ಶಿಷ್ಟಾಚಾರವಾಗಿರುವ, ಭ್ರಷ್ಟರಿಗೇ ಮಾನ ಮರ್ಯಾದೆ ಸಲ್ಲುತ್ತಿರುವ, ಶಿಷ್ಟರನ್ನು ತಿಪ್ಪೆಗೆ ಎಸೆಯುತ್ತಿರುವ ನಮ್ಮ ದೇಶದಲ್ಲಿಂದು ಇಂತಹ ಸಾವಿರಾರು ಘಟನೆಗಳು ಪ್ರತಿದಿನ ನಡೆಯುತ್ತಿದ್ದರೂ ಯಾರೂ ತಲೆ ಕೆಡಿಸಿಕೊಳ್ಳುತ್ತಿರುವಂತೆ ಕಾಣುತ್ತಿಲ್ಲ. ಘಟನೆಗಳು ಬೆಳಕಿಗೇ ಬರುವುದಿಲ್ಲ. ಬಂದರೂ ನ್ಯಾಯಾಲಯದ ಮೆಟ್ಟಿಲೇರಿದಾಗ ಅತ್ಯಾಚಾರ ಎಸಗಿದವರನ್ನೇ ಮದುವೆಯಾಗಲಿ ಎಂದು ಸಲಹೆ ನೀಡುವ ನ್ಯಾಯಾಧೀಶರೂ ಇದ್ದಾರೆ. ಇದೆಲ್ಲಾ ಈಗ ಮಾಮೂಲಿ ಸಂಗತಿಗಳಾಗಿವೆ. ಅತ್ಯಂತ ಪ್ರಸಿದ್ಧಿಗೆ ಬಂದ ರೂಪರಾಣೀ ಸಿನಿಮಾ ತಾರೆಯೊಬ್ಬಳು ಶೂಟಿಂಗ್‌ನ ವೇಳೆಯಲ್ಲಿ ಸೈಕಲ್‌ನಿಂದ ಬಿದ್ದು ಕೈಬೆರಳಿಗೆ ಸ್ವಲ್ಪ ಗಾಯವಾದರೆ ಟಿ.ವಿ.ಯಲ್ಲಿ ಪದೇ ಪದೇ 'ಬ್ರೇಕ್ ನ್ಯೂಸ್'! ಚಲನಚಿತ್ರ ನಾಯಕನೊಬ್ಬನ 'ಬರ್ತ್‌ಡೇ ಪಾರ್ಟಿ'ಯಲ್ಲಿ ನಾಯಕ ಮಿತ್ರ ತನ್ನನ್ನು ಚುಂಬಿಸಿದನೆಂದು ರಾದ್ಧಾಂತ ಮಾಡಿದ ಪ್ರಸಿದ್ಧ ತಾರೆಯ ಬಿಸಿ ಬಿಸಿ ಸುದ್ದಿ ಟಿ.ವಿ.ಯಲ್ಲಿ. ಪತ್ರಕರ್ತನೊಬ್ಬ 'ನಿಮ್ಮ ಅನುಮತಿಯಂತೆಯೇ ಆತ ಚುಂಬಿಸಿದನಂತೆ' ಎಂದು ಕೇಳಿದಾಗ ಆಕೆ 'ನಾನು ಗಲ್ಲಕ್ಕೆ ಮಾತ್ರ ಚುಂಬಿಸು ಅಂದೆ. ತುಟಿಗೆ ತುಟಿ ತಾಗಿಸಲು ಹೇಳಲಿಲ್ಲ' ಎಂದು ಉತ್ತರವಿತ್ತಳು. ಇದು ಇಷ್ಟಕ್ಕೇ ನಿಲ್ಲದೆ ಆಕೆ ಪರಿಹಾರಕ್ಕಾಗಿ ಕೋರ್ಟಿನ ಮೆಟ್ಟಲನ್ನು ಏರಿಬಿಟ್ಟಳು. ಒಂದು ಆಂಗ್ಲ ಪತ್ರಿಕೆಯಂತೂ 'ಈ ಯುವಕನ ಮೋಜಿನ ಕ್ರೀಡೆ ಸರಿಯೇ ತಪ್ಪೇ' ಎಂಬುದರ ಬಗ್ಗೆ ತನ್ನ ಓದುಗರ ಅಭಿಪ್ರಾಯವನ್ನು ಕೇಳಿತು. ಹೋಗಲಿ, ಬಿಡಿ! ಈ ವಿಷಯಾಂತರ ಈಗ ಬೇಡ.



ಗಂಡಾಗಲಿ, ಹೆಣ್ಣಾಗಲಿ ಮಗುವನ್ನೇ ಹಡೆಯಲಿಲ್ಲವೆಂದು ಹಳಿದು ಮಡದಿಯನ್ನು ಕೊಂದು ಅಥವಾ ನಾನಾ ಬಗೆಯ ಚಿತ್ರಹಿಂಸೆ ಕೊಟ್ಟು ಹೊರತಳ್ಳಿ ಇನ್ನೊಂದು ಮದುವೆಯಾಗುವ ಗಂಡುಗಲಿಗಳೂ ಸಮಾಜದಲ್ಲಿದ್ದಾರೆ. ಸ್ತ್ರೀಯರ ಬಂಜೆತನಕ್ಕೆ ಗಂಡಸರೇ ಶೇ. ೬೦ರಷ್ಟು ಕಾರಣವೆಂದು ವೈದ್ಯರು ಹೇಳುತ್ತಿದ್ದರೂ ಕೇಳುವವರು ಯಾರು? ಗಂಡ ನಪುಂಸಕನಾಗಿದ್ದು ಹೆಂಡತಿ ಅನ್ಯ ಪುರುಷನ ಮುಖ ನೋಡಿದರೆ ಸಾಕು, ಆಕೆಯ ಜೀವಕ್ಕೆ ಅಲ್ಲೇ ಕೊನೆ! ಹೆಂಡತಿ ಸುಂದರಿ, ಶಿಕ್ಷಿತೆ, ಪತಿವ್ರತೆ ಎಲ್ಲಾ ಆಗಿದ್ದರೂ ಗಂಡ ಬೇರೆ ಹೆಂಗಸಿನ ಸಂಪರ್ಕ ಬೆಳೆಸಿದರೆ, ಮನೆಯಲ್ಲಾಗಲಿ, ಸಮಾಜದಲ್ಲಾಗಲಿ ಆತನ ಸ್ಥಾನಮಾನಕ್ಕೇನೂ ಚ್ಯುತಿ ಬರುವುದಿಲ್ಲ. ಪತ್ನಿಯಾದವಳು ಅಪಸ್ವರ ಎತ್ತಿದರೆ ಆಕೆಗೆ ಪ್ರತಿನಿತ್ಯವೂ ಚಿತ್ರಹಿಂಸೆ ಅಥವಾ ಡೈವೋರ್ಸ್! ಮತ್ತೆ ಆಕೆಯ ಬಾಳು ಬೀದಿಪಾಲು! ಇನ್ನು ಬಡತನದಿಂದ, ಗಂಡನ ದುರ್ವ್ಯವಹಾರಗಳಿಂದ, ಕುಡಿತದಿಂದ ಅಥವಾ ಮಕ್ಕಳ ಅಸಹಾಯಕ ಸ್ಥಿತಿಯಿಂದ ಬೇಸತ್ತು ಆತ್ಮಹತ್ಯೆಗೆ ಶರಣಾಗುವ ಹೆಂಗಸರ ದಾರುಣ ಕತೆಯನ್ನು ಕೇಳುವವರು ಈ ದೇಶದಲ್ಲಿ ಯಾರೂ ಇಲ್ಲ. ಆಕೆ ಹೊಟ್ಟೆಪಾಡಿಗಾಗಿ ಕೆಲಸಕ್ಕೆ ಮನೆಯಿಂದ ಹೊರಗೆ ಕಾಲಿಟ್ಟರೆ ಸಾಕು, ಆಕೆಯನ್ನು ಓರೆಗಣ್ಣಿನಿಂದ ನೋಡುವ, ಆಫೀಸುಗಳಲ್ಲಿ ಕೊಬ್ಬಿದ ಬಾಸುಗಳ, ಕಾಮುಕ ಸಹೋದ್ಯೋಗಿಗಳ ಭೋಗಾಸಕ್ತಿಗೆ ಬಲಿಯಾಗುವ ಹೆಂಗಸರ ಅಸಹಾಯಕತೆಯನ್ನು ಹೇಳದಿರುವುದೇ ಒಳ್ಳೆಯದು. ಉದರಪೂರ್ತಿಗೆ, ಅಥವಾ ಮಾನವನ್ನು ಉಳಿಸುವುದಕ್ಕೆ ಆಕೆ ಮೌನಿಯಾಗಿ ಎಲ್ಲವನ್ನೂ ಸಹಿಸಿಕೊಳ್ಳುತ್ತಾಳೆ. ಕೇಂದ್ರ ಸರ್ಕಾರದ ಗೃಹಶಾಖೆ ಇತ್ತೀಚೆಗೆ ಇಂತಹ ಪ್ರಕರಣಗಳಲ್ಲಿ ರಾಜ್ಯಸರ್ಕಾರಗಳು ಕಟ್ಟುನಿಟ್ಟಾದ ಕಠಿಣ ಕ್ರಮ ಕೈಗೊಳ್ಳುವಂತೆ ಸೂಚಿಸಿದ್ದರೂ ಮಾನಭಂಗಕ್ಕೆ ಒಳಗಾದವರು ದೂರು ನೀಡಲು ಮುಂದಕ್ಕೆ ಬರುವುದೇ ಇಲ್ಲ. ಬಂದರೂ ಪುರಾವೆಗಳ ಅಭಾವದಿಂದ ಪರಿಣಾಮವು ಶೂನ್ಯವಾಗಿಬಿಡುತ್ತದೆ.

ಸ್ತ್ರೀಯರು ಸಮಾಜದಲ್ಲಿ ಮರ್ಯಾದೆಯಿಂದ ಬಾಳಬೇಕು. ಆಕೆ ಸಮಾಜದ, ಪ್ರತಿಯೊಂದು ಆಗುಹೋಗುಗಳಲ್ಲಿ ಭಾಗಿಯಾಗಿರಬೇಕೆಂದು ಬಗೆದು ಸರ್ಕಾರ ಗ್ರಾಮ ಪಂಚಾಯತಿ ಮೊದಲಾದ ಸಂಸ್ಥೆಗಳಲ್ಲಿ ಆಕೆಗೆ ಕೆಲವು ಸ್ಥಾನಗಳನ್ನು ಕಾದಿರಿಸಿದ್ದರೂ, ಚುನಾಯಿತೆಯಾಗಿ ಅಧಿಕಾರಕ್ಕೆ ಬಂದರೂ, ಆಕೆಯ ಹೆಸರಿನಲ್ಲಿ ಗಂಡಸರೇ ಹೆಚ್ಚಿನ ಕಡೆ ಅಧಿಕಾರ ಚಲಾಯಿಸುತ್ತಿರುವುದನ್ನು ಕಾಣುತ್ತಿದ್ದೇವೆ.

ಇನ್ನು ನಿಧಿಗಾಗಿ, ನಾಳೆಯ ತೃಪ್ತಿಗಾಗಿ, ಕಷ್ಟಗಳ ಪರಿಹಾರಕ್ಕಾಗಿ ಹುಡುಗಿಯರನ್ನು ಬಲಿಕೊಡುವುದು ವಿಶೇಷವೇನಲ್ಲ. ಬಿಹಾರ, ಒರಿಸ್ಸಾ ಮೊದಲಾದ ರಾಜ್ಯಗಳಲ್ಲಿ ಹೆಣ್ಣುಮಗು ಜನಿಸುತ್ತಲೇ ಅದನ್ನು ಮರಳಿನಲ್ಲಿ ಹೂತುಬಿಡುತ್ತಾರಂತೆ. ರಾಜಸ್ಥಾನ, ಮಧ್ಯಪ್ರದೇಶ ಮೊದಲಾದ ಕೆಲವು ರಾಜ್ಯಗಳಲ್ಲಿ ಈಗಲೂ ಬಾಲ್ಯವಿವಾಹ, ಸತಿ ಸಹಗಮನ ಪದ್ಧತಿ ಚಾಲ್ತಿಯಲ್ಲಿವೆ. ಎಲ್ಲದರ ಒಟ್ಟು ಪರಿಣಾಮ ಸ್ತ್ರೀಯರ ಸಂಖ್ಯೆ ದಿನದಿಂದ ದಿನಕ್ಕೆ ಗಣನೀಯವಾಗಿ ಕಡಿಮೆಯಾಗುತ್ತ ಬರುತ್ತಿದೆ.

ಸ್ತ್ರೀಯರ ಅಭಿವೃದ್ಧಿ, ಅವರ ಹಿತವನ್ನು ಕಾಪಾಡುವುದಕ್ಕೆ, ಕಷ್ಟಗಳ ಪರಿಹಾರಕ್ಕೆ ಅನೇಕ ಸಂಘ ಸಂಸ್ಥೆಗಳು, ಸ್ತ್ರೀಪರ ಆಯೋಗಗಳು ಮತ್ತು ಕಾನೂನುಗಳಿದ್ದರೂ ಅವರ ಕಷ್ಟ-ಕಾರ್ಪಣ್ಯಗಳು ತೊಲಗಿಹೋಗುವುದೇ ಇಲ್ಲ. ಮುಖ್ಯವಾಗಿ ಹಳ್ಳಿಗಳಲ್ಲಿರುವ ಹೆಂಗಸರ ಸ್ಥಿತಿ ಅತ್ಯಂತ ಶೋಚನೀಯವಾಗಿಯೇ ಉಳಿದಿದೆ. ಎಲ್ಲರೂ ಮೊಸಳೆ ಕಣ್ಣೀರು ಸುರಿಸಿ ಕೈತೊಳೆದುಕೊಂಡುಬಿಡುತ್ತಾರೆ. ರಾಜಕೀಯ ಪುಢಾರಿಗಳಿಗಂತೂ ಅವರ ಕಷ್ಟ ಒಳ್ಳೆಯ ಆಹಾರವಾಗಿಬಿಡುತ್ತದೆ.

ಇಂದು ಅನೇಕ ಸ್ತ್ರೀಯರು ಉತ್ತಮ ಹುದ್ದೆಗಳಲ್ಲಿದ್ದಾರೆ. ರಾಜಕೀಯದಲ್ಲಿ ಮುನ್ನಡೆದವರಿದ್ದಾರೆ. ಉತ್ತಮ ಶಿಕ್ಷಣ ಪಡೆದವರೂ ಇದ್ದಾರೆ. ಆದರೂ ಸ್ತ್ರೀಯರ ಕೂಗು ಅರಣ್ಯರೋದನವಾಗಿಯೇ ಉಳಿದಿದೆ. ಬಹುಮಂದಿಗೆ ಇನ್ನೂ ಓದು ಬರಹ ಬಾರದು. ಸರ್ಕಾರ ಕೊಡುವ ಎಲ್ಲಾ ಸೌಲಭ್ಯಗಳನ್ನು ಭ್ರಷ್ಟ ಅಧಿಕಾರಿಗಳೇ ಅನುಭವಿಸಿಬಿಡುತ್ತಾರೆ. ರಾಜಕಾರಣಿಗಳು ಪಾಲುಗಾರರಾಗಿ ಮೆರೆಯುತ್ತಾರೆ. ಚುನಾವಣೆ ಬಂದಾಗ ರಾಜಕೀಯ ಮುಖಂಡರು ಓಟಿಗಾಗಿ ಅವರ ಬಳಿಗೆ ಬಂದು, ಕಾಲಿಗೆ ಅಡ್ಡಬಿದ್ದು 'ಅಮ್ಮಾ! ತಾಯೇ! ಆಶೀರ್ವಾದ ಮಾಡಬೇಕು, ಮರ್ಯಾದೆ ಉಳಿಸಬೇಕು' ಎಂದು ಪರಿಪರಿಯಾಗಿ ಬೇಡಿಕೊಳ್ಳುತ್ತಾರೆ. ಆರಿಸಿ ಬಂದ ಮೇಲೆ ಮತ್ತೆ ಅತ್ತ ಮುಖ ಹಾಕುವುದಿಲ್ಲ. ಇಂದು ಅತ್ಯಂತ ದಾರುಣ ಸ್ಥಿತಿ ವರದಕ್ಷಿಣೆಯ ಸಲುವಾಗಿ ಆತ್ಮಹತ್ಯೆ ಮಾಡಿಕೊಳ್ಳುತ್ತಿರುವ, ಗಂಡಸರು ಬೆಂಕಿಗೆ ಹಾಕಿ ಸುಡುತ್ತಿರುವ ಯುವತಿಯರದ್ದಾಗಿದೆ. ಈ ವಿಷಯದಲ್ಲಿ ಡಾಕ್ಟರರು, ವಕೀಲರು, ನ್ಯಾಯಾಧೀಶರು – ಎಲ್ಲರೂ ಒಂದೇ. ಸಾಯುವವರಿಗೂ ಸಾಯಿಸುವವರಿಗೂ ಒಂದೇ ಮಾನದಂಡ.

ಇನ್ನು ಪ್ರೇಮ ಪ್ರಕರಣಗಳ ದೆಸೆಯಿಂದ ಆತ್ಮಹತ್ಯೆ ಮಾಡಿಕೊಳ್ಳುತ್ತಿರುವ ಯುವತಿಯರ ಸಂಖ್ಯೆ ದಿನೇ ದಿನೇ ಏರುತ್ತಿರುವುದು ಸಮಾಜಕ್ಕೊಂದು ಸವಾಲಾಗಿ ಪರಿಣಮಿಸಿದೆ. ಪುರುಷಪ್ರಧಾನವಾಗಿರುವ ನಮ್ಮ ಸಮಾಜದಲ್ಲಿ ಸ್ತ್ರೀಯರಿಗೆ ಸ್ಪಂದಿಸುವ ಸ್ತ್ರೀಯರ ಸರ್ಕಾರ ಬಂದರೆ ಮಾತ್ರ ಸ್ತ್ರೀ ಸಮುದಾಯ ಸುಖ ಶಾಂತಿ ಸಮೃದ್ಧಿಯನ್ನು ಕಂಡೀತು.

ಎಂ. ವಿ. ಭಟ್
'ಶ್ರೀಮಿತ್ತೂರು', ಮೇದರಹಳ್ಳಿ, ಚಿಕ್ಕಬಾಣಾವರ, ಬೆಂಗಳೂರು - ೫೬೦ ೦೯೦

# ಬಾವ್ಣೆಗೆ ನೋವಾಯ್ತು!

ಬೀರಣ್ಣ

ಗೊಂದಲಪುರದ ಹೊಸ ತಲೆಮೊರೆಯವರು ಪುರಾತನ ಯಜಮಾನ ಗುರುವಜ್ಜನಿಗೆ ಅಷ್ಟಾಗಿ ಕೇರ್ ಮಾಡುತ್ತಿರಲಿಲ್ಲ! ಎಲ್ಲ ಕಾಲದ ಮಹಿಮೆ ತಾನೆ. ಆದರೆ ಯಾರೂ ಅಜ್ಜನ ಬಗ್ಗೆ ಅಗೌರವ ತೋರಿಸುತ್ತಿರಲಿಲ್ಲ. ತರಲೆ ತಿಪ್ಪನಂಥವರಿಗೆ ಗುರುವಜ್ಜನೆಂದರೆ ಬಹಳ ಸಲುಗೆ. ಆತನನ್ನು ನಾಜೂಕಾಗಿ ಲೇವಡಿ ಮಾಡಿ ಮಜಾ ಅನುಭವಿಸುತ್ತಿದ್ದ. ಗುರುವಜ್ಜನೂ ಸೇರಿ, ಎಲ್ಲರೂ ಅಂಥ ಸಂದರ್ಭವನ್ನು ನಕ್ಕು ಅನುಭವಿಸುತ್ತಿದ್ದರು!

ಗುರುವಜ್ಜನೂ ಈ ಲೇವಡಿಯನ್ನು ಸೀರಿಯಸ್ಸಾಗಿ ತೆಗೆದುಕೊಳ್ಳದೆ, ಇಂಥ ಸಂದರ್ಭಗಳಲ್ಲಿ ತನ್ನನ್ನು ತೆರೆದುಕೊಂಡು ನಗುವಿನ ಸುಖದಲ್ಲಿ ಭಾಗಿಯಾಗುತ್ತಿದ್ದ!

ಅಂದು ಬೇವಿನ ಕಟ್ಟೆಯ ಮೇಲೆ ಗುರುವಜ್ಜ ಊರಿನ ವಿದ್ಯಮಾನಗಳನ್ನು ಗಮನಿಸುತ್ತ ಕುಳಿತಿದ್ದ. ಯಾರೂ ಮಾತಿಗೆ ಸಿಕ್ಕದೆ ಬೇಸರವಾಗತೊಡಗಿತು. ನೆನ್ನೆ ಮೊನ್ನೆಯಿಂದ ತರಲೆ ತಿಪ್ಪನ ಸುಳಿವೂ ಇಲ್ಲವಲ್ಲ ಎಂದುಕೊಳ್ಳುತ್ತಿರಬೇಕಾದರೆ, 'ನೆನೆದವರ ಮನದಲ್ಲಿ' ಎಂಬಂತೆ, ತಿಪ್ಪ ತಲೆ ಬಾಗಿಸಿಕೊಂಡು ಕುರಿಗಳ ಹಿಂದೆ ನಡೆದುಹೋದ. ಗುರುವಜ್ಜನ ಕಡೆ ತಿರುಗಿಯೂ ನೋಡಲಿಲ್ಲ.

''ಯಾಕ್ಲಾ ತರ್ಲೆ ಕಣ್ಗೆ ಆಪ್ರೇಸನ್ ಆಗದೇನೋ!'' ಎಂದು ಗುರುವಜ್ಜ ಕಟಕಿದ.

ಆದರೂ ತಿಪ್ಪ ಹಿಂದಿನಂತೆ ಯಾವುದೇ ಪ್ರತಿಕ್ರಿಯೆ ತೋರಲಿಲ್ಲ.

ಎದುರುಗಡೆಯಿಂದ ಬಂದ ಸಿಂಗ್ರಿಯನ್ನು ವಿಚಾರಿಸಲಾಗಿ, ''ಎಲ್ಲ ಕಡೆ ರೆಸ್ಪೆಟ್ ಇದ್ರೇನಾಯ್ತು ಮನೇಲೇ ರೆಸ್ಪೆಟ್ಟಿಲ್ಲ!'' ಎಂದು ಸಿಂಗ್ರಿ ಒಗಟು ಹಾಕಿದ.

''ಅದೇನ್ಲ ನಿನ್ ತಲೆ?'' ಎಂದ ಗುರುವಜ್ಜ.

ಸಿಂಗ್ರಿ ಸ್ವಲ್ಪ ಸ್ವರ ತಗ್ಗಿಸಿ ''ಮನೇಲಿ ಜಟಾಪಟಿ ಕಣಜ್ಜೋ! ಒಲ ಮನೆ ಕೆಲ್ಸ ಮಾಡಾಕಿಲ್ಲ, ಮೈಗಳ್ಳ, ಬರೀ ತಿರ್ಗಾಟ ಮಾಡ್ಕಂಡು ಕಾಲ ಕಳೀತಾನೆ ಸೋಂಬೇರಿ ಅಂತ ಪುಟ್ರಂಗಿ ಕಂಪ್ಲೆಂಟು !''ಎಂದ.

''ಏನು? ಪುಟ್ರಂಗಿ ಅಂಗಂದ್ಲೆ?''

''ಮತ್ತೇನಂದ್ಕಂಡಿದ್ದಿ! ಆ ಈರಾಂಜ್ನಿ ಜೊತೆ ಸೇರ್ಕಂಡು ಪಂಚಾಯ್ತಿ ಎಲೆಕ್ಸನ್‌ಗೆ ನಿಲ್ತೀನಿ ಅಂತಾನೆ. ಎಡೂರಪ್ನೋರು ನಿಂಗೆ ಗೊರ್ರುಗುಂಟೆಪಾಳ್ಯದ ಎಮ್ಮೆಲ್ಲೆ ಸೀಟು ಗ್ಯಾರಂಟಿ ಕೊಡ್ತೀನಿ ಅಂದವ್ರಂತೆ! ಅಂಗಂತ ಊರೋರ್ಗೆಲ್ಲ ಏಳ್ಕಂಡು ಕೊಚ್ತಿದ್ದ. ಪುಟ್ರಂಗಿ ಒಂದೇ ಸಲಕ್ಕೆ ಗಾಚಾರ ಬುಡಿಸಿದ್ಲು....''

ಇಂಥ ಸಣ್ಣಪುಟ್ಟ ಸಂಘರ್ಷಗಳು ಸಂಸಾರದಲ್ಲಿ ನಡೆಯುವಂಥವೇ ಎಂಬುದು ಗುರುವಜ್ಜನಿಗೆ ತಿಳಿಯದ ಸಂಗತಿಯಲ್ಲ.

''ಮೊನ್ನೆಯಿಂದ ಮನೆಗೆ ಸೇರಿಸ್ದೆನೆ ಕುರಿಕೊಟ್ಗೇಲಿ ಮಲಗ್ತಾ ಅವ್ನಂತೆ ಕಣಜ್ಜೋ. ನೀನಾರ ಆ ಪುಟ್ರಂಗಿ ಕರಿಸಿ ಸಮಾದಾನ ಮಾಡ್ಸು ನೋಡ್ತೀನಿ!'' ಎಂದು ಸಿಂಗ್ರಿ ಗುರುವಜ್ಜನಿಗೆ ಯಜಮಾನಿಕೆಯ ನೆನಪು ಕೊಟ್ಟ.

ಅನಾಯಾಸವಾಗಿ ಸಂಸಾರದ ನ್ಯಾಯ ತೀರ್ಮಾನ ಮಾಡಬೇಕಾದ ಅವಕಾಶ ಸಿಕ್ಕಿದ ಸಂಭ್ರಮ ಗುರುವಜ್ಜನ ಮುಖದಲ್ಲಿ ಕಾಣಿಸಿಕೊಂಡಿತು. ಗೊಂದಲಪುರದ ಲೋಕಾಯುಕ್ತರಿಗೆ ವಿಶೇಷ ಅಧಿಕಾರ ಸಿಕ್ಕಿದಂತಾಗಿ, ಜಾರುತ್ತಿದ್ದ ಪೇಟವನ್ನು ಭದ್ರವಾಗಿ ಅಮುಕಿ ತಲೆಯ ಮೇಲೆ ಕುಳಿತುಕೊಳ್ಳುವಂತೆ ಮಾಡಿದ !

ಗುರುವಜ್ಜ ತಕರಾರು ನಡೆದ ಕೂಡಲೇ ನ್ಯಾಯದಾನ ಮಾಡುವ ಯಜಮಾನ. ವಾಯಿದೆ-ಗೀಯಿದೆ ಎಂದು ನ್ಯಾಯವನ್ನು ಎಲಾಸ್ಟಿಕ್ಕಿನಂತೆ ಎಳೆಯುವವನಲ್ಲ. ಪಿರ್ಯಾದಿ ಯಜಮಾನನ ಎದುರಿಗೆ ಬಂದು ದೂರು ನೀಡಬೇಕೆಂಬ ನಿಯಮ ಗುರುವಜ್ಜ ಪಾಲಿಸುವವನಲ್ಲ. ಗೊಂದಲಪುರದಲ್ಲಿ ಯಾರ ಸಂಸಾರದಲ್ಲಿ ಏನಾದರೂ ಏಡವಟ್ಟು ನಡೆದಿದೆಯೆಂದು ವದಂತಿ ತಿಳಿದರೂ, ಸಂಬಂಧಪಟ್ಟವರಿಗೆ ಕೂಡಲೇ ಸಮನ್ಸ್ ಕಳಿಸಿ ನ್ಯಾಯದಾನ ಮಾಡಿಬಿಡುತ್ತಾನೆ !

ಸ್ವಲ್ಪ ಹೊತ್ತಿಗೆಲ್ಲ ತರ್ಲೆತಿಪ್ಪ ಕುರಿಗಳನ್ನು ಯಾರ ಸುಪರ್ದಿಗೋ ವಹಿಸಿ, ಬಂಗಾರಿ ಹೊಟೆಲಿನಲ್ಲಿ ಹೊಟ್ಟೆ ತುಂಬಾ ಪಕೋಡ ಮೆದ್ದು ಗುರುವಜ್ಜನ ಕೋರ್ಟಿನಲ್ಲಿ ಹಾಜರಾದ.

''ಏನ್ರಲಾ ನಿಮ್ದು ತಕ್ರಾರು?'' ಎಂದು ಗುರುವಜ್ಜ ವಿಚಾರಣೆ ಪ್ರಾರಂಭಿಸಿದ.

''ತಕ್ರಾರು ಇಲ್ಲ ಪ್ರಕ್ರಾರು ಇಲ್ಲ. ಅವಳ್ಗೆ ಕೊಬ್ಬು ಜಾಸ್ತಿ ಆಗೋಗದೆ. ನಾನೂ ಗಂಡ್ಸು ಅಂತ ಮೂರ್ ಕಾಸಿನ್ ಮರ್ವಾದೆ ತೋರ್ಸಾಕಿಲ್ಲ. ನಂಗೆ ಸೇಮ್ ಅನ್ನಿಸ್ತದೆ. ನಾನೂ ಒಂದ್ ತೀರ್ಮಾನಕ್ಕೆ ಬಂಬ್ಬುಟ್ಟಿವ್ನಿ. ಅವಳೊಂದ್ಗೆ ಸಂಸಾರ ಇನ್ನಿಲ್ಲ. ನನ್ ಮಕ್ಕಳ್ನ ನಾನೇ ಓದ್ಸಿ ದೊಡ್ಡೋರ್ಮಾಡ್ತೀನಿ. ಇಲ್ಲಾಂದ್ರೆ ಗುಂಡೇಸ್ವರನ್ ಗವೀ ಸೇರ್ಕತ್ತೀನಿ. ನನ್ ಬಾವ್ಣೆನಾ ಎಷ್ಟ್ ನೋಯ್ಸವ್ಳೆ ಬಲ್ಯಾ ? ಇನ್ಯರಾರಾ ಆಗಿದ್ರೆ ಇಸ್ಟೊತ್ಗೆ ಏನೇನೋ ಆಗಿರ್ತಿತ್ತು!''

ಬೇವಿನ ಕಟ್ಟೆಯಲ್ಲಿ ಆಗಲೇ ಜನರ ಗುಂಪು ನೆರೆದಿತ್ತು.

''ಥೂ ನಿನ್ನ! ಗಂಡ್ಸು ಆಡೂ ಮಾತೇನ್ಲ ಇದು ? ಸಂಸಾರ ಅಂದ್ಮ್ಯಾಲೆ ಒಂದ್ ಮಾತ್ ಬರ್ತದೆ, ಒಂದ್ ಮಾತ್ ಓಯ್ತದೆ. ಅದ್ಕೆ ಎಲ್ಲಾನು ಬುಟ್ಟು ಗವಿ ಸೇರ್ಕತ್ತೀನಿ ಅಂತೀಯಲ್ಲ'' ಎಂದು ಗುರುವಜ್ಜ ತರ್ಲೆಗೆ ಛೀಮಾರಿ ಹಾಕಿದ.

''ಯಾರು ಏನಾರಾ ಅಂದ್ಕಳ್ಳಿ! ನನ್ ಬಾವ್ಣೆಗೆ ನೋವಾಗದೆ. ನಂಗೆ ಯಾರೂ ನ್ಯಾಯಾ ಏಳ್ಬೇಕಾಗಿಲ್ಲ'' ಎಂದವನೆ ಥಟ್ಟನೆ ಅಲ್ಲಿಂದ ಎದ್ದು ನಡೆದ.

ಆದರೇನು? ಗುರುವಜ್ಜ ತನ್ನ ಯಜಮಾನ ಹಟ ಅಷ್ಟು ಸುಲಭವಾಗಿ ಬಿಟ್ಟುಕೊಟ್ಟಾನೆಯೆ? ಅಲ್ಲದೆ ಪುಟ್ರಂಗಿಯ ವಿಚಾರಣೆ ಮಾಡದೆ ನ್ಯಾಯ ನಿರ್ಣಯ ಸಾಧ್ಯವಿಲ್ಲವಷ್ಟೆ!

''ತಾತಾ... ನಂದೇನಾರಾ ತಪ್ಪಿದ್ರೆ ಒಡೀಲಿ ಬಡೀಲಿ. ಏನೋ ನನ್ನಣೆಬರಾ ಅಂತ ಸಂಸಾರ ಮಾಡ್ಕಂಡು ಮಕ್ಕಳ್ ಸಾಕ್ಕಂಡು ಜೀವ್ನ ಮಾಡ್ತೀನಿ. ನಮ್ಮಪ್ಪನ್ಮನೆ ಯಾಕೆ ಎತ್ತಾಡ್ಬೇಕು ? ನನ್ ಬಾವ್ಣೆಗೆ ನೋವಾಗದೆ . ನಂಗಂತೂ ಅಗ್ರೀಸ್ ಇವನೊಂದ್ಗೆ ಸಂಸಾರ ಮಾಡೂಕಾಗೂದಿಲ್ಲ'' ಎಂದವಳೆ ಪುಟ್ರಂಗಿ ಗುರುವಜ್ಜನ ಮಾತಿಗೆ ಕೇರ್ ಮಾಡದೆ ಅಲ್ಲಿಂದ ಎದ್ದು ಹೋದಳು.

ಗುರುವಜ್ಜನಿಗೆ ಮುಖದ ಮೇಲೆ ಬಾರಿಸಿದಂತಾಯಿತು. ಆದರೂ ಮೀಸೆ ಮಣ್ಣಾಯಿತು ಎಂದು ಹಲುಬುವ ಜಾಯಮಾನದವನಲ್ಲ ಆತ.



ಅಷ್ಟು ಹೊತ್ತಿಗೆ ಸಿದ್ದೇಶ್ವರಾನಂದಜಿಯ ಸವಾರಿ ಚಿತ್ತೈಸಿತು. ತರ್ಲೆ ತಿಪ್ಪನ ಸಂಸಾರದ ನ್ಯಾಯ ತೀರಿಸಹೋಗಿ ಮುಗ್ಗರಿಸಿದ್ದ ಗುರುವಜ್ಜನಿಗೆ ಈ ಬಡಪಾಯಿ ಸಿದ್ದಣ್ಣನ ಮೇಲೆ ಏಕ್ದಂ ಕೋಪ ಬರಬೇಕೆ!

ಸಿದ್ದಣ್ಣನ ಸಂಸಾರದಲ್ಲಿ ಸಹ ಆಗೀಗ ಇಂಥ ಚಕಮಕಿ ನಡೆಯುವಂಥದ್ದೇ. ಆತನಿಗೆ ಗೊಂದಲಪುರದ ಸಿದ್ದೇಶ್ವರಾನಂದಜೀ ಎಂಬ ಬಿರುದು ನೀಡಿದ ಮೇಲೆ 'ತಾನೊಬ್ಬ ಭವರೋಗ ವೈದ್ಯ' ಎಂಬ ಭ್ರಮೆಯಲ್ಲಿ ತೇಲಾಡುತ್ತ ಮನೆ ಹೆಂಡತಿ ಮಕ್ಕಳನ್ನು ಸಂಪೂರ್ಣ ಮರೆತವನು.

ಜೊತೆಗೆ ಅರ್ಧ ಸನ್ಯಾಸಿಯ ಎಲ್ಲ ಹುಚ್ಚಾಟಗಳೂ ಉಂಟು. ಭಜನೆ, ಯಂತ್ರ-ತಂತ್ರ, ಅಲ್ಲದೆ, ರಾಮರಸ, ಭಂಗಿ ಸೇವನೆ, ಇತ್ಯಾದಿ ಮೋಕ್ಷಮಾರ್ಗಗಳೂ ಸಿದ್ಧಿಯಾಗಿವೆ!

ಆದರೆ ಚೆಲುವಕ್ಕ ಈತನನ್ನು ಲೆಕ್ಕಕ್ಕೆ ತೆಗೆದುಕೊಂಡವಳಲ್ಲ. ಕೂಲಿನಾಲಿ ಮಾಡಿಕೊಂಡೇ ಮಗ ಕುಂಟ ರಾಮನನ್ನು ಕಾಲೇಜಿಗೆ ಕಳಿಸುತ್ತಿದ್ದಾಳೆ. ಪಂಚಾಯಿತಿ ಸದಸ್ಯೆ. ನಾಟಿ, ಕಳೆ, ಕೊಯ್ಲು ಕೆಲಸದ ಹೆಂಗಸರ ಮುಂದಾಳು.

ಈ ಸಿದ್ದಣ್ಣನೋ ಮೈಗಳ್ಳ. ಗುರುವಜ್ಜನಿಗೆ ಕೋಪ ಬಂದದ್ದು ಈ ಕಾರಣಕ್ಕೆ.

''ಲೋ ಸಿದ್ದಣ್ಣ ನಿಂಗೆ ಬುದ್ದಿ-ಗಿದ್ದಿ ಏನೋವ್ರು ಯಾರೂ ಇಲ್ವೇನ್ಲ? ಆ ಚೆಲುವಕ್ಕ ಸಿಕ್ಕಿದ್ಲು ಬದೀಕಂಡೆ. ಅಲ್ಲ ಕಣ್ಲ ನೀನು ಊರಲ್ಲಿರು ಮನೆ ಬಿಟ್ಟು ಆ ಗುಂಡಯ್ನ ಗವೀಲ್ ಕೂತ್ಕಂಡು ಅದೇನ್ ಮಾಡ್ತಿ. ತರ್ಲೆ ತಿಪ್ಪನ್ ಸೋಂಬೇರಿತನಕ್ಕೆ ನೀನು ಕುಮ್ಮಕ್ ಕೊಡ್ತಾ ಇದ್ದಿಯಲ್ಲ. ಥೂ ತಗಿ ತರವಲ್ಲ!'' ಎಂದು ಗದರಿದ.

''ನೀನು ನಮ್ಮೂರ್ ಯಜಮಾನ ಅಂತ ಮರ್ಯಾದಿ ಕೊಟ್ರೆ ನನ್ ಬಾವ್ನೆಗೆ ನೋವಾಗುವಂತೆ ಮಾತಾಡ್ತೀಯಾ?'' ಎಂದು ಸಿದ್ದಣ್ಣ ಮುನಿಸು ತೋರಿಸಿದ.

''ಲೋ ನಿಂತ್ಕಳ್ಲಾ ಮೂರ್‍ನ್ನು ಬುಟ್ಟೋನು ಊರ್‍ಗೇ ದೊಡ್ಡೋನು ಅನ್ಕಬ್ಯಾಡ. ಅದೇನ್ ನಿನ್ ಬಾವ್ನೆ ನೋವಾಗಿರುದು? ಇಷ್ಟು ದಿನ ಎಲ್ಲೋಗಿತ್ಲ ನಿನ್ ಬಾವ್ನೆ?'' ಎಂದು ಯಜಮಾನ ಅಟಕಾಯಿಸಿದ.

''ಬಾವ್ನೆ ಅಂದ್ರೆ ಬಾವ್ನೆ, ನಾವೆಲ್ಲ ಸೋತಂತ್ರ ಜನ. ನಮ್ಮಿಷ್ಟ ಬಂದ್ಹಂಗೆ ಬದಕ್ತೀವಿ. ನಮ್ ಬಾವ್ನೆಗೆ ನೋವಾಗುವಂಗೆ ಮಾತಾಡೋಕೆ ಯಾರ್ಗೂ ಅಕ್ಕಿಲ್ಲ ತಿಳ್ಕೋ'' ಎಂದ ಆತ.

ಗುರುವಜ್ಜನಿಗೆ ಚೆಪ್ಪು ಹಿಡಿಯುವುದು ಬಾಕಿ. ಎಲ್ಲರೂ ಇದೇನೋ ಬಾವ್ನೆಗೆ ನೋವಾಯ್ತು ಅಂತಿದ್ದಾರಲ್ಲ ಎಂದು ಗೊಂದಲವಾಯಿತು.

ತೊಡೆ ಕೆರೆದುಕೊಳ್ಳುತ್ತ ಕುಳಿತಿದ್ದ ಸಿಂಗ್ರಿಗೆ ''ಲೋ ಪೆಕರ, ಬಾವ್ನೆಗೆ ನೋವಾಯ್ತು ಅಂತಾರಲ್ಲ ಅದೇನ್ಲಾ ಅಂಗಂದ್ರೆ?'' ಎಂದ.

''ಬಾವ್ನೆಗೆ ಅಂದ್ರೆ ಸೆಂಟಿಮೆಂಟು ಅಂತ್ಲಂತೆ. ಅಷ್ಟೂ ಗೊತ್ತಿಲ್ಲ ನಿಂಗೆ. ನೀನು ನಮ್ಮೂರ್ ಗನಂದಾರಿ ಯಜ್ಮಾನ!'' ಎಂದು ಲೇವಡಿ ಮಾಡಿದ ಆತ.

ಜನರು ತಮ್ಮ ತಮ್ಮ ಹೊಲ ಮನೆ ಕೆಲಸದ ನೆನಪು ಮಾಡಿಕೊಂಡು ಒಬ್ಬೊಬ್ಬರಾಗಿ ಅಲ್ಲಿಂದ ಕಾಲು ಕಿತ್ತರು.

ಸ್ವಲ್ಪ ಹೊತ್ತಿಗೆಲ್ಲ ನರ್ಸರಿ ರೈಮ್ಸ್ ಹೇಳಿಕೊಳ್ಳುತ್ತ ಬಂದ ಗುರುವಜ್ಜನ ಮೊಮ್ಮಗಳು ''ಗ್ರ್ಯಾಂಡ್‌ಪಾ... ಮತ್ತೇ ಮಮ್ಮೀ ಮುದ್ದೆ ತಿಂಬಾಕೆ ಕರೀ ಅಂತು...'' ಎಂದು ಆತನಿಗೆ ಮುದ್ದೆಯ ನೆನಪು ಮಾಡಿ ಅಲ್ಲಿಂದ ಗುಡುಗುಡು ಓಡಿದಳು. ಗೊಂದಲಪುರದಲ್ಲಿ ಹೊಸದಾಗಿ ಪ್ರಾರಂಭವಾಗಿರುವ ಗುಂಡೇಶ್ವರ ಕಾನ್ವೆಂಟಿನಲ್ಲಿ ಕಲಿಯುತ್ತಿರುವ ಗರ್ಲ್ ಅದು!

''ಊಹು, ನನ್ ಬಾವ್ನೆಗೆ ಸಾನೇ ನೋವಾಗಿದೆ. ನಾನು ಮುದ್ದೆ ಉಣ್ಣೋಕೆ ಬರೂದಿಲ್ಲ!'' ಎಂದು ಗುರುವಜ್ಜ ತನ್ನಷ್ಟಕ್ಕೆ ಗೊಣಗಿಕೊಂಡ.

[illegible]
ಗೊಂದಲಪುರ

# ನನ್ನ ಕವನ



ನನ್ನ ಕವನ ನನ್ನವ್ವನಂತೆ
ಸದಾ ಕೇರುತ್ತ
ಚಪ್ಪರಿಸುತ್ತ
ಮಣ್ಣೊಳಗೆ ಕಾಳ ಹೆಕ್ಕುವ
ನನ್ನವ್ವನಂತೆ

ನನ್ನ ಕವನ ನನ್ನವ್ವನಂತೆ
ಕಣದಂಚಿನ ಮುಂಕಟ್ಟ
ಕುಟ್ಟಿ ತೂರಿ
ಜಳ್ಳ ಎಸೆದು ಗಟ್ಟಿ ಅರಸುವ
ನನ್ನವ್ವನಂತೆ

ನನ್ನ ಕವನ ನನ್ನವ್ವನಂತೆ
ಕೂಳೆ ಹೊಲದ
ಹಾಯ್ದೆನೆಗಳಲಿ
ಕನಸು ಹೆಕ್ಕುವ
ನನ್ನವ್ವನಂತೆ

ನನ್ನ ಕವನ ನನ್ನವ್ವನಂತೆ
ಉಡಿಯ ಸೆರಗಲಿ
ಬಚ್ಚಿಟ್ಟ ಬಿಡಿಗಾಸಲಿ
ಪಾಟೀ ಚೀಲ ತುಂಬಿ ತಂದ
ಅ ಆ ಗಳಂತೆ ನನ್ನ ಕವನ

ನನ್ನ ಕವನ ನನ್ನವ್ವನಂತೆ
ಮನೆಗೆ ಕೊರೆದ ಕನ್ನ,
ಹೆಗ್ಗಣದ ಹೆದ್ದಾರಿಗಳಿಗೆ
ಕಲ್ಲಬಡಿದು ಮಣ್ಣ ಮೆತ್ತಿ
ರಂಗೋಲಿಯ ಚಿತ್ತಾರದಲಿ
ವಿರಮಿಸುವ ನನ್ನವ್ವನಂತೆ

ನನ್ನ ಕವನ ನನ್ನವ್ವನಂತೆ
ಅವಳದೇ ಉಟ್ಟ ಸೀರೆ
ತೊಟ್ಟ ರವಿಕೆ
ಕರಿಮಣಿ ದಂಡೆಯಲಿ
ಕಂಗೊಳಿಸುವ
ನನ್ನವ್ವನಂತೆ

ಎ. ಬಿ. ರಾಮಚಂದ್ರಪ್ಪ
ಸಂಶೋಧನಾ ಶಿಕ್ಷಕರು, ಕನ್ನಡ ಭಾರತಿ, ಕುವೆಂಪು ವಿಶ್ವವಿದ್ಯಾನಿಲಯ, ಜ್ಞಾನ ಸಹ್ಯಾದ್ರಿ, ಶಂಕರಘಟ್ಟ

# ಮತ್ತೆ ಮಳೆ ಹೊಯ್ಯುತಿದೆ !

**ಪ್ರ**ತಿವರ್ಷ ಮಳೆಗಾಲ ಪ್ರಾರಂಭವಾದಾಗ ಅದೇನೋ ಸಂಭ್ರಮ !

ಕೆಲ ವರ್ಷ ಮೇ ಕೊನೆಗೆ ಮಳೆ ಸುರಿಯಲು ಪ್ರಾರಂಭವಾಗಿ ಸೆಪ್ಟೆಂಬರ್ ಕಳೆದರೂ ನಿಲ್ಲುವುದೇ ಇಲ್ಲ. ಕೆಲವು ಬಾರಿ ಜೂನ್ ಮುಗಿಯುತ್ತ ಬಂದಾಗ ಇನ್ನೇನು 'ಮತ್ತೊಂದು ಬರಗಾಲ' ಅಂತ ಬಿಸು ಸುಯ್ಯುವಾಗ ಅಚಾನಕ್ ಆಗಿ ಒಂದು ಮೂರು ಸಂಜೆ ಮಳೆಗಾಲ ಪ್ರಾರಂಭವಾಗಿಬಿಡುತ್ತದೆ.

ಗುಡುಗು - ಸಿಡಿಲು - ಮಿಂಚಿನ ರುದ್ರನಾಟಕ ಗಗನದ ರಂಗಸ್ಥಳದಲ್ಲಿ ನಡೆಯಲು ಪ್ರಾರಂಭಿಸಿದರೆ ಭೂಮಿಯ ಮೇಲಿರುವ ನಾವು ಮೂಕ ಪ್ರೇಕ್ಷಕರಾಗಿ ಕುಳಿತಿರುತ್ತೇವೆ. ಪ್ರತಿವರ್ಷ ಮಳೆ ಸುರಿಯಲು ಪ್ರಾರಂಭವಾಯಿತೆಂದರೆ, ಅದು ನನಗೆ ಹಳೇ ನೆನಪುಗಳ ಸುರಿಮಳೆಯೇ ಸರಿ ! ಮಳೆಗೆ ಹಳೆಯ ನೆನಪುಗಳನ್ನೆಲ್ಲ ಹೊತ್ತುತರುವ ಜೀವಶಕ್ತಿ ಇದೆ. ಮಳೆ ಸಾಹಿತಿಗಳನ್ನ, ಕವಿಗಳನ್ನ ಸೆಳೆದಷ್ಟು ಪ್ರಕೃತಿಯ ಬೇರಾವ ವೈಚಿತ್ರ್ಯ ಸೆಳೆದಿದೆಯೋ ಕಾಣೆ. ಅತಿವೃಷ್ಟಿಯೂ ಕಷ್ಟ, ಅನಾವೃಷ್ಟಿಯೂ ಕಷ್ಟ! ಸುವೃಷ್ಟಿಯಾಗಬೇಕು. ಆಗ ಸುಭಿಕ್ಷ!

ನಾನು ಮಗುವಿದ್ದಾಗ, ಐದು ದಶಕಗಳ ಹಿಂದೆ ಮಲೆನಾಡಿನ ಶಿರಸಿಯಲ್ಲಿ ಅದೆಷ್ಟು ಮಳೆ ಬರುತ್ತಿತ್ತು! ಮುಸಲಧಾರೆ !! ಹಾಗೆಂದರೇನು ಅಂತ ಕನ್ನಡ ಪಂಡಿತರು ವರ್ಣಿಸಿದ್ದರು. ಭತ್ತದಿಂದ ಅಕ್ಕಿ ಮಾಡುವ ಒನಕೆಗೆ ಮುಸಲ ಅನ್ನುತ್ತಾರೆ. ಅದರಷ್ಟು ದಪ್ಪದ ಮಳೆಯ ಧಾರೆ ಅಂತ ಅರ್ಥವಂತೆ. ನಾವು ಶಾಲೆಗೆ ಹೊರಡಲು ತಯಾರಾದಾಗ ಮಳೆ ಅದೇ ಮುಹೂರ್ತಕ್ಕೆ ಕಾದಿದ್ದಂತೆ ಪ್ರಾರಂಭವಾಗುತ್ತಿತ್ತು. ''ಹಾಳು ಮಳೆ '' ಅಂತ ಬೈದರೆ ಅಮ್ಮ ''ಹಾಗನ್ನಬಾರದು, ಮಗ ಉಂಡರೆ ಕೇಡಿಲ್ಲ, ಮಳೆ ಹುಯ್ದಷ್ಟು ಹಾಳಲ್ಲ'' ಅಂತ ಗಾದೆಯನ್ನೇ ಹೇಳುತ್ತಿದ್ದಳು. ''ನಾನು ಸಣ್ಣವಳಿದ್ದಾಗ ಸುರಿಯುತ್ತಿದ್ದುದಕ್ಕಿಂತ ಈಗಲೇ ಮಳೆ ಕಡಿಮೆಯಾಗಿದೆ'' ಎಂದು ಬೇಸರವನ್ನೂ ವ್ಯಕ್ತಪಡಿಸುತ್ತಿದ್ದಳು.

ಹಾಗೆ ನೋಡಿದರೆ ಮಳೆ ಅಮ್ಮನಿಗೆ ಸುಖವನ್ನೇನು ತರುತ್ತಿರಲಿಲ್ಲ. ಬೆಳಿಗ್ಗೆ ೭.೩೦ಕ್ಕೆಲ್ಲ ಶಾಲೆಗಾಗಿ ಮನೆ ಬಿಡುವ ನಾಲ್ಕು ಮಕ್ಕಳಿಗೆ ಸ್ನಾನ, ಚಹಾ - ಉಪಹಾರ ಸಿದ್ಧಪಡಿಸುವುದು ಮಳೆಗಾಲದಲ್ಲಿ ಬಹು ಕಷ್ಟದಾಯಕ ವಾಗಿತ್ತು. ಸೋರುವ ಹಂಚಿನ ಮನೆ, ಹಸಿ ಕಟ್ಟಿಗೆಯ ಹೊಗೆ ಮನೆ ತುಂಬಾ, ಕಣ್ಣು ಮೂಗಿನಿಂದ ನೀರು ಸುರಿಸುತ್ತಾ ಅಮ್ಮ ಒದ್ದಾಡುತ್ತಿದ್ದಳು. ಅರ್ಧ ಒಣಗಿದ ಯೂನಿಫಾರಂ ತೊಟ್ಟು, ತೂತಾದ ಕೊಡೆ ಹಿಡಿದು, ಮಳೆಗೆ ಕೆಸರು ಸಿಡಿಸುವ ಅಗ್ಗದ ಚಪ್ಪಲಿ ಹಾಕಿ ೪-೬ ಮೈಲಿ ದೂರದ ಶಾಲೆಗೆ ಓಡುವ ಕಷ್ಟ ನಮಗೆ. ಕೆಳ ಮಧ್ಯಮ ವರ್ಗದ ಕಷ್ಟಗಳು ಹಲವಾರು. ಕೊಡೆ ಹಿಡಿದು ಶಾಲೆಗೆ ಹೋಗುವುದಕ್ಕಿಂತ, ಕಂಬಳಿ ಕೊಪ್ಪೆ ಹೊದೆದು ಬೆಚ್ಚಗೆ ಬರುತ್ತಿದ್ದ ಹಳ್ಳಿ ಮಕ್ಕಳು ಸುಖವಾಗಿದ್ದರು. ಆದರೆ ನಮ್ಮ ಒಣ ಪ್ರತಿಷ್ಠೆ ಕೇಳಬೇಕಲ್ಲ!



ಎಷ್ಟೇ ಕಷ್ಟವಿದ್ದರೂ ಅಪ್ಪ-ಅಮ್ಮ ಮಳೆಗಾಲವನ್ನು ಪ್ರೀತಿಸುತ್ತಿದ್ದರು. ಅವರ ಬಾಲ್ಯ ಕಾಲದಲ್ಲಿ ಬರ ಬಂದಿತ್ತಂತೆ. ಪ್ರಕೃತಿ ವೈಚಿತ್ರ್ಯವೆಂದರೆ ಬಿದಿರು ಮಟ್ಟಿಗಳಲ್ಲಿ ಹೂವು ಕಾಣಿಸಿಕೊಂಡ ವರ್ಷ ಬರಗಾಲ ಬರುತ್ತದೆಯಂತೆ ಅಥವಾ ಬರಗಾಲ ಬಂದಾಗ ಬಿದಿರು ಹೂ ಬಿಡುತ್ತದೊ ? ಅಂತೂ ಬರಗಾಲದಲ್ಲಿ ಹಳ್ಳಿಗರು ಕಾಡು ತಿರುಗಿ ಬಿದಿರು ಹಿಂಡಿನ ಸುತ್ತಲೂ ಕಸಗುಡಿಸಿ ಶೆಗಣಿಯಿಂದ ಸಾರಿಸಿ ಬರುತ್ತಿದ್ದರಂತೆ. ಬೆಳಿಗ್ಗೆ ಬೇಗ ಎದ್ದು ಬಿದಿರಕ್ಕಿ ಆಯ್ದು ತಂದು ಅದರಿಂದ ಹೊಟ್ಟೆ ತುಂಬಿಸಿಕೊಳ್ಳುತ್ತಿದ್ದರಂತೆ. ಆ ಬರದ ಬೇಗೆಗಿಂತ ಈ ಮಳೆಗಾಲದ ಕಷ್ಟಗಳು ಪರವಾಗಿಲ್ಲ ಎನ್ನುತ್ತಿದ್ದರು. ರಾತ್ರಿ ಬೆಚ್ಚಗೆ ಕಂಬಳಿ, ಅಮ್ಮನ ಸೀರೆಗಳ ದುಪ್ಪಟ್ಟಿ ಹೊದೆದು ಅಮ್ಮನಿಂದ ಕತೆ ಹೇಳುತ್ತಾ ಮಲಗಿದರೆ ಹೊರಗೆ ಭೋರೆಂದು ಸುರಿಯುವ ಮಳೆ ಜೋಗುಳದಂತೆ ಕೇಳುತ್ತಿತ್ತು.

ಒಂದು ರಾತ್ರಿ ಮಳೆಯ ಬಗ್ಗೆ ಚರ್ಚೆ ಪ್ರಾರಂಭವಾಗಿತ್ತು. ಯಕ್ಷಗಾನದಲ್ಲಿ ಕುಂಭದ್ರೋಣ ಮಳೆ ಸುರಿಯಿತು ಅಂತಾರಲ್ಲ, ಹಾಗೆಂದರೇನು? ಅಂತ ಯಾರಿಗೂ ಗೊತ್ತಿರಲಿಲ್ಲ. ಆ ಸಲ ಮನೆಗೆ ಶ್ರಾವಣ ಮಾಸದ ಪೂಜೆಗೆ ಬಂದ ಜೋಯಿಸರು ಅದರರ್ಥ ವಿವರಿಸಿದ್ದರು. ಅದೊಂದು ಮಳೆಯ ಮಾಪನವಂತೆ. ಕುಂಭ - ಮಡಿಕೆ, ದ್ರೋಣ - ದೊನ್ನೆ, ಆ ಅಳತೆಯಷ್ಟು ಮಳೆ ಸುರಿಯಿತು ಅಂದರೆ ವಿಪರೀತ ಮಳೆ ಆಯ್ತು ಅಂತ ಅರ್ಥವಂತೆ.

*ಶಾಲೆಗೆ ರಜೆ ಇದ್ದಾಗ ಅಕ್ಕ ಮಧುರವಾಗಿ*
*ಕಾರ್ಗಾಲ ಬಂತು ಕಾಶ್ಮೀರ ಶ್ರೀಗೆ*
*ಸಿರಿಗಂಧ ಸ್ನಾನ ಮಾಗಿ.....*

ಅಂತ ಹಾಡುತ್ತಿದ್ದಳು. ಅದು ಶ್ರೀ ಸಿದ್ಧಯ್ಯ ಪುರಾಣಿಕರ ಕವನ. ''ಕಾಶ್ಮೀರದ ಮಳೆ ಸುದ್ದಿ ನಮಗ್ಯಾಕೆ ?'' ಅಂತ ಅಣ್ಣ ಅವಳನ್ನು ಕೆಣಕುತ್ತ ''ಮಾಯದಂತ ಮಳೆ ಬಂತಣ್ಣಾ'' ಅಂತ ಏರು ಧ್ವನಿಯಲ್ಲಿ ಕಿರುಚತೊಡಗುತ್ತಿದ್ದ. ಅಮ್ಮ ಬಿಸಿ-ಬಿಸಿ ಹಪ್ಪಳ ಕೆಂಡದಲ್ಲಿ ಸುಟ್ಟಿದ್ದು ಕೊಟ್ಟಾಗ ಜಗಳ ನಿಲ್ಲುತ್ತಿತ್ತು. ಬೇಸಿಗೆಯಲ್ಲಿ ಸಂಗ್ರಹಿಸಿಟ್ಟ ಹಲಸಿನ ಬೀಜ, ಗೇರುಬೀಜ ಈಗ ಸುಟ್ಟು ತಿಂದಾಗ ಪಕ್ಕದ ಮನೆಗೂ ಅದರ ಪರಿಮಳ ಹರಡಿ ಹೊಟ್ಟೆಕಿಚ್ಚಾಗುತ್ತಿತ್ತು. ಆಗ ಅವರು ಮೀನು ಸುಟ್ಟು ನಮಗೆ ತೊಂದರೆ ಕೊಡುತ್ತಿದ್ದರು.

ಪ್ರತಿ ಮಳೆಗಾಲ ಹೊಸ ಹೊಸ ಅನುಭವ ಕೊಡುತ್ತಲೇ ವರ್ಷಗಳು ಉರುಳುತ್ತಿದ್ದವು. ಒಂದು ಮಳೆಗಾಲದಲ್ಲಿ ಸಿಡಿಲು ಹೊಡೆದು ತೆಂಗಿನ ಮರ ಸುಟ್ಟು 'ಕೇಡುಗಾಲ' ಅಂತ ಅಪ್ಪ ಹೆದರಿದ್ದು, ಅದೇ ವರ್ಷ ಅಜ್ಜಿ ತೀರಿಕೊಂಡಿದ್ದು, ಸಣ್ಣ ಮಳೆ ಬರುತ್ತಾ ಇದ್ದರೆ 'ಮಳೆ ಬಂತೋ ಮಾರಾಯಾ, ಕೊಡೆ ಹಿಡಿಯೋ ಸುಬ್ರಾಯಾ' ಅಂತ ಹಾಡುತ್ತ ಅಂಗಳದಲ್ಲಿ ಕುಣಿದಾಡುತ್ತಿದ್ದುದು, ಅಪರೂಪಕ್ಕೆ ಮಳೆಗಾಲದಲ್ಲಿ ಬಿಸಿಲು ಬಂದು ಮುಗಲಲ್ಲಿ ಮಳೆಬಿಲ್ಲು ಮೂಡಿತೆಂದರೆ ''ನೋಡಲ್ಲಿ ಮೂಡಿಹುದು ಮುಗಿಲಲ್ಲಿ ಮಳೆಬಿಲ್ಲು'' ಅಂತ ಅಕ್ಕ ಹಾಡತೊಡಗಿದರೆ ''ಕಾಮನಬಿಲ್ಲು, ಇಂದ್ರಚಾಪ'' ಅಂತ ತಮ್ಮ ಸಮಾನಾರ್ಥ ಶಬ್ದಗಳನ್ನು ಹೇಳುತ್ತಿದ್ದುದು ಎಲ್ಲ ಎಷ್ಟು ಬೇಗ ಕಳೆದುಹೋಗಿದೆ ! ಕಾಮನಬಿಲ್ಲಿನಷ್ಟೇ ಸುಂದರವಾದ, ಕ್ಷಣಿಕವಾದ ಬಾಲ್ಯ!

ಪ್ರತಿವರ್ಷ ಮಳೆ ಕಡಿಮೆಯಾಗುತ್ತಲೇ ಬಂತು, ಉಷ್ಣತೆ ಏರತೊಡಗಿತ್ತು. ಮಲೆನಾಡೂ ಬಯಲುಸೀಮೆಯಾಗತೊಡಗಿತ್ತು. ಪರಿಸರ ಪ್ರೇಮಿಗಳ ಸತತ ಪ್ರಯತ್ನದಿಂದ ಮತ್ತೆ ಕಾಡು ಬೆಳೆಯತೊಡಗಿದೆ. ಈಗ ವರ್ಷ ವರ್ಷ ಮಳೆ ಸಮೃದ್ಧವಾಗಿ ಸುರಿಯತೊಡಗಿದೆ. ಹೊಳೆ-ಹಳ್ಳ-ಕೊಳ್ಳ ತುಂಬಿ ಉಕ್ಕೇರಿ ಪ್ರವಾಹದಲ್ಲಿ ಎಷ್ಟೋ ಮನೆ-ಮಠ-ಹಳ್ಳಿಗಳು ಮುಳುಗುತ್ತಿವೆ. ಜಲಪಾತಗಳೆಲ್ಲ ಮರಳಿ ಗತವೈಭವ ಪಡೆಯುತ್ತಿವೆ.

ಮಳೆಗಾಗಿ ಪರ್ಜನ್ಯ ಜಪ ಮಾಡುತ್ತಾರೆ. ರುದ್ರಾಭಿಷೇಕ ಮಾಡಿಸುತ್ತಾರೆ. ಇನ್ನು ಕೆಲವರು ಕಪ್ಪೆ ಮದುವೆ - ಕತ್ತೆ ಮದುವೆ ಕೂಡ ಮಾಡುತ್ತಾರೆ. ಒಂದು ವ್ಯಂಗ್ಯ ಚಿತ್ರ ನೋಡಿದ ನೆನಪು ''ಮಳೆ ಬರಲಿ ಅಂತ ಕತ್ತೆಗಳಿಗೆ - ಮದುವೆ ಆಯ್ತಾ? ಈಗ ಮಳೆ ಹೆಚ್ಚಾಗಿದೆ – ಡೈವೋರ್ಸ್ ಮಾಡಿಸಬೇಕು'' ಅಂತ.

ಅಂತೂ ಈ ಸಲದ ಮಳೆಯಿಂದ ಭೂಮಿ ತಂಪಾಗಿ, ಹಸಿರು ಸೀರೆಯುಟ್ಟು ನಗುತ್ತಿದ್ದಾಳೆ. ತಾಯ ಒಡಲು ತಂಪಾಗಿದ್ದರೆ ಮಕ್ಕಳ ಬಾಳು ಹಸನು ! ನಾವೂ ಭಕ್ತಿಯಿಂದ ಮಾಯದ ಮಳೆಗೆ ವಂದಿಸೋಣವೆ ?

ವಿಜಯಾ ಶ್ರೀಧರ್
ಕೇರಾಫ್ ಡಾ|| ಕೆ. ಆರ್. ಶ್ರೀಧರ್, ೧ನೇ ಮುಖ್ಯರಸ್ತೆ, ರಾಜೇಂದ್ರನಗರ, ಶಿವಮೊಗ್ಗ - ೫೭೭ ೨೦೪.

# ಜಾಗತೀಕರಣ ಮತ್ತು ಮಾಧ್ಯಮಗಳು

ಜಿ. ರಾಮಕೃಷ್ಣ

**ಎಲ್ಲ ರೀತಿಯ ಮಾರುಕಟ್ಟೆಗಳನ್ನು ಅಂತರರಾಷ್ಟ್ರೀಯ ಬಂಡವಾಳವು ತನ್ನ ಅಧೀನಕ್ಕೆ ಒಳಪಡಿಸಿಕೊಳ್ಳಲು ಹವಣಿಸುತ್ತದೆ. ಶಿಕ್ಷಣ, ಆರೋಗ್ಯ, ಕೃಷಿ, ಸಾರಿಗೆ, ಮನರಂಜನೆಯ ಸಾಧನೆಗಳು, ಮಾಧ್ಯಮಗಳು, ವಿಜ್ಞಾನ-ತಂತ್ರಜ್ಞಾನ, ಎಲ್ಲವೂ ಅದರ ಅಧೀನದಲ್ಲಿರಬೇಕು. ''ಸೇವೆಗಳು'' ಎಂಬ ಹೆಸರಿನಡಿ ಕಾನೂನು ವ್ಯವಹಾರ, ವಿಮೆ, ಪ್ರಕಾಶನ, ಔಷಧಿ ತಯಾರಿಕೆ, ಮುಂತಾದುವನ್ನು ತುಂಬಿಕೊಳ್ಳಲು ಜಾಗತೀಕರಣದಲ್ಲಿ ಅವಕಾಶವನ್ನು ಕಲ್ಪಿಸುವುದು ಈ ಕಾರಣಕ್ಕೆ. ದುಡಿಮೆಗಾರನು ಜಗತ್ತಿನಲ್ಲಿ ಎಲ್ಲಿ ಬೇಕೆಂದರಲ್ಲಿ ಹೋಗುವಂತಿಲ್ಲ, ಆದರೆ ಅವನೆಲ್ಲೇ ದುಡಿದರೂ ಅವನ ಶ್ರಮದ ಫಲವನ್ನು ಜಗತ್ತಿನಲ್ಲಿ ಕೆಲವು ಪ್ರತಿಷ್ಠಿತರು ತಮದನ್ನಾಗಿಸಿಕೊಳ್ಳುತ್ತಾರೆ.**

ನಮ್ಮ ಮಾಧ್ಯಮಗಳು ಅನೇಕ ರೀತಿಗಳಲ್ಲಿ ಆಧುನಿಕ ಯುಗಕ್ಕೆ ಕಾಲಿಟ್ಟಿವೆ. ಪತ್ರಿಕೆಗಳು ಈಗ ಹಿಂದಿನಂತೆ ಮುದ್ರಣಗೊಳ್ಳುವುದಿಲ್ಲ. ಹೊಸ ತಾಂತ್ರಿಕತೆಯು ಕೆಲಸವನ್ನು ರಭಸದಿಂದ ನಡೆಸಲು ಅನುವು ನೀಡಿದೆ. ಸಂಚಾರಿ ದೂರವಾಣಿ ಎಲ್ಲ ಪತ್ರಕರ್ತರ ಜೇಬಿನಲ್ಲಿ ಇಲ್ಲವೆ ಕುತ್ತಿಗೆಯಲ್ಲಿ ಇರುವುದು ಸಹಜವೆನಿಸುತ್ತಿದೆ. ಬಹುಮಂದಿ ಗಣಕಯಂತ್ರಗಳಲ್ಲಿ ಕೆಲಸ ಮಾಡುವ ನೈಪುಣ್ಯ ಪಡೆದಿದ್ದಾರೆ. ತಾವು ವಿದ್ಯಾರ್ಥಿಗಳಾಗಿದ್ದಾಗ ಮತ್ತು ವೃತ್ತಿಯನ್ನು ಆರಂಭಿಸಿದ ನಂತರ ವ್ಯಾಸಂಗ ಮಾಡದಿದ್ದುದಕ್ಕೆಲ್ಲಾ ಇಂದು ಇಂಟರ್‌ನೆಟ್ ಮಾಹಿತಿಯ ಆಗರವಾಗಿದೆ. ಗ್ವಾಟಿಮಾಲಾ ಎಲ್ಲಿದೆಯೆಂಬುದನ್ನು ತಿಳಿಯದಿದ್ದವರು ಸಹ ಆ ದೇಶದ ರಾಜಕೀಯ, ಆರ್ಥಿಕತೆ, ಸಾಮಾಜಿಕ ದ್ವಂದ್ವಗಳು, ಇವನ್ನು ಕುರಿತಂತೆ ಅಧಿಕಾರಯುತವಾದ ಲೇಖನವೊಂದನ್ನು ಕೆಲವೇ ಗಂಟೆಗಳಲ್ಲಿ ಸಿದ್ಧಪಡಿಸಲು ಸಾಧ್ಯವಿದೆ. ಹಾಗೆ ಮಾಡುತ್ತಿರುವವರ ಸಂಖ್ಯೆಯೂ ಹೆಚ್ಚುತ್ತಿದೆ. ''ಅನಗತ್ಯ ಓದು'' ಎಂಬ ಹೊಸ ಪದಗುಚ್ಛ ಈಗ ಬಳಕೆಗೆ ಬರುತ್ತಿದೆ. ಇದರ ನೇರ ಪರಿಣಾಮವೆಂದರೆ ವಿಶ್ಲೇಷಣೆಗಳು ಸ್ವಕೀಯ ಸನ್ನಿವೇಶ ಮತ್ತು ಅಗತ್ಯಗಳನ್ನು ಗಣನೆಗೆ ತೆಗೆದುಕೊಳ್ಳದಿರುವುದು. ರಾಬರ್ಟ್ ಮುಗಾಬೆ ತನ್ನ ದೇಶದಲ್ಲಿ ಭೂಮಾಲಿಕತ್ವದ ಬಗ್ಗೆ ಒಂದು ನಿಲುವು ತೆಗೆದುಕೊಂಡರೆ ಅದನ್ನು ಪರಾಮರ್ಶೆ ಮಾಡುವಾಗ ಭಾರತದ ವೃತ್ತಪತ್ರಿಕೆಗಳು ಜಿಂಬಾವೆಯ ಚರಿತ್ರೆಯನ್ನು ಅವಲೋಕಿಸುವ ಕಷ್ಟ ತೆಗೆದುಕೊಳ್ಳುವುದಿಲ್ಲ. ನಮ್ಮದೇ ದೇಶದಲ್ಲಿ ಇಪ್ಪತ್ತನೆಯ ಶತಮಾನದಲ್ಲಿ ಭೂಮಿಗಾಗಿ ಎಂತೆಂತಹ ಚಳುವಳಿಗಳು ನಡೆದಿವೆಯೆಂಬುದನ್ನು ಸಹ ನೆನಪಿಸಿಕೊಳ್ಳಲು ಎಷ್ಟೋ ಪತ್ರಿಕೆಗಳು ಹಿಂಜರಿಯುತ್ತವೆ. ಸುಲಭದ ಹಾದಿಯನ್ನು ಕಂಡುಕೊಳ್ಳುವ ತವಕದಲ್ಲಿ ಸ್ವಂತದ ದೃಷ್ಟಿಕೋನವನ್ನು ಬೆಳೆಸಿಕೊಳ್ಳುವ ಕಾತುರತೆ ಕರಗಿಹೋಗುತ್ತದೆ. ಬ್ರಿಟನ್ನಿನ ಅಥವಾ ಅಮೆರಿಕಾದ ಯಾವುದೋ ಪತ್ರಿಕೆಯು ಪ್ರಕಟಿಸಿರುವ ಲೇಖನವೊಂದನ್ನು ಭಾರತದ ಓದುಗರಿಗೆ ತಂಗುಳನ್ನದ ರೀತಿಯಲ್ಲಿ ಉಣಬಡಿಸಲಾಗುತ್ತದೆ ಮತ್ತು ಆ ಲೇಖನದ ಇಂಗಿತವು ನಮ್ಮ ಇಂಗಿತವೂ ಆಗಬೇಕೆಂಬ ನಿರೀಕ್ಷೆಯನ್ನು ಜಾಣತನದಿಂದ ಪರೋಕ್ಷವಾಗಿ ಪಕ್ವಮಾಡಿಕೊಳ್ಳಲಾಗುತ್ತದೆ. ಕೆಲವು ಶತಮಾನಗಳ ಕಾಲ ಬ್ರಿಟನ್ನಿನ ವಸಾಹತುದೇಶವಾಗಿದ್ದ ಜಿಂಬಾವೆಯಲ್ಲಿ ಕೆಲವು ಬಿಳಿಯರು ಸಾವಿರಾರು ಹೆಕ್ಟೇರುಗಳಷ್ಟು ಭೂಮಿಯ ಮಾಲಿಕರಾದದ್ದು ಹೇಗೆ ಮತ್ತು ಇಂದಿನ ಜಿಂಬಾವೆ ರೈತರಿಗೆ ಭೂಮಿ ದೊರಕಿಸಿಕೊಡುವುದು ಅಗತ್ಯವಲ್ಲವೆ, ಎಂಬ ಪ್ರಶ್ನೆಗಳನ್ನು ಹಾಕಿಕೊಳ್ಳದಿದ್ದರೆ ಸಮಸ್ಯೆಯನ್ನು ಚರಿತ್ರಾತ್ಮಕವಾಗಿ ನೋಡಿದಂತೆ ಆಗುವುದಿಲ್ಲ. ಆದರೆ ನಮ್ಮ ಹಲವು ಪತ್ರಿಕೆಗಳಿಗೆ ಇಂತಹ ವಿಧಾನದಲ್ಲಿ ನಂಬಿಕೆ ಮೂಡಿಲ್ಲ.

ಭಾರತದ ಸನ್ನಿವೇಶ ಮತ್ತು ಭವಿಷ್ಯ ಕುರಿತು ಸಹ ಇಂಥದೇ ಅಲ್ಪದೃಷ್ಟಿ ಕಂಡುಬಂದರೆ ಆಶ್ಚರ್ಯವಿಲ್ಲ. ಇತ್ತೀಚಿನ ಒಂದು ಪ್ರಸಂಗವು ಇದಕ್ಕೊಂದು ಉದಾಹರಣೆಯಾಗಿದೆ. ನಮ್ಮ ದೇಶದ ಹೆಸರಾಂತ ವಿಜ್ಞಾನಿಗಳಾದ ಮಶೇಲ್ಕರ್ ಅವರು ಒಂದು ವರದಿ ನೀಡಿದ್ದಾರೆ. ಅದು ಕೇಂದ್ರ ಸರ್ಕಾರದ ಪರಿಶೀಲನೆಯಲ್ಲಿದೆ. ಪೇಟೆಂಟ್ ಕಾಯಿದೆಯಂತಹ ಪ್ರಮುಖ ವಿಷಯ ವರದಿಯಲ್ಲಿ ಚರ್ಚೆಗೆ ಬಂದಿದೆ. ಅಂತೆಯೇ ನಮ್ಮ ಆಂತರಿಕ ಅರ್ಥವ್ಯವಸ್ಥೆಯ ಬಗೆಗಿನ ಬೇರೆ ಹತ್ತಾರು ವಿಷಯಗಳು ಆ ವರದಿಯ ವ್ಯಾಪ್ತಿಯಲ್ಲಿ ಬರುತ್ತವೆ. ಅವರ ನೇತೃತ್ವದ ಆಯೋಗದ ಬೇರೊಬ್ಬ ಸದಸ್ಯರ ಅಭಿಪ್ರಾಯಗಳನ್ನು ದಾಖಲು ಮಾಡಲು ಸಹ ಅವಕಾಶ ನೀಡದೆ ಡಾ|| ಮಶೇಲ್ಕರ್ ಅವರು ಏಕಪಕ್ಷೀಯವಾಗಿ ವರದಿಯನ್ನು ಸಿದ್ಧಗೊಳಿಸಿದ್ದಾರೆಂದು ತಿಳಿದು ಬಂದಿದೆ. ಅವರೇ ಸಿದ್ಧಗೊಳಿಸಿದರೋ ಅಥವಾ ವಿದೇಶಿ ಮೂಲದ ಯಾವುದಾದರೂ ಹಿತಾಸಕ್ತಿಯು ಕೆಲಸ ಮಾಡಿದೆಯೋ ಎಂಬ ಅನುಮಾನವು ಈಗ ಸಾರ್ವತ್ರಿಕವಾಗಿ ಕಂಡುಬರುತ್ತಿದೆ. ವಿದೇಶಿ ಕಂಪನಿಯೊಂದು ತನ್ನ ದೃಷ್ಟಿಯಿಂದ ಯಾವುದು ಸಾಧುವೆಂದು ಉಲ್ಲೇಖಿಸಿತ್ತೋ ಅದನ್ನು ಇಡಿಯಾಗಿ ಮಶೇಲ್ಕರ್ ತಮ್ಮ ವರದಿಯಲ್ಲಿ ಎತ್ತಿಹಾಕಿಕೊಂಡಿದ್ದಾರೆ. ಅದು ಬಹಿರಂಗವಾದಾಗ ಆ ಭಾಗವನ್ನು ಹಿಂತೆಗೆದುಕೊಳ್ಳಲು ಅನುಮತಿಗಾಗಿ ಬೇಡಿಕೆ ಸಲ್ಲಿಸಿದ್ದಾರೆ. ಮಶೇಲ್ಕರರಂತಹ ಹಿರಿಯ ವಿಜ್ಞಾನಿ ಹೀಗೇಕೆ ಮಾಡಿದರೆಂಬುದನ್ನು ತಿಳಿಯುವುದು ಕಷ್ಟವೇನಲ್ಲ. ಅವರ ಅರಿವಿಲ್ಲದಂತೆಯೇ ಈಗ ಎಲ್ಲೆಲ್ಲೂ ವ್ಯಾಪಕವಾಗಿರುವ ಒಂದು ಬೌದ್ಧಿಕ ಬಂಧನದಲ್ಲಿ ಅವರು ಸಿಲುಕಿಕೊಂಡಿದ್ದಾರೆ. ಇಂತಹ ನೂರಾರು ಸಂಗತಿಗಳು ನಡೆಯುತ್ತಿವೆ. ೧೯೯೦ಕ್ಕೆ ಮುಂಚೆ ಹಾಗೆಲ್ಲಾ ನಡೆದಿರಲಿಲ್ಲವೆಂದು ಇದರರ್ಥವಲ್ಲ, ಆಗಲೂ ಇಂತಹ ಲೋಪಗಳು ಇದ್ದಿರಬಹುದು. ಆದರೆ ಅದು ಘೋಷಿತ ನಿಲುವಿನ ಅವಿಭಾಜ್ಯವಾದ ಭಾಗವಾಗಿರುತ್ತಿರಲಿಲ್ಲ. ಮುಕ್ತ ಮಾರುಕಟ್ಟೆಯ ಸಿದ್ಧಾಂತದ ಬೆನ್ನು ಹತ್ತಿದ ನಂತರ ಇಂತಹ ಪರಿಪಾಠವು ಅಜಾಗರೂಕತೆ ಅಥವಾ ನ್ಯೂನತೆ ಎನಿಸಿಕೊಳ್ಳುವುದರ ಬದಲು ನಿಯಮದ ಅಂಗವಾಗಿ ಹೊರಬರುತ್ತಿದೆ. ಜಾಗತೀಕರಣವೆನ್ನುವುದರ ಪರಿಣಾಮಗಳಲ್ಲಿ ಇದು ಒಂದು ಪ್ರಮುಖವಾದ ಆತಂಕವಾಗಿದೆ.

ಮಾಧ್ಯಮಗಳೆಂದರೆ ಇಂದು ಕೇವಲ ಪತ್ರಿಕೆಗಳಲ್ಲ. ದೂರದರ್ಶನದ ನೂರಾರು ಚಾನೆಲ್‌ಗಳು ಸತತವಾಗಿ ಒಂದಿಲ್ಲೊಂದು ಸಂದೇಶವನ್ನು ನಮ್ಮ ಜನರಿಗೆ ತಲುಪಿಸುತ್ತಿವೆ. ಐವತ್ತು ವರ್ಷಗಳ ಹಿಂದೆ ಬರ್ಟ್ರಂಡ್ ರಸೆಲ್ ತನ್ನೊಂದು ಪ್ರಬಂಧದಲ್ಲಿ ಇಪ್ಪತ್ತನೆಯ ಶತಮಾನದ ಒಂದು ವೈಶಿಷ್ಟ್ಯವನ್ನು ಪ್ರಸ್ತಾಪಿಸುತ್ತಾ ''ಆಧುನಿಕ ಸಜಾತೀಯತೆ ಅಥವಾ ಸಮಾನತೆ'' ಹರಡುತ್ತಿದೆಯೆಂದು ವಿಶ್ಲೇಷಿಸಿದ್ದರು. ಅಮೆರಿಕಾದ ಶ್ರೀಮಂತ ಮತ್ತು ಸೋಮಾಲಿಯಾದ ಬಡವ, ಇಬ್ಬರೂ ಒಂದೇ ಹಾಡು ಕೇಳುತ್ತಾರೆ, ಒಂದೇ ಚಲನಚಿತ್ರ ನೋಡುತ್ತಾರೆ, ಒಂದೇ ರೀತಿಯ ಅಂಗಡಿಯಲ್ಲಿ ಸಾಮಾನು ಕೊಳ್ಳುತ್ತಾರೆ ಮತ್ತು ಒಂದೇ ರೀತಿಯ ಮಾಧ್ಯಮ ಪ್ರಭುಗಳ ಹಿಡಿತದಲ್ಲಿ ಇರುತ್ತಾರೆ. ಇದೇ ಇಂದಿನ ಏಕಜಾತೀಯತೆ. ಗಟ್ಟಿಯಾಗಿ ಅದನ್ನು ಇಂದಿನ ನವ-ವಸಾಹತುಶಾಹಿ ಪ್ರಕ್ರಿಯೆ ಎಂದು ಹೇಳುವ ಬದಲು ಗೌರವವಾಗಿ ಜಾಗತೀಕರಣವೆಂದು ನಾಮಕರಣ ಮಾಡಲಾಗಿದೆ. ಜಾಗತೀಕರಣದ ಈ ಆಯಾಮವನ್ನು ಗುರುತಿಸದೆ ಅದರ ಪ್ರಭಾವವನ್ನು ವ್ಯಾಖ್ಯಾನಿಸುವ ಎಲ್ಲ ಪ್ರಯತ್ನಗಳೂ ವ್ಯರ್ಥವಾದವು. ಅಂತಹ ಪ್ರಯತ್ನದಲ್ಲಿ ಜಾಣತನ ಇರಬಹುದು, ಪ್ರೌಢಜ್ಞಾನವಿರಬಹುದು; ಆದರೆ ನಮ್ಮ ಅಸ್ತಿತ್ವದ ಬಗ್ಗೆ ಕಾಳಜಿ ಇರುವುದು ಅಪರೂಪ. ಪ್ರಜಾಪ್ರಭುತ್ವದ ಘಟಕಗಳು ಸ್ವತಂತ್ರವಾಗಿ ಕೆಲಸ ಮಾಡುವುದರ ಬದಲು ಯಾರದೋ ಆಣತಿಯಂತೆ ವರ್ತಿಸುವ ಸಂದರ್ಭಗಳು ನಮ್ಮ ಅನುಭವಕ್ಕೆ ಬಂದಿವೆ. ವಾರ್ಷಿಕ ಆಯವ್ಯಯದ ವರದಿಯೊಂದನ್ನು ಶಾಸನ ಸಭೆಯಲ್ಲಿ ಮಂಡಿಸುವ ಮೊದಲು ವಿಶ್ವ ಬ್ಯಾಂಕಿನ ವಕ್ತಾರರ ಅವಗಾಹನೆಗೆ ನೀಡಲಾಗಿತ್ತೆಂದು ನಮ್ಮ ಒಂದು ರಾಜ್ಯದಲ್ಲಿ ಕೆಲವರ್ಷಗಳ ಹಿಂದೆ ಗುಲ್ಲೆದ್ದಿತ್ತು. ಜಾಗತೀಕರಣದ ರೂವಾರಿಗಳಲ್ಲಿ ಈ ಬ್ಯಾಂಕಿನ ಪಾತ್ರವು ಹಿರಿದಾದ್ದರಿಂದ ಅದರ ಚಿಂತನೆಯ ಆಕಾಂಕ್ಷೆಗಳನ್ನು ಪರಿಚಯಿಸಿಕೊಳ್ಳುವುದು ಪ್ರಸ್ತುತವೆನಿಸುತ್ತದೆ. ಏಕೆಂದರೆ ನಮ್ಮ ದೇಶದಲ್ಲಿ ಯಾರಿಗೆ, ಎಷ್ಟು, ಸಹಾಯಧನ ನೀಡಬೇಕೆಂಬುದನ್ನೂ, ಏನನ್ನೂ ನೀಡಕೂಡದೆಂದು ಒತ್ತಾಯ ಹೇರುವುದನ್ನೂ ಈ ಬ್ಯಾಂಕ್ ಮಾಡಿದೆ ಮತ್ತು ಮಾಡುತ್ತಿದೆ.

೧೯೯೭ರಲ್ಲಿ ಪ್ರಕಟವಾದ ಒಂದು ಪುಸ್ತಕದಲ್ಲಿ ಜೋಶುವಾ ಕಾರ್ಲಿನರ್ ದಾಖಲಿಸುವ ಪ್ರಸಂಗವೊಂದನ್ನು

ಮನನ ಮಾಡಿಕೊಳ್ಳಬೇಕು: ೧೯೯೧ರ ಅಂತ್ಯದ ವೇಳೆಗೆ ಆಗ್ಗೆ ವಿಶ್ವ ಬ್ಯಾಂಕಿನ ಪ್ರಮುಖ ಅರ್ಥಶಾಸ್ತ್ರಜ್ಞನಾಗಿದ್ದ ಲಾರೆನ್ಸ್ ಸಮರ್ಸ್ ತನ್ನ ಸಹೋದ್ಯೋಗಿಗೆ ಒಂದು ರಹಸ್ಯ ಟಿಪ್ಪಣಿ ಕಳಿಸಿದ್ದ. ಅದರಲ್ಲಿದ್ದುದು ಇದು : ''ನಾವು ನಾವೇ ಮುಕ್ತವಾಗಿ ಮಾತನಾಡಿಕೊಳ್ಳೋಣ. ಕೊಳಕು ಕಾರ್ಖಾನೆಗಳಿವೆಯಲ್ಲ, ಅವನ್ನು ಹೆಚ್ಚು ಹೆಚ್ಚಾಗಿ ಅನಭಿವೃದ್ಧ ದೇಶಗಳಿಗೆ ವರ್ಗಾಯಿಸಲು ವಿಶ್ವ ಬ್ಯಾಂಕ್ ಎಲ್ಲ ರೀತಿಗಳಲ್ಲೂ ಶ್ರಮಿಸಬೇಕಲ್ಲವೆ ?'' ಈ ಸಮರ್ಸ್, ನಂತರ ಕ್ಲಿಂಟನ್ ಅಧ್ಯಕ್ಷನಾಗಿದ್ದಾಗ ಅರ್ಥಸಚಿವನಾಗಿದ್ದ, ಆಮೇಲೆ ಹಾರ್ವರ್ಡ್ ವಿಶ್ವವಿದ್ಯಾಲಯದ ಅಧ್ಯಕ್ಷನಾಗಿದ್ದ. ಆತನ ಸಲಹೆಯಲ್ಲಿ ಅನಭಿವೃದ್ಧ ದೇಶಗಳು ವಿಷಪೂರಿತ ಕಾರ್ಖಾನೆಗಳಿಗೆ ಯೋಗ್ಯವಾದ ಜಾಗಗಳು; ಏಕೆಂದರೆ, ಪಾಶ್ಚಿಮಾತ್ಯ ರಾಷ್ಟ್ರಗಳ ಜನರ ಜೀವಗಳಿಗಿಂತ ಈ ದೇಶಗಳ ಜೀವಗಳು ಕಡಿಮೆ ಬೆಲೆಯವು ಮತ್ತು ಅಲ್ಲಿಗಿಂತಲೂ ಇಲ್ಲಿ ಕೆಲಸಗಾರರ ದಿನಗೂಲಿಯೂ ಬಹಳ ಕಮ್ಮಿ. ಲಾಭದ ಪ್ರಮಾಣ ಹೆಚ್ಚಲು ಇದು ಆದರ್ಶ ಸನ್ನಿವೇಶ. ಮುಂದುವರಿದು ಟಿಪ್ಪಣಿಯಲ್ಲಿ ಆತ ಇದನ್ನೇ ಹೇಳಿದ್ದ: ''ವಿಷಪೂರಿತ ತ್ಯಾಜ್ಯ ವಸ್ತುಗಳನ್ನು ಕಡಿಮೆ ಕೂಲಿ ಇರುವ ದೇಶಗಳಲ್ಲಿ ವಿಲೇವಾರಿ ಮಾಡುವುದರ ಹಿಂದೆ ಒಂದು ಅರ್ಥಶಾಸ್ತ್ರೀಯ ತರ್ಕವಿದೆ. ನಾವದನ್ನು ಅಂಗೀಕರಿಸಬೇಕು.'' ರುತ್ ಬೆಟ್ವಿನಾ ಬ್ರಿನ್ ಎಂಬೊಬ್ಬಾಕೆ ಈ ಟಿಪ್ಪಣಿಯನ್ನು ಬಹಿರಂಗಗೊಳಿಸಿ ಟೀಕಿಸಿದಾಗ ಸಮರ್ಸ್ ಹೇಳಿದ : ''ಹಾಗಲ್ಲ. ನನ್ನ ವ್ಯಂಗ್ಯಮಿಶ್ರಿತ ನಗೆಹೊನಲನ್ನು ಹರಿಸಲು ಹಾಗೆ ಹೇಳಿದ್ದೆ, ಅಷ್ಟೆ.'' ಅಂದರೆ, ಇಂತಹ ಅರ್ಥಶಾಸ್ತ್ರಜ್ಞರ ವ್ಯಂಗ್ಯಕ್ಕೆ ಅನಭಿವೃದ್ಧ ದೇಶಗಳು ಬಲಿಯಾಗಬೇಕು, ಎಂದರ್ಥ. ಎಲೆನ್ ಮೇಕ್ಸಿನ್ಸ್ ವುಡ್ ಎಂಬಾಕೆ ಹೇಳುವಂತೆ, ಜಾಗತೀಕರಣವು ಕೆಲವು ನೀತಿಗಳ ಆಯ್ಕೆಯನ್ನು ಪ್ರತಿನಿಧಿಸುತ್ತದೆ. ಅದು ಬಂಡವಾಳದ ಅವಶ್ಯಕತೆಗಳನ್ನು ವಿಶ್ವದ ವ್ಯವಸ್ಥೆಯ ಬದಲಾಯಿಸುವಿಕೆಯ ಮೂಲಕ ಪೂರೈಸಿಕೊಳ್ಳಲು ಹವಣಿಸುತ್ತದೆ. ಇದು ತೀರಾ ಹೊಸದಾದ ವಿಷಯವೇನಲ್ಲ. ವಸಾಹತುವಾದದ ಮೂಲಾಧಾರ ಇದೇ ಆಗಿತ್ತು. ಈಗ ಅದಕ್ಕೆ ಭವ್ಯವಾದ ಹೊಸ ಹೆಸರು ನೀಡಲಾಗಿದೆ, ಅಷ್ಟೆ.

ಎಲ್ಲ ರೀತಿಯ ಮಾರುಕಟ್ಟೆಗಳನ್ನು ಅಂತರರಾಷ್ಟ್ರೀಯ ಬಂಡವಾಳವು ತನ್ನ ಅಧೀನಕ್ಕೆ ಒಳಪಡಿಸಿಕೊಳ್ಳಲು ಹವಣಿಸುತ್ತದೆ. ಶಿಕ್ಷಣ, ಆರೋಗ್ಯ, ಕೃಷಿ, ಸಾರಿಗೆ, ಮನರಂಜನೆಯ ಸಾಧನೆಗಳು, ಮಾಧ್ಯಮಗಳು, ವಿಜ್ಞಾನ-ತಂತ್ರಜ್ಞಾನ, ಎಲ್ಲವೂ ಅದರ ಅಧೀನದಲ್ಲಿರಬೇಕು. ''ಸೇವೆಗಳು'' ಎಂಬ ಹೆಸರಿನಡಿ ಕಾನೂನು ವ್ಯವಹಾರ, ವಿಮೆ, ಪ್ರಕಾಶನ, ಔಷಧಿ ತಯಾರಿಕೆ, ಮುಂತಾದುವನ್ನು ತುಂಬಿಕೊಳ್ಳಲು ಜಾಗತೀಕರಣದಲ್ಲಿ ಅವಕಾಶವನ್ನು ಕಲ್ಪಿಸುವುದು ಈ ಕಾರಣಕ್ಕೆ. ದುಡಿಮೆಗಾರನು ಜಗತ್ತಿನಲ್ಲಿ ಎಲ್ಲಿ ಬೇಕೆಂದರಲ್ಲಿ ಹೋಗುವಂತಿಲ್ಲ, ಆದರೆ ಅವನೆಲ್ಲೇ ದುಡಿದರೂ ಅವನ ಶ್ರಮದ ಫಲವನ್ನು ಜಗತ್ತಿನಲ್ಲಿ ಕೆಲವು ಪ್ರತಿಷ್ಠಿತರು ತಮ್ಮದನ್ನಾಗಿಸಿಕೊಳ್ಳುತ್ತಾರೆ. ನಮ್ಮ ದೇಶವು ಇದನ್ನೆದುರಿಸಲು ಮಾನಸಿಕವಾಗಿ ಸಿದ್ಧವಿಲ್ಲ; ಆದ್ದರಿಂದ ನಮ್ಮ ಆರ್ಥಿಕ ಮತ್ತು ರಾಜಕೀಯ ನೀತಿಗಳು ಜಾಗತೀಕರಣಕ್ಕೆ ಪೂರಕವಾಗಿದ್ದು, ಜನರ ಹಿತಕ್ಕೆ ವಿರೋಧವಾಗಿವೆ. ಸ್ವಾವಲಂಬನೆಯನ್ನು ಒಂದು ಆಶಯವಾಗಿ ಇರಿಸಿಕೊಳ್ಳುವುದು ತೀರಾ ಸಂಕುಚಿತ ಮನೋವೃತ್ತಿ ಎಂಬಂತೆ ಬಿಂಬಿಸಲಾಗುತ್ತದೆ. ಆದರೆ ಹಲವು ಕ್ಷೇತ್ರಗಳಲ್ಲಿ ವಿದೇಶಿ ಪ್ರವೇಶವನ್ನು ತೀವ್ರವಾಗಿ ವಿರೋಧಿಸುವ ಪ್ರವೃತ್ತಿಯೂ ಇದೆ. ಉದಾಹರಣೆಗೆ, ವಿದೇಶಿ ಬಂಡವಾಳವು ಪತ್ರಿಕೆಗಳ ಮಾಧ್ಯಮದ ಕ್ಷೇತ್ರಕ್ಕೆ ಲಗ್ಗೆ ಇಡಕೂಡದೆಂದು ಹೇಳುವ ಪತ್ರಿಕೆಗಳು ಅದೇ ಬಂಡವಾಳವು ದೂರದರ್ಶನದ ಕ್ಷೇತ್ರವನ್ನು ಆಕ್ರಮಿಸಿದಾಗ ಚಕಾರವೆತ್ತುವುದಿಲ್ಲ. ವಕೀಲರು ತಮ್ಮ ವೃತ್ತಿಯನ್ನು ವಿದೇಶಿ ಕಂಪನಿಗಳು ಇಲ್ಲಿ ಕಸಿದುಕೊಳ್ಳಕೂಡದೆಂದು ಹಟ ಹಿಡಿಯುತ್ತಾರೆ, ಆದರೆ ಕೃಷಿ ಕ್ಷೇತ್ರವನ್ನು ಜಾಗತೀಕರಣವು ಕಬಳಿಸುತ್ತಿದ್ದರೆ ಮೂಕರಾಗಿ ಅದನ್ನು ವೀಕ್ಷಿಸುತ್ತಾರೆ. ಆದರೆ ಕೇಂದ್ರದಲ್ಲಿ ಆಡಳಿತ ನಡೆಸುವ ಪ್ರಮುಖ ರಾಜಕೀಯ ಪಕ್ಷಗಳು, ವಿಶೇಷತಃ ಭಾರತೀಯ ಜನತಾ ಪಕ್ಷ ಮತ್ತು ಕಾಂಗ್ರೆಸ್, ಎಲ್ಲ ಕ್ಷೇತ್ರಗಳನ್ನೂ ಜಾಗತೀಕರಣದ ಕಪ್ಪು ನೆರಳಿಗೆ ತಳ್ಳುವ ಹುನ್ನಾರವನ್ನು ತಮ್ಮದಾಗಿಸಿಕೊಂಡಿವೆ. ಹತ್ತಿ, ಬೇಳೆ, ಕಬ್ಬು, ಇತ್ಯಾದಿಗಳನ್ನು ಬೆಳೆಯುವ ರೈತರಿಗೆ ತಮ್ಮ ಉತ್ಪನ್ನಗಳಿಗೆ ಸರಿಯಾದ ಬೆಲೆ ದೊರಕದಿರುವುದಕ್ಕೆ ಕಾರಣವೇನೆಂದು ತಿಳಿದರೂ ಅದರ ಮೂಲೋತ್ಪಾಟನೆಗಾಗಿ ಹೋರಾಡುವುದು ದುಷ್ಕರವಾಗಿದೆ. ಆದ್ದರಿಂದ ಆತ್ಮಹತ್ಯೆಗಳ ಸರಮಾಲೆ ನಮ್ಮ ಮುಂದಿದೆ. ನಮ್ಮ ಎಷ್ಟೋ ಮಾಧ್ಯಮಗಳಿಗೆ ಇದು ದೊಡ್ಡ ಸುದ್ದಿಯೇ ಅಲ್ಲ. ರೋಚಕವಾಗಿರುವಂತಹ ಸುದ್ದಿ ಅವಕ್ಕೆ ಬೇಕು. ಉದಾಹರಣೆಗೆ, ದೆಹಲಿಯ ಶ್ರೀಮಂತನೊಬ್ಬನ ಮಗುವಿನ ಅಪಹರಣವಾದಾಗ ಎಲ್ಲ ಮಾಧ್ಯಮಗಳೂ ನಾಲ್ಕೈದು ದಿನ ಸತತವಾಗಿ ಅದನ್ನು ಕೇಂದ್ರೀಕರಿಸಿದವು. ಪತ್ರಿಕೆಗಳಲ್ಲಿ ಪುಟಗಟ್ಟಲೆ ಅದಕ್ಕೆ ಮೀಸಲು, ದೂರದರ್ಶನದಲ್ಲಿ ದಿನಗಟ್ಟಲೆ ಅದಕ್ಕೆ ಪ್ರಚಾರ. ಆದರೆ ಸಾವಿರ ಸಂಖ್ಯೆಯಲ್ಲಿ ರೈತರು ಆತ್ಮಹತ್ಯೆ ಮಾಡಿಕೊಂಡಾಗ ಮಾಧ್ಯಮಗಳಿಗೆ ಅದು ಮುಖ್ಯವಾಗುವುದಿಲ್ಲ. ಏಕೆಂದರೆ ಜಾಗತೀಕರಣದ ಕರಿ ನೆರಳಲ್ಲಿ ಮೌಲ್ಯಗಳ ಬಗೆಗಿನ ತಿಳುವಳಿಕೆಯಲ್ಲಿ ವ್ಯತ್ಯಾಸಗಳುಂಟಾಗಿವೆ. ಅದರ ಪರಿಣಾಮವಾಗಿ ಪತ್ರಿಕೆಗಳಲ್ಲಿ ಬ್ರಿಟ್ನಿ ಸ್ಪಿಯರ್ಸ್‌ಗಳ ಒಳ ಉಡುಪುಗಳನ್ನು ಕುರಿತು ಉದ್ದುದ್ದದ ವರದಿಗಳಿರುತ್ತವೆ, ಜನರ ಪ್ರತಿಭಟನೆಗಳ ಬಗ್ಗೆ ಎರಡು ವಾಕ್ಯ ಬಂದರೆ ಅದೇ ಪುಣ್ಯ!

ಜಾಗತೀಕರಣವೆಂಬುದು ಇಲ್ಲದಿದ್ದರೆ ಇದೆಲ್ಲಾ ಸಮರ್ಪಕವಾಗಿ ಇರುತ್ತಿತ್ತೇ, ಎಂಬ ಪ್ರಶ್ನೆ ಅಪ್ರಕೃತವಲ್ಲ. ಆದರೆ ನಮ್ಮ ಪ್ರಭುತ್ವದ ಅಂಗಾಂಗಗಳು ಜಾಗತೀಕರಣದ ಅಮಲಿಗೆ ತುತ್ತಾಗಿವೆಯೆಂಬುದು ಹೆಚ್ಚು ಪ್ರಸ್ತುತ. ಇಂತಹ ಅಂತರರಾಷ್ಟ್ರೀಯ ಸಂದರ್ಭದಲ್ಲಿ ಜಾಗತೀಕರಣವು ಹೇಗೆ ಕೆಲಸ ಮಾಡುತ್ತದೆಂದರೆ ಬಲಿ ತೆಗೆದುಕೊಳ್ಳುವವನು ಮತ್ತು ಬಲಿಯಾದವನು, ಇಬ್ಬರೂ ಒಂದೇ ಭಾಷೆಯಲ್ಲಿ ವ್ಯವಹರಿಸುತ್ತಾರೆ. ಉದಾಹರಣೆಗೆ, ''ಭಯೋತ್ಪಾದನೆಯ ವಿರುದ್ಧದ ಯುದ್ಧ'' ಎಂಬ ಮಾತನ್ನೇ ನೋಡೋಣ. ಭಯೋತ್ಪಾದನೆಯನ್ನು ಸಮರ್ಥಿಸುವುದು ಈ ಮಾತಿನ ಉದ್ದೇಶವಲ್ಲ, ಆದರೆ ಭಯೋತ್ಪಾದನೆಗೆ ಕಾರಣವಿರುತ್ತದೆಂಬುದನ್ನು ತಳ್ಳಿಹಾಕುವಂತಿಲ್ಲ. ಒಂದು ದೇಶದ ಮೇಲೆ ಆಕ್ರಮಣ ನಡೆಸಿ ಅಲ್ಲಿಯ ಸಂಪತ್ತನ್ನು ಸೂರೆಗೊಳ್ಳುವ ರಾಷ್ಟ್ರವನ್ನು ಸೂರೆಗೊಳಗಾದ ದೇಶದ ಜನ ಹೇಗೆ ಎದುರಿಸಬೇಕು ? ಮಿಲಿಟರಿ ಶಕ್ತಿಯಿಂದ ಇದು ಅಸಾಧ್ಯ. ಅಂತರರಾಷ್ಟ್ರೀಯ ಸಂಸ್ಥೆಗಳೂ ಇವೇ ಆಕ್ರಮಣಕಾರರ ಕೈಕೂಸುಗಳಾಗಿವೆ. ಅದು ವಿಶ್ವರಾಷ್ಟ್ರ ಸಂಸ್ಥೆ ಇರಬಹುದು, ಅಂತರರಾಷ್ಟ್ರೀಯ ನ್ಯಾಯಾಲಯ ಇರಬಹುದು. ಹಾಗಿದ್ದರೆ ಹತಾಶರಾದ ಜನ ಅನುಸರಿಸ ಬಹುದಾದ ಒಂದು ಮಾರ್ಗ ಭಯೋತ್ಪಾದನೆ. ಆ ದೇಶದಿಂದ ಕಾಲ್ತೆಗೆಯುವುದು ಭಯೋತ್ಪಾದನೆಯನ್ನು ನಿವಾರಿಸಲು ಇರುವ ಮೊದಲ ಕ್ರಮ. ಆದರೆ ಅದನ್ನು ಮಾಡುವುದಿಲ್ಲ; ಬದಲಾಗಿ, ಇನ್ನೂ ಹೆಚ್ಚು ಹಿಂಸೆ, ದೌರ್ಜನ್ಯ, ತುಳಿತ. ಭಯೋತ್ಪಾದನೆಯೂ ಉಗ್ರರೂಪ ತಾಳುತ್ತದೆ ! ಹೀಗಿರುವಾಗ ಅಮೆರಿಕಾ ಮತ್ತು ಭಾರತ, ಎರಡು ದೇಶಗಳೂ ಒಂದೇ ರೀತಿಯಲ್ಲಿ ''ಭಯೋತ್ಪಾದನೆಯ ವಿರುದ್ಧದ ಯುದ್ಧ'' ಎಂಬುದನ್ನು ಪರಿಭಾವಿಸಿಕೊಳ್ಳಲು ಶಕ್ಯವೆ ? ಅಮೆರಿಕಾ ತನ್ನ ದುಷ್ಕೃತ್ಯಗಳಿಂದಾಗಿ ಭಯೋತ್ಪಾದನೆಗೆ ಕಾರಣವಾಗಿದೆ. ಆದರೆ ಭಾರತ ಎದುರಿಸುವ ಭಯೋತ್ಪಾದನೆ ಅಂತಹ ಕಾರಣದಿಂದ ಮೂಡಿರುವುದಿಲ್ಲ. ಜಾಗತೀಕರಣದ ಸಿದ್ಧಾಂತದಡಿ ಎರಡೂ ಒಂದೇ ಮಾದರಿಯಾಗಿ ಬಿಂಬಿಸಲ್ಪಡುತ್ತವೆ. ವಿಯೆಟ್ನಾಂಅನ್ನು ಅಮೆರಿಕಾ ಆಕ್ರಮಣ ಮಾಡಹೊರಟಾಗ ಭಾರತದ ಮಾಧ್ಯಮಗಳು ಆಕ್ರಮಣಕಾರಿ ರಾಷ್ಟ್ರದ ಮಾಧ್ಯಮಗಳ ಪರಿಭಾಷೆ ಯನ್ನು ಬಳಸುತ್ತಿರಲಿಲ್ಲ; ಭಾರತದ ಬಹುತೇಕ ಮಾಧ್ಯಮಗಳು ವಿಯೆಟ್ನಾಂ ವಿಮೋಚನಾ ಹೋರಾಟದ ಭಾಷೆಯನ್ನೇ ಬಳಸುತ್ತಿದ್ದವು. ಹಿಂದೆ ಫಿಡೆಲ್ ಕ್ಯಾಸ್ಟ್ರೋ ಅವರನ್ನು ಭಾರತದ ಮಾಧ್ಯಮಗಳಲ್ಲಿ ''ಸರ್ವಾಧಿಕಾರಿ ಕ್ಯಾಸ್ಟ್ರೋ'' ಎನ್ನುತ್ತಿರಲಿಲ್ಲ; ''ಕ್ರಾಂತಿಕಾರಿ ಕ್ಯಾಸ್ಟ್ರೋ'' ಎನ್ನುತ್ತಿದ್ದುವು. ಆದರೆ ಇಂದಿನ ಎಷ್ಟೋ ಪತ್ರಿಕೆಗಳು ಅವರನ್ನು ಅಮೆರಿಕಾದ ಭಾಷೆಯಲ್ಲಿ ಚಿತ್ರಿಸುತ್ತವೆ. ಇದು ಜಾಗತೀಕರಣದ ಹಿನ್ನೆಲೆಯಲ್ಲಿ ಸೃಷ್ಟಿಯಾಗಿರುವ ಚಿತ್ತವೃತ್ತಿ. ಏಕೆಂದರೆ, ಈಗ ಪ್ರಪಂಚವನ್ನು ನೋಡುವುದು ಅಮೆರಿಕಾದ ಕಣ್ಣುಗಳ ಹಾಗೂ ಪ್ರಜ್ಞೆಯ ಸಹಾಯದಿಂದ. ಬಂಗ್ಲಾದೇಶದ ವಿಮೋಚನಾ ಸಮರದ ಸಂದರ್ಭದಲ್ಲಿ ಭಾರತವು ತಾಳಿದ ನಿಲುವನ್ನು, ಇಂದು ಇರಾನಿನ ಸಂದರ್ಭದಲ್ಲಿ ಭಾರತ ಅಂತರರಾಷ್ಟ್ರೀಯ ಪರಮಾಣು ಆಯೋಗದ ಸಭೆಯಲ್ಲಿ ಮತ ಚಲಾಯಿಸಿದ್ದರ ಜೊತೆ ತುಲನೆ ಮಾಡಿದರೆ ನಮ್ಮ ದೇಶದ ನೀತಿ ಎತ್ತ ಸಾಗುತ್ತಿದೆ ಎಂಬುದು ವಿಶದವಾಗಿ ತಿಳಿಯುತ್ತದೆ. ಆರ್ಥಿಕವಾಗಿ ಜಾಗತೀಕರಣದ ಸೂತ್ರಗಳಿಗೆ ಜೋತು ಬಿದ್ದಾಗ ಇಂತಹ ಬೆಳವಣಿಗೆಗಳು ಅನಿವಾರ್ಯ. ಆ ರೀತಿಯಲ್ಲಿ ಪರಾವಲಂಬನೆಯತ್ತ ದೇಶವು ಸಾಗುತ್ತಿರುವಾಗ ಮಾಧ್ಯಮಗಳು ಅದಕ್ಕೆ ತುತ್ತೂರಿ ಊದುವ ಕೆಲಸವನ್ನು ಮಾಡಿದರೆ ಅವು ನಿರರ್ಥಕ. ಜನಪರವಾದ ಭಾವನೆ-ಚಿಂತನೆಗಳಿಗೆ ಅಭಿವ್ಯಕ್ತಿ ನೀಡುವ ಕೆಲಸವು ಮಾಧ್ಯಮಗಳಿಗೆ ಶ್ರೇಷ್ಠವಾದ್ದು. ಅದು ಮಹತ್ವದ ಜವಾಬ್ದಾರಿ ಕೂಡ. ಅದನ್ನು ಮಾಡದೆ, ಅನುಕೂಲಕ್ಕೆ ತಕ್ಕಂತೆ ''ಮಾಧ್ಯಮಗಳ ಸ್ವಾತಂತ್ರ್ಯ''ದ ಬಗ್ಗೆ ಕಹಳೆ ಊದುವುದು ಸ್ವಪ್ರತಿಷ್ಠೆಯ ರಕ್ಷಣೆಯ ಸೂಚನೆ ಆಗುತ್ತದೆಯೇ ವಿನಾ ಮೌಲ್ಯಯುತವಾದ ಅಚಲ ನಿಲುವಾಗುವುದಿಲ್ಲ.

ಒಂದು ನಿದರ್ಶನವು ನಮಗೆ ದಾರಿದೀಪವಾಗಬಹುದು: ಹೈದರಾಬಾದಿನಲ್ಲಿ ರಾಮೋಜಿರಾವ್ ಅವರ ಸ್ವಾತಂತ್ರ್ಯಕ್ಕಾಗಿ ದಿಟ್ಟ ಹೋರಾಟಕ್ಕೆ ಸಿದ್ಧವಾಗುವ ಮಾಧ್ಯಮಗಳು ಮಂಗಳೂರಿನಲ್ಲಿ ಬಿ. ವಿ. ಸೀತಾರಾಂ ಮತ್ತು ರೋಹಿಣಿ ಮೂರ್ಖ ಕಾರಣಗಳಿಗಾಗಿ ಬಂಧಿತರಾಗಿ ಕಾರಾಗೃಹಕ್ಕೆ ತಳ್ಳಲ್ಪಟ್ಟಾಗ ಒಂದು ರೀತಿಯ ಮೌನಕ್ಕೆ ಶರಣಾಗುವುದು ಅಥವಾ ಪೇಲವವಾಗಿ ಪ್ರತಿಕ್ರಿಯಿಸುವುದು ಏಕೆ ? ಜಾಗತೀಕರಣವು ಸಾಮಾಜಿಕ ವಿಮರ್ಶೆಗಳನ್ನು ಸ್ವಾಗತಿಸುವುದಿಲ್ಲ. ಆದರೆ ಹಣಕಾಸಿನ ವ್ಯವಹಾರದಲ್ಲಿ 'ಅದ್ಭುತ' ಸಾಹಸಗಳನ್ನು ಸ್ವಾಗತಿಸುತ್ತದೆ ಮತ್ತು ಘೋಷಿಸುತ್ತದೆ. ದೇಶದ ಆರೋಗ್ಯದ ದೃಷ್ಟಿಯಿಂದ ಮಾಧ್ಯಮಗಳು ಪರ್ಯಾಯ ಮಾರ್ಗದಲ್ಲಿ ಚಲಿಸಬೇಕಾದ್ದು ಇಂದಿನ ತುರ್ತು ಅವಶ್ಯಕತೆಯಾಗಿದೆ.

*ಸೌಜನ್ಯ : ಕರ್ನಾಟಕ ಮಾಧ್ಯಮ ಅಕಾಡೆಮಿ ಪ್ರಕಟಿಸಿದ 'ಸಂವಹನ - ೨೦೦೬'*

---

ಜಿ. ರಾಮಕೃಷ್ಣ,

# ನೇಕಾರನ ಹಾಡು

ನಂದಗುಡಿಯಲ್ಲಾಗಲೀ, ನಂದೀಗ್ರಾಮದಲ್ಲಾಗಲೀ ನಡೆಯುತ್ತಿರುವ ಘಟನೆ ಗೌರವ ತರುವಂಥದ್ದಲ್ಲ. ಕೃಷಿಯನ್ನೇ ನಂಬಿದ ರೈತರು ಬೆಳೆದ ಬೆಳೆಗೆ ಬೆಲೆಯು ದೊರಕದೇ ಕಂಗಾಲಾಗಿರುವ ಸಂದರ್ಭದಲ್ಲಿ ದೇಶದ ಕೃಷಿ ಮಾರುಕಟ್ಟೆಯನ್ನು ಬಲಪಡಿಸುವ ಅಗತ್ಯವಿದೆ. ಇದೂ ಒಂದು ಕಾರಣವಾಗಿ ರೈತ ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದಾನೆ. ರೈತನ ಮಕ್ಕಳು ಬದುಕಿಗಾಗಿ ಪಟ್ಟಣಕ್ಕೆ ಬಂದು ಕೂಲಿಗಳಾಗಿ ಶೋಷಣೆಗೊಳಗಾಗುತ್ತಿದ್ದಾರೆ. ರೈತರ ಸಂಖ್ಯೆಯೇ ಕಡಿಮೆಯಾಗುತ್ತಿರುವ ಈ ಸಮಯದಲ್ಲಿ – ಭೂಮಿಯನ್ನು ನಂಬಿ ಬದುಕುವುದು ದುಸ್ತರವಾಗಿರುವ ಇಂದಿನ ಸಂದರ್ಭದಲ್ಲಿ ಕೃಷಿಯ ಅಭಿವೃದ್ಧಿ ಯೋಜನೆಗಳನ್ನು ಹಮ್ಮಿಕೊಳ್ಳುವ ಬದಲು ವಿಶೇಷ ಆರ್ಥಿಕ ವಲಯ ಎಂಬ ಹೆಸರಿನಲ್ಲಿ ರಾಜಧಾನಿಯ ಸುತ್ತಮುತ್ತಲ ಕೃಷಿ ಆಧಾರಿತ ನೆಲವನ್ನು ರೈತರಿಂದ ಕಿತ್ತು ಅಭಿವೃದ್ಧಿಯ ಹರಿಕಾರರೆಂದು ಕರೆದುಕೊಳ್ಳದ ಹಣವಂತರು ಮತ್ತು ವಿದೇಶೀ ಮೂಲದವರಿಗೆ ಭೂಮಿಯನ್ನು ಕೊಟ್ಟುಬಿಡುವ ಈ ಕೃತ್ಯವನ್ನು ನೋಡಿದರೆ ಬಲ್ಲಾಳಸೇನನ ಭೋಜಪ್ರಬಂಧದ ಕಥೆಯೊಂದು ಇಲ್ಲಿ ನೆನಪಿಗೆ ಬರುತ್ತದೆ.




ಧಾರಾ ನಗರದ ಭೋಜರಾಜನು ವಿದ್ವದ್ವತ್ಸಲ ರಾಜನಾಗಿದ್ದು, ತನ್ನ ರಾಜಧಾನಿಯಲ್ಲಿ ವಿದ್ವಾಂಸರು ಮಾತ್ರ ವಾಸಿಸಬೇಕು ; ದಡ್ಡರು, ಮೂರ್ಖರು ಇರಬಾರದೆಂದು ಡಂಗುರ ಸಾರಿಸಿ ದಡ್ಡರನ್ನೆಲ್ಲಾ ಊರಾಚೆ ಅಟ್ಟಿದನು. ದೇಶದ ಎಲ್ಲ ವಿದ್ವಾಂಸರೂ ತನ್ನ ರಾಜಧಾನಿಯಲ್ಲಿ ಇರಬೇಕೆಂದು ಬಯಸಿದನು. ಒಮ್ಮೆ ಭೋಜರಾಜನು ತನ್ನ ಒಡ್ಡೋಲಗದಲ್ಲಿ ಸಮಸ್ತ ವಿದ್ವಾಂಸರೊಡನೆ ಕವಿತ್ವ, ವಿದ್ವತ್ತು ಕುರಿತ ಗಾಢ ಚರ್ಚೆಯಲ್ಲಿರುವಾಗ ದಕ್ಷಿಣ ದೇಶದಿಂದ ಒಬ್ಬ ವಿದ್ವಾಂಸನು ಬಂದು ಅಪ್ಪಣೆ ಕೇಳಿ ಗೋಷ್ಠಿಯನ್ನು ಪ್ರವೇಶಿಸಿ ರಾಜನನ್ನು ಕುರಿತು ಚಮತ್ಕಾರದ ಕವಿತೆಯನ್ನು ಹೇಳಿ ಅಚ್ಚರಿ ಹುಟ್ಟಿಸಿದನು. ಅವನು ತನ್ನನ್ನು ಹೊಗಳಿ ಅಟ್ಟಕ್ಕೆ ಏರಿಸಿದ ಚಮತ್ಕಾರಯುಕ್ತ ಕವಿತೆಯನ್ನು ಕೇಳಿ – ದೇವರು ಭಕ್ತನೆದುರು ಪ್ರತ್ಯಕ್ಷವಾಗಿ ಏನು ವರ ಬೇಕು ಕೇಳು ಎಂದಂತೆ – 'ನಿನಗೆ ಇಷ್ಟಬಂದದ್ದನ್ನು ಬೇಡಿಕೋ' ಎಂದನಂತೆ ರಾಜ. ಆ ವಿದ್ವಾಂಸನು ತಾನು ಇನ್ನು ಮುಂದೆ ಈ ರಾಜಧಾನಿಯಲ್ಲಿಯೇ ವಾಸಿಸಲು ಬಯಸಿದ್ದೇನೆ, ಅದಕ್ಕಾಗಿ ಕೃಪೆಮಾಡಿ ಅವಕಾಶವನ್ನು ಕೊಡಬೇಕು ಎಂದು ತನ್ನ ಬೇಡಿಕೆಯನ್ನಿಟ್ಟನು.

ವಿದ್ವಾಂಸರು ಮಾತ್ರ ತನ್ನ ರಾಜಧಾನಿಯಲ್ಲಿರಬೇಕೆಂದು ಬಯಸಿದ ರಾಜನಿಗೆ ಇದರಿಂದ ಬಹಳ ಸಂತೋಷವಾಗಿ ತನ್ನ ಭಟರನ್ನು ಕೂಡಲೇ ಕರೆಸಿ ಊರಲ್ಲಿರುವ ಯಾವುದಾದರೂ ಖಾಲಿ ಮನೆಯೊಂದನ್ನು ತೋರಿಸಿ ಅಲ್ಲಿ ವಿದ್ವಾಂಸನು ವಾಸಿಸಲು ಎಲ್ಲ ಅನುಕೂಲಗಳನ್ನೂ ಮಾಡಿಕೊಡಿ ಎಂದು ಆಜ್ಞೆ ಇತ್ತನು. ಭಟರು ತ್ವರೆ ಮಾಡಿ ಮನೆಯನ್ನು ಹುಡುಕಲು ಆರಂಭಿಸಿದರು. ದುರದೃಷ್ಟವಶಾತ್ ರಾಜಧಾನಿಯಲ್ಲಿ ಒಂದು ಮನೆಯೂ ಖಾಲಿ ಇರಲಿಲ್ಲ. ವಿಷಯವನ್ನು ಭಟರು ರಾಜನ ಬಳಿ ತಿಳಿಸಿ ಹೇಳಿದರು. ಆ ಕೂಡಲೇ ರಾಜನು ರಾಜಧಾನಿಯಲ್ಲಿರುವ ದಡ್ಡ ನಿವಾಸಿಯನ್ನು ತೆರವು ಮಾಡಿಸಿ ಆ ಮನೆಯನ್ನು ವಿದ್ವಾಂಸನಿಗೆ ಬಿಟ್ಟುಕೊಡಿ ಎಂದು ಆಜ್ಞೆಯಿತ್ತನು. ಭಟರು ಕಷ್ಟಪಟ್ಟು ಹುಡುಕಿದರೂ ಸಹ ರಾಜಧಾನಿಯಲ್ಲಿ ಒಬ್ಬನೂ ದಡ್ಡನಿರಲಿಲ್ಲ. ಇರುವವರಲ್ಲೇ ದಡ್ಡನನ್ನು ಹುಡುಕಿಕೊಂಡು ಹೋಗಿ ವೃತ್ತಿಯಲ್ಲಿ ನೇಕಾರನಾದ ಒಬ್ಬನನ್ನು ಗುರುತಿಸಿ, ಮನೆ ಖಾಲಿ ಮಾಡಿ ಊರು ಬಿಟ್ಟು ಹೋಗಲು ಮಹಾರಾಜರು ಆಜ್ಞೆಮಾಡಿದ್ದಾರೆ ಎಂದು ಅವನಿಗೆ ತಿಳಿಸಿ, ತಾವೇ ಅವನ ಮನೆಯನ್ನು ಖಾಲಿ ಮಾಡತೊಡಗಿದರು. ಕಂಗಾಲಾದ ನೇಕಾರನು ನೇರವಾಗಿ ರಾಜನ ಆಸ್ಥಾನಕ್ಕೆ ಓಡುತ್ತಾ ಹೋಗಿ, ಈ ರಾಜಧಾನಿಯ ಮೂಲ ನಿವಾಸಿಯಾದ ತನಗೆ ಈ ಬಗೆಯ ಶಿಕ್ಷೆ ವಿಧಿಸಿದ ಕಾರಣವಾದರೂ ಏನು ಎಂಬುದಾಗಿ ದುಃಖಿಸುತ್ತಾ ರಾಜನಲ್ಲಿ ನಿವೇದಿಸಿಕೊಂಡನು. ಎಣಿಸಿದಂತೆಯೇ ರಾಜನು ನುಡಿದನು. 'ನೀನು ಕವಿಯಲ್ಲದಿರುವುದೇ ನಿನ್ನನ್ನು ಊರಿನಾಚೆ ಕಳಿಸುತ್ತಿರುವ ಕಾರಣವು' ಎಂದನು.

ರಾಜನ ದಡ್ಡತನ ತಿಳಿದ ನೇಕಾರನು ಕೋಪದಿಂದ ಆ ಕ್ಷಣದಲ್ಲೇ ತನ್ನ ವೃತ್ತಿ ಸಾಮರ್ಥ್ಯವನ್ನು ಕುರಿತು ಪದ್ಯದ ಮೂಲಕ ಹೇಳಿದನು:

ಬರೆದರೆ ಪದ್ಯ ನಾನು ಶಬ್ದಗಳು ಗರಿಗುಡದೇನು?  
ಯತ್ನಿಸುವೆ, ಚಿತ್ರಿಸುವೆ, ಉತ್ತಮವ ಹೊಳೆಯಿಸುವೆ  
ಮಣಿಗಳೊತ್ತಿದ ಪಾದಪೀಠದಿ ಕಾಲನಿಟ್ಟ ಸಾಹಸಿ ಕೇಳು  
ನನ್ನ ನೇಯ್ಗೆ ಹಗ್ಗವನೆಳೆದು ಕವಿತೆ ಮೂಡಿಸುವೆ ನಾನು.

ಆಗ ರಾಜನು ನೇಕಾರನ ಕವಿತ್ವಕ್ಕೆ ಮೆಚ್ಚಿ ಅವನ ಪದ್ಯದಲ್ಲಿನ ಕಾವ್ಯಸೌಂದರ್ಯವನ್ನು ಕುರಿತು ವಿಮರ್ಶೆ ಮಾಡಲು ತೊಡಗಿದನು. ಆಗ ಕೋಪಗೊಂಡ ನೇಕಾರನು, 'ರಾಜನೇ, ರಾಜಧರ್ಮವೆಂಬುದು ವಿದ್ವದ್ಧರ್ಮಕ್ಕಿಂತ ಮಿಗಿಲಾದುದು. ಮೊದಲು ರಾಜನಾಗು ನಂತರ ವಿದ್ವದ್ವಂದ್ಯನಾಗು, ಕವಿತ್ವ ಮತ್ತು ವಿದ್ವತ್ತುಗಳು ಉತ್ಪನ್ನಗಳಲ್ಲ' ಎಂದು ಇನ್ನೊಂದು ಪದ್ಯವನ್ನು ಹೇಳಿ ಮೂದಲಿಸಿದನು.

*ಹಠಬಿದ್ದು ಪುಸ್ತಕದಿ ಮಸ್ತಕವನಿರಿಸಿದರೆ ಒಲಿಯುವುದಿಲ್ಲವದು*  
*ಮಠದಿ ಗುರುಗಳು ಅರೆದು ತುಂಬಿದರೆ ಚಿಗುರಿಸಲೊಲ್ಲದದು*  
*ಕಮಲಿನಿಯ ಕೊಳದೊಳಗೆ ದಿನಪೂರ್ತಿ ಮುಳುಗಿರುವ*  
*ಕಾಡೆಮ್ಮೆಗಂಟುವುದು ಬರಿಯ ಕೆಸರೋ ಕಮಲಿನಿಯ ಗಮಲೋ ?*

ಆಗ ರಾಜನು ಆನಂದದಿಂದ ನೇಕಾರನನ್ನು ಗೌರವಿಸಿ ಅವನಿಗೆ ಅಕ್ಷರ ಲಕ್ಷ ವರಹಗಳನ್ನು ಕೊಟ್ಟು ಸತ್ಕರಿಸಿದನು.

ಈ ಕಥೆಯಲ್ಲಿ ನೇಕಾರನು ಸಮಾಜದಲ್ಲಿ ಕವಿಗಳಂತೆಯೇ ಕುಶಲಕರ್ಮಿಗಳ ಅಗತ್ಯವಿದೆ ಎಂದು ರಾಜನಿಗೆ ತೋರಿಸಿಕೊಟ್ಟನು. ಆದರೆ ನಮ್ಮನ್ನಾಳುವವರಿಗೆ ರೈತನ ಅಗತ್ಯವನ್ನು ಮನವರಿಕೆ ಮಾಡಿಕೊಡುವವರಾರು ?

**ಹೆಚ್. ವಿ. ವೇಣುಗೋಪಾಲ್**  
ಮುಖ್ಯಸ್ಥರು, ಸಂಸ್ಕೃತ ವಿಭಾಗ, ನ್ಯಾಷನಲ್ ಪದವಿ ಕಾಲೇಜು, ಬಸವನಗುಡಿ, ಬೆಂಗಳೂರು - ೪

## ನವಕರ್ನಾಟಕ ಪ್ರಕಾಶನದ

## ವಿಶೇಷ ಕೊಡುಗೆ

## 2007 ಡಿಸೆಂಬರ್‌ನಲ್ಲಿ

## ಲೋಕಾರ್ಪಣೆ




### ನೊಬೆಲ್ ಪುರಸ್ಕೃತರು

**ಸಮಗ್ರ ಮಾಹಿತಿ ಕೋಶ**

ರಚನೆ : ಸಿ. ಆರ್. ಕೃಷ್ಣರಾವ್

ಡೆಮಿ ¼ ಆಕಾರದ 300 ಪುಟಗಳು

**ಪ್ರತಿಯೊಂದು ಮನೆ, ಶಾಲಾ - ಕಾಲೇಜು ಗ್ರಂಥಾಲಯದಲ್ಲಿ ಇರಲೇಬೇಕಾದ ಉಪಯುಕ್ತ ಕೃತಿ**

ಮುಖಬೆಲೆ ರೂ. 400
ಪ್ರಕಟಣಪೂರ್ವ ರಿಯಾಯಿತಿ
ಬೆಲೆ ರೂ. 280 ಮಾತ್ರ

ಪ್ರಾರಂಭದಿಂದ ಇಲ್ಲಿಯವರೆಗೆ ವಿಶ್ವಶಾಂತಿ, ಸಾಹಿತ್ಯ, ಭೌತ ವಿಜ್ಞಾನ, ರಸಾಯನ ವಿಜ್ಞಾನ, ವೈದ್ಯ ವಿಜ್ಞಾನ ಮತ್ತು ಅರ್ಥಶಾಸ್ತ್ರ ಕ್ಷೇತ್ರಗಳಿಗಾಗಿ ಪ್ರಶಸ್ತಿ ಪಡೆದ 760ಕ್ಕೂ ಹೆಚ್ಚಿನ ಗಣ್ಯರ ಚಿತ್ರಗಳ ಸಹಿತ ಅವರ ಬದುಕು ಸಾಧನೆಗಳ ಸಮಗ್ರ ಮಾಹಿತಿ ಕೋಶ

*ಅಂಚೆ ವೆಚ್ಚ ರೂ. 20 ಸೇರಿಸಿ ಒಟ್ಟು ರೂ. 300ರ ಡಿ.ಡಿ. ಅಥವಾ ಎಂ.ಒ. ಕಳಿಸಿ ನಿಮ್ಮ ಹೆಸರನ್ನು ಕೂಡಲೇ ನೋಂದಾಯಿಸಿಕೊಳ್ಳಿ*



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**

11, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ 5159, ಕುಮಾರ ಪಾರ್ಕ್ ಪೂರ್ವ
ಬೆಂಗಳೂರು - 560 001. ಫೋನ್ : 30578022, 22203580 ಫ್ಯಾಕ್ಸ್ : 30578023
e-mail : navakarnataka@vsnl.com web : www.navakarnatakabooks.com

ಶಾಖೆಗಳು : ಬೆಂಗಳೂರು ✆ 22251382 :: ಮಂಗಳೂರು ✆ 2441016 :: ಮೈಸೂರು ✆ 2424094 :: ಗುಲ್ಬರ್ಗಾ ✆ 224302

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. G. Ramakrishna

